ಪೊನ್ನನ

# ಶಾಂತಿಪುರಾಣ ಸಂಗ್ರಹ

ಸಂಪಾದಕರು

ಡಾ. ಎಸ್. ವಿದ್ಯಾಶಂಕರ



ಪ್ರಿಯದರ್ಶಿನಿ ಪ್ರಕಾಶನ
ಬೆಂಗಳೂರು.

# ಶಾಂತಿಪುರಾಣ ಸಂಗ್ರಹ

ಸಂಪಾದಕರು
ಡಾ. ಎಸ್. ವಿದ್ಯಾಶಂಕರ

ಪ್ರಿಯದರ್ಶಿನಿ ಪ್ರಕಾಶನ
14, ಮೂರನೇ ಬ್ಲಾಕ್, ಕೆ.ಪಿ.ವೆಸ್ಟ್,
ಬೆಂಗಳೂರು-20.

SHANTHIPURANA SANGRAHA: Ed. by:
Dr. S. Vidyashankar, Lecturer, centre of kannada studies, Jnanabharathi, Bangalore-560056, Pub: Priyadarshini Prakashana, 14, 3rd block, K. P. West Bangalore-560020





First Edition: 1974

Price: 8-00



Printed at:
Lotus Printers, Rajajinagar, Bangalore-560010

# ಮುನ್ನುಡಿ

ನಮ್ಮ ಪ್ರಾಚೀನ ಕಾವ್ಯಗಳ ಸಂಗ್ರಹಗಳನ್ನು ಸಂಪಾದಿಸಿ ಪ್ರಕಟಿಸುವ ಕಾರ್ಯವು ಹಲವಾರು ವರ್ಷಗಳಿಂದ ನಡೆದುಬಂದಿದೆ. ಈ ಸಂಗ್ರಹಗಳಿಂದ ಮರ್ಯಾದಿತ ಕಾಲಾವಧಿಯಲ್ಲಿ ವ್ಯಾಸಂಗಮಾಡುವ ವಿದ್ಯಾರ್ಥಿಗಳಿಗೆ ಅನುಕೂಲವಾಗುವುದಲ್ಲದೆ ಅವರಿಗೂ ಇತರರಿಗೂ ಆಯಾ ಕಾವ್ಯಗಳ ಸಾರಸರ್ವಸ್ವವು ಲಭಿಸುತ್ತದೆ. ವ್ಯಾಸಂಗಕ್ಕೆ ನೆರವಾಗುವ ಮುನ್ನುಡಿ, ಅರ್ಥಕೋಶ ಮುಂತಾದ ಸಹಾಯಕ ಸಾಮಗ್ರಿಯೂ ದೊರೆಯುತ್ತದೆ. ಇದೇ ರೀತಿಯಲ್ಲಿ ಡಾ. ವಿದ್ಯಾಶಂಕರ ಅವರು ಶಾಂತಿಪುರಾಣದ ಸಂಗ್ರಹವನ್ನು ಮೊದಲನೆಯ ಸಲ ಸಂಪಾದಿಸಿ ಪ್ರಕಟಗೊಳಿಸುತ್ತಿದ್ದಾರೆ.

ಕವಿಚಕ್ರವರ್ತಿಗಳಲ್ಲಿ ಒಬ್ಬನೆಂದು ಪ್ರಖ್ಯಾತನಾದ ಪೊನ್ನನು ಎರಡು ದೊಡ್ಡ ಕೃತಿಗಳನ್ನು ರಚಿಸಿದ್ದರೂ ಅವುಗಳಲ್ಲಿ ಶಾಂತಿಪುರಾಣವೊಂದೇ ಉಪಲಬ್ಧವಾಗಿದೆ. ಅದರಲ್ಲಿ ಪಾಠಸಮಸ್ಯೆಗಳಿವೆ, ಅರ್ಥಸಮಸ್ಯೆಗಳಿವೆ. ಅವನ್ನೆಲ್ಲ ಪರಾಮರ್ಶಿಸಿ ತೃಪ್ತಿಕರವಾದ ಸಂಪಾದನೆಯ ಕಾರ್ಯಮಾಡುವುದೆಂದರೆ ತುಂಬ ಕಷ್ಟ. ಇಂಥ ಪರಿಸ್ಥಿತಿಯಲ್ಲಿ ಡಾ. ವಿದ್ಯಾಶಂಕರರು ಪರಿಶ್ರಮ ವಹಿಸಿ ಈ ಸಂಗ್ರಹವನ್ನು ಸಿದ್ಧಗೊಳಿಸಿದ್ದಾರೆ. ವಿಸ್ತಾರವಾದ ಪೀಠಿಕೆ ಮುಂತಾದ ಸಹಾಯಕ ಸಾಮಗ್ರಿಯನ್ನು ಒದವಿಸಿರುತ್ತಾರೆ. ಅದಕ್ಕಾಗಿ ಅವರನ್ನು ನಾನು ಹಾರ್ದಿಕವಾಗಿ ಅಭಿನಂದಿಸುತ್ತೇನೆ. ಈ ಸಂಗ್ರಹವು ಕನ್ನಡ ವಿದ್ಯಾರ್ಥಿಗಳಿಗೆ ಮತ್ತು ಅಧ್ಯಾಪಕರಿಗೆ ಉಪಯುಕ್ತವಾಗುವುದೆಂದು ಆಶಿಸುತ್ತೇನೆ.

ರಂ. ಶ್ರೀ. ಮುಗಳಿ

ದಿನಾಂಕ : ೧೦-೧೧-೧೯೭೪

## ನಾಲ್ಕು ಮಾತುಗಳು

ಕನ್ನಡ ಸಾಹಿತ್ಯದ ರತ್ನತ್ರಯರಲ್ಲಿ ನಡುವಿನವನಾದ ಪೊನ್ನನು ಪ್ರತಿಭಾವಂತ ಕವಿಯಾಗಿದ್ದರೂ ಪಂಪ-ರನ್ನರಷ್ಟು ಭಾಗ್ಯಶಾಲಿಯಾಗಲಿಲ್ಲ. ಕಾರಣ ನಮ್ಮ ಸಹೃದಯ ವಿಮರ್ಶಕರ ಅವಜ್ಞತೆ. ಶಾಂತಿಪುರಾಣ ಒಂದೇ ಲಭ್ಯವಾಗಿದ್ದು, ಉಳಿದವು ಕಾಲನ ಗರ್ಭದಲ್ಲಿ ಅಡಗಿರುವುದು ಪೊನ್ನನ ನಿಜವಾದ ಪ್ರತಿಭೆಯನ್ನು ಗುರುತಿಸಿ ಹೇಳಲು ಅಡ್ಡಿಯಾಗಿದೆ. ಈ ಮಾತಿನಲ್ಲಿ ಸ್ವಲ್ಪ ನಿಜವಿದೆ. ಶಾಂತಿಪುರಾಣ ಒಳ್ಳೆಯ ಕಾವ್ಯವಲ್ಲವೆ? ಮೆಚ್ಚುವ ಕಾವ್ಯಾಂಶಗಳು ಅದರಲ್ಲಿ ಇಲ್ಲವೆ? ಇವು ನನ್ನನ್ನು ಹಲವು ಬಾರಿ ಕಾಡಿದ ಪ್ರಶ್ನೆಗಳು. ಈ ಹಿನ್ನೆಲೆಯಲ್ಲಿ ನಡೆದ ಜಿಜ್ಞಾಸೆಯ ಫಲ ಈ ಶಾಂತಿಪುರಾಣ ಸಂಗ್ರಹ.

ಪೊನ್ನನಿಗೆ ಸಿಗಬೇಕಾಗಿದ್ದ ಸ್ಥಾನ-ಮಾನಗಳು ಬಗೆ ಮೆಚ್ಚುವಷ್ಟು ದೊರೆಯದಿದ್ದುದಕ್ಕೆ ಶಾಂತಿಪುರಾಣ ಇಂದು ನಮಗೆ ಓದಲು ಅಲಭ್ಯವೆಂಬ ಒಂದು ಕಾರಣವನ್ನು ನಾವು ಸುಲಭವಾಗಿ ತಳ್ಳಿಹಾಕುವಂತಿಲ್ಲ. ಶ್ರೀಯುತರಾದ ಎ. ವೆಂಕಟರಾವ್ ಮತ್ತು ಹೆಚ್. ಶೇಷಯ್ಯಂಗಾರ್‌ರವರು 1929ರಲ್ಲಿ ಪ್ರಕಟಿಸಿದ ಶಾಂತಿಪುರಾಣ ಈಗ ದೊರೆಯುತ್ತಿಲ್ಲ; ಮರುಮುದ್ರಣ ಯೋಗವನ್ನೂ ಕಾಣಲಿಲ್ಲ. ಪೊನ್ನನಂತಹ ಶ್ರೇಷ್ಠಕವಿಯ ಕೃತಿ ಈ ನಲವತ್ತೈದು ವರ್ಷಗಳಲ್ಲಿ ಮತ್ತೊಮ್ಮೆ ಪ್ರಕಟವಾಗಲಿಲ್ಲವೆಂಬ ಅಂಶ ಅರಿವಿಗೆ ಬಂದಾಗ ಕನ್ನಡಿಗರ ಔದಾಸೀನ್ಯದ ಬಗೆಗೆ ನಾಚಿಕೆಯಾಗುತ್ತದೆ. ಶಾಂತಿಪುರಾಣ ಸಂಗ್ರಹವನ್ನು ಹೊರತರುವುದರ ಮೂಲಕ ಇರುವ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ತುಂಬಲು ನಾನು ಪ್ರಯತ್ನಿಸಿರುವೆನು. ನಾನು ಸಂಗ್ರಹ ಸಿದ್ಧಮಾಡಿ, ಪ್ರಕಟಿಸಲು ಧನಸಹಾಯ ನೀಡುವಂತೆ ಕರ್ನಾಟಕ ಸರಕಾರದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರನ್ನು ಕೇಳಲು ಅವರು ಒಪ್ಪಿ ಪ್ರೋತ್ಸಾಹಿಸಿರುವರು. ಯೋಗ್ಯಬೆಲೆಯಲ್ಲಿ ಮುದ್ರಣಕಾಗದ ದೊರೆಯಲು ಶ್ರೀ ಮಾಣಿಕ್‌ಭಟ್‌ರವರು ತುಂಬಾ ಸಹಕರಿಸಿರುವರು. ಶಿಷ್ಯನ ಮೇಲೆ ಎರಕವಿಟ್ಟು ಆಶೀರ್ವಾದ ಪೂರ್ವಕವಾದ ಮುನ್ನುಡಿಯನ್ನು ಡಾ.ರಂ.ಶ್ರೀ. ಮುಗಳಿಯವರು ನೀಡಿರುವರು. ಅಚ್ಚುಕಟ್ಟಾಗಿ ಲೋಟಸ್ ಪ್ರೆಸ್‌ನ ಮಾಲೀಕರು ಮುದ್ರಿಸಿ ಉಪಕರಿಸಿರುವರು. ಇವರೆಲ್ಲರಿಗೂ ನನ್ನ ಪೂಜಲಮನದ ನಮನಗಳು. ಈ ಸಂಗ್ರಹವನ್ನು ಸಿದ್ಧಪಡಿಸುವಲ್ಲಿ ಶ್ರೀಯುತರಾದ ಎ. ವೆಂಕಟರಾವ್ ಮತ್ತು ಹೆಚ್. ಶೇಷಯ್ಯಂಗಾರ್‌ರವರು ಬಹಳ ಶ್ರಮವಹಿಸಿ ಸಂಪಾದಿಸಿರುವ 'ಶಾಂತಿಪುರಾಣ'ವನ್ನು ಆಧರಿಸಿರುವೆನು.

ಎಸ್. ವಿದ್ಯಾಶಂಕರ

# ಪೀಠಿಕೆ

ಕನ್ನಡ ಸಾಹಿತ್ಯದಲ್ಲ ಪ್ರಖ್ಯಾತರಾದ ರತ್ನತ್ರಯರಲ್ಲಿ ಪೊನ್ನ ನಡುವಿನವನು. ಈತ ಪೊನ್ನಂ, ಪೊನ್ನಿಗಂ, ಪುನ್ನಮಾರ್ಯ, ಸವಣ, ಕುರುಳ್ಗಳ ಸವಣ ಎಂಬೆಲ್ಲ ಹೆಸರುಗಳಿಂದಲೂ ಕವಿಚಕ್ರವರ್ತಿ, ಉಭಯಕವಿಚಕ್ರವರ್ತಿ, ಸರ್ವದೇವಕವೀಂದ್ರ, ಸೌಜನ್ಯಕಂದಾಂಕುರ ಎಂಬೆಲ್ಲ ಬಿರುದುಗಳಿಂದಲೂ ಪ್ರಖ್ಯಾತನಾಗಿರುವನು. ಪೊನ್ನ ತನ್ನ ಬಗ್ಗೆ, ಬಂಧುಬಾಂಧವರ ಬಗ್ಗೆ ಉಪಲಬ್ಧಕೃತಿಯಾದ ಶಾಂತಿಪುರಾಣದಲ್ಲಿ ಏನನ್ನೂ ಹೇಳಿಕೊಂಡಿಲ್ಲ. 'ಸವಣ'ನಾದ ಕವಿಯ ವಿರಕ್ತಿ ಆಶ್ಚರ್ಯವನ್ನುಂಟುಮಾಡುತ್ತದೆ. ಜೊತೆಗೆ ಪಂಪ ರನ್ನರಂಥಹ 'ಬಿಚ್ಚುಮನಸ್ಸಿನ' ಕವಿಗಳು ಕನ್ನಡಕ್ಕೆ ದೊರತಂತೆ ಪೊನ್ನನಂತಹ ವಿರಕ್ತಕವಿಗಳು ತೆರೆದಮನದಿಂದ ತಮ್ಮ ಬಗೆಗಿನ ವಿವರಗಳನ್ನು ಕೊಟ್ಟದ್ದರೆ ಸಾಹಿತ್ಯಚರಿತ್ರೆಯ ರಚನೆಗೆ ತುಂಬಾ ಅನುಕೂಲವಾಗುತ್ತಿತ್ತಲ್ಲಾ ಎಂಬ ಅನಿಸಿಕೆಯನ್ನೂ ಉಂಟುಮಾಡುತ್ತಥೆ. ಕುರುಳ್ಗಳ ಸವಣ[1] ನೆಂದು ತನ್ನನ್ನು ಸಂಬೋಧಿಸಿಕೊಂಡಿರುವುದನ್ನು ನೋಡಿದಾಗ ನಮ್ಮ ಕವಿ ಬರಿಯ ಬೋಳುಮಂಡೆಯ ಸವಣನಲ್ಲ ಕುರುಳುಗಳುಳ್ಳ ರಸಿಕನೆಂದೆನ್ನಿಸುತ್ತದೆ. ರನ್ನ ಶಾಂತಿಪುರಾಣವನ್ನು 'ಉಪಮಾತೀತ' ಪುರಾಣಗಳಲ್ಲಿ ಒಂದೆಂದು ಪರಿಗಣಿಸಿ ರತ್ನತ್ರಯರಾದ ಪಂಪ, ಪೊನ್ನ ಹಾಗೂ ತಾನು 'ಜಿನಸಮಯದೀಪಕ' ರೆಂದು ಅಜಿತಪುರಾಣದಲ್ಲಿ ಹೇಳಿರುವನು.[2] ಪಂಪ ಹಾಗೂ ಪೊನ್ನರು ರಟ್ಟರಾಜ್ಯದಲ್ಲಿ ಖ್ಯಾತರಾಗಿದ್ದ ವಿಷಯವನ್ನು ರನ್ನ ಅಜಿತಪುರಾಣದಲ್ಲಿ ಪ್ರಸ್ತಾಪಿಸಿರುವನು.[3] ಪೊನ್ನ ಸ್ವಕೀಯ ವಿವರಗಳನ್ನು ಸ್ವತಃ ಕೊಡದಿದ್ದರೂ 'ಶಾಂತಿಪುರಾಣ' ದಲ್ಲಿ ಕಂಡುಬರುವ ವಿವರಗಳಿಂದ ಅವನ ಬಗ್ಗೆ ನಾವು ಹೇಳಬಹುದಾಗಿದೆ.

---

1. ಶಾಂತಿಪು. 1.10, 11 ; 12.70.
2. ಅಜಿಪು. 12. 38.
3. ಧರಣಿಗೆ ನೆಗಟ್ದರ್ ಸಲೆ ರಟ್ಟರಾಜ್ಯದೊಳ್ ಮುನ್ನ ಪಂಪನುಂ ಪೊನ್ನಿಗನುಂ ಅಜಿಪು. 12. 42.

ಶಾಂತಿಪುರಾಣ, ಭುವನೈಕರಾಮಾಭ್ಯುದಯ, ಗತಪ್ರತ್ಯಾಗತ ಮತ್ತು ಜಿನಾಕ್ಷರಮಾಲೆ–ಇವು ಪೊನ್ನನಿಂದ ರಚಿತವಾದ ಕೃತಿಗಳು. ಶಾಂತಿಪುರಾಣವು 16ನೆಯ ತೀರ್ಥಂಕರನೂ 5ನೆಯ ಚಕ್ರವರ್ತಿಯೂ ಆದ ಶಾಂತಿನಾಥನ ಚರಿತ್ರೆ. ಹನ್ನೆರಡು ಆಶ್ವಾಸಗಳ ಈ ಚಂಪೂಕೃತಿ ಕವಿಯೇ ಹೇಳಿಕೊಂಡಿರುವಂತೆ ಪುರಾಣ ಚೂಡಾಮಣಿ[1]. ತುಂಬು ಅಭಿಮಾನ ಹಾಗೂ ವಿಶ್ವಾಸಗಳಿಂದ ಕವಿ ತನ್ನ ಕೃತಿಯನ್ನು "....ಬಿನ್ನಣದ ತೆರಳ್ಕೆಯ ಇಂಪಿನ ಒಳ್ಪಿನ ರಸಮುಂ ಭಿನ್ನರಸಂಗಳ ಸಮುಕಟ್ಟುಂ ನೆಟ್ಟನೆ ಮೆಱೆಗುಂ ಅಱಯೆ ಶಾಂತಿಪುರಾಣಂ" ಎಂದಿರುವನು[2]. ಭುವನೈಕರಾಮಾಭ್ಯುದಯವು ಕವಿಯೇ ಹೇಳುವಂತೆ 'ರಾಮಕಥೆ'[3]. ಇದು ಇನ್ನೂ ಲಭ್ಯವಾಗಿಲ್ಲ. ಭುವನೈಕರಾಮನೆಂದು ಖ್ಯಾತನಾದ ರಾಷ್ಟ್ರಕೂಟ 3ನೇ ಕೃಷ್ಣನನ್ನು ನಾಯಕನನ್ನಾಗಿ ಮಾಡಿಕೊಂಡು 'ತಗುಟ್ಟಿ' ಹೇಳಿದ ರಾಮಾಯಣದ ಕಥೆ ಇರಬೇಕು. ಕವಿ ತನ್ನ ಕೃತಿ ಬೆಲೆಯಿಂದ ಅಳೆಯಲಾಗದ್ದೆಂಬುದನ್ನು ಹೇಳುತ್ತಾ ಶಾಂತಿಪುರಾಣದಲ್ಲಿ[4]

> ವಿದಿತ ಭುವನೈಕರಾಮಾ
> ಭ್ಯುದಯಕ್ಕಂ ಬೆಲೆಗಮಾವುದಂತರಮಿಂತೀ
> ಪದಿನಾಲ್ಕುಂ ಭುವನಂಗಳ್
> ಪದಿನಾಲ್ಕಾಶ್ವಾಸರಚನೆಗಂ ಬೆಲೆಯಕ್ಕುಂ ||

ಎಂದಿರುವನು. ಶಾಂತಿಪುರಾಣ ಹಾಗೂ ಭುವನೈಕರಾಮಾಭ್ಯುದಯಗಳಿಂದ ಕವಿಗೆ 'ಲೋಕೋತ್ತರವಾದ ಲೌಕಿಕಪರಿಣತಿ' ಪ್ರಕಟವಾಯಿತೆಂಬುದು ಶಾಂತಿಪುರಾಣದಿಂದ ತಿಳಿದುಬರುತ್ತದೆ[5]. ಭುವನೈಕರಾಮಾಭ್ಯುದಯದ ಒಂದೂವರೆ ಪದ್ಯ ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿದ್ದು ಆ ಕಾಲಕ್ಕೆ ಈ ಕೃತಿ ಪ್ರಸಿದ್ಧವಾಗಿತ್ತೆಂಬುದಕ್ಕೆ ಇದು ನಿದರ್ಶನವಾಗಿದೆ.

---

1. ಶಾಂತಿಪು. 1.12 ; 1.36. ಮತ್ತು ಪ್ರತಿ ಆಶ್ವಾಸಾಂತ ಗದ್ಯ.
2. ಶಾಂತಿಪು. 12. 68.
3. ಶಾಂತಿಪು. 12. 65.
4. ಶಾಂತಿಪು. 12. 66.
5. ಶಾಂತಿಪು. 12. 65.

ಭುವನೈಕರಾಮಾಭ್ಯುದಯವು ರಾಮಾಯಣದ ಕಥಾವಸ್ತುವನ್ನೊಳಗೊಂಡ, ಸಮಕಾಲೀನ ಪ್ರಜ್ಞೆಯನ್ನು ಒಡಗೂಡಿಸಿಕೊಂಡ ಲೌಕಿಕ ಕಾವ್ಯವಾದದ್ದೇ ಆದರೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅದಕ್ಕೆ ವಿಶೇಷ ಬೆಲೆ ಪ್ರಾಪ್ತವಾಗುತ್ತದೆ. ಗತಪ್ರತ್ಯಾಗತವು ಸಂಸ್ಕೃತಭಾಷೆಯಲ್ಲಿದ್ದಿರಬಹುದೆಂದು ಕವಿಚರಿತ್ರಕಾರರು ಅಭಿಪ್ರಾಯಪಡುವರು[1]. ಈ ಕೃತಿಯ ಪ್ರಸ್ತಾಪವನ್ನು ಪೊನ್ನ ಶಾಂತಿಪುರಾಣದಲ್ಲಿ ಮಾಡಿರುವನು[2]. 'ಜಿನಾಕ್ಷರಮಾಲೆ' ಯು ಜಿನಸ್ತುತಿರೂಪವಾದ ಗ್ರಂಥ. ಇದರಲ್ಲಿ 39 ಕಂದ ಪದ್ಯಗಳಿದ್ದು, ಅಕಾರದಿಂದ ಳಕಾರದವರೆಗಿನ ಅಕ್ಷರಮಾಲೆಯನ್ನು ಜಿನಸ್ತವನದೊಳಗೆ ಹೇಳಿರುವನು[3]. ಶಾಂತಿಪುರಾಣದ ಹೊರತಾಗಿ ಪೊನ್ನನ ಉಳಿದ ಮೂರೂ ಕೃತಿಗಳು ಬೆಳಕುಕಂಡಿಲ್ಲ. ಭುವನೈಕರಾಮಾಭ್ಯುದಯ ಹಾಗೂ ಗತಪ್ರತ್ಯಾಗತಗಳು ಅನುಪಲಬ್ಧ ಕೃತಿಗಳಾಗಿವೆ. ಕವಿಚರಿತ್ರಕಾರರು ಪೊನ್ನನು ಒಂದು ಅಲಂಕಾರ ಕೃತಿಯನ್ನೂ ಬರೆದಿರುವುದಾಗಿ ಕೆಲವರು ಹೇಳುತ್ತಾರೆ ಎಂದಿರುವರು. ಅವರ ಅಭಿಪ್ರಾಯವನ್ನು ಪೋಷಿಸುವ ಆಧಾರಗಳು ಸಧ್ಯಕ್ಕೆ ನಮಗೆ ಲಭ್ಯವಿಲ್ಲ.

ಪೊನ್ನನ ಕಾಲವನ್ನು ಕವಿಚರಿತ್ರಕಾರರು ಸು.ಕ್ರಿ.ಶ. 950 ಎಂದಿರುವರು. ಪೊನ್ನ ಪಂಪನಿಗಿಂತ ಹಿಂದೆ ಇದ್ದಿರಬಹುದೆಂಬ ವಾದವನ್ನು ಶಾಂತಿಪುರಾಣದ ಸಂಪಾದಕರಾದ ಶ್ರೀ ಎ. ವೆಂಕಟರಾವ್ ಮತ್ತು ಹೆಚ್. ಶೇಷಯ್ಯಂಗಾರ್‌ರವರು ಮಂಡಿಸಿರುವರು (ಮುನ್ನುಡಿ ಪು. 24, 25). ಇವರು ಶಾಂತಿಪುರಾಣದ ರಚನಾಕಾಲವನ್ನು ಸು. 935 ಎಂದು ನಿರ್ಣಯಿಸಿರುವರು.

---

1. ಕ. ಕ. ಚ (ಪರಿಷತ್ ಮುದ್ರಣ, 1961) ಪು. 41.
2. ಸಂದ ಗತಪ್ರತ್ಯಾಗತ । ಮೆಂದೀಕೃತಿಯೊಂದಿವಕ್ಕೆ ಗೆಲ್ಗಂ ನೀಂ ಪೇ । ೞ್ದೊಂದೆರಡು ಮುಕ್ತಕಂ ಪೆೞ । ರೊಂದೊಂದಧ್ವಾನಮೇಂ ಕುರುಳ್ಗಳ ಸವಣಾ ॥ (12.74).
3. 'ಜಿನಾಕ್ಷರಮಾಲೆ'ಯ ಕೊನೆಯಲ್ಲಿ ಕವಿ ತನ್ನ ಗ್ರಂಥರಚನಾಕ್ರಮವನ್ನು ಹೀಗೆಂದು ಹೇಳಿಕೊಂಡಿರುವನು :
"ಶಾಂತಂಬರಂ ಬುಧರ್ ಪೊಗ । ೞ್ವಂತಕ್ಕರಮಾಲೆಯಂ ಜಿನಸ್ತವ
ದೊಳಗೋ । ರಂತಿರೆ ಪೇೞ್ದಂ ಹಿಸುಸೇ । ತ್ವಂತವರಂ ಪರೆವಿನಂ
ಕುರುಳ್ಗಳ ಸವಣಂ ॥

ಇವರ ವಿಚಿತ್ರವಾದವನ್ನೂ ಊಹೆಗಳನ್ನೂ ಒಪ್ಪಲಾಗದು. ಇವರ ಅಭಿಪ್ರಾಯಗಳು ಗಟ್ಟನೆಲದ ಮೇಲೆ ನಿಂತಿಲ್ಲ. ಉದಾಹರಣೆಗೆ ಪೊನ್ನ ಪೂರ್ವಕವಿಪ್ರಶಂಸೆ ಮಾಡುವಾಗ ಅಸಗನನ್ನು ನೆನೆದಿದ್ದು ಪಂಪನನ್ನು ನೆನೆಯದಿರುವುದನ್ನೇ ಪ್ರಸ್ತಾಪಿಸುತ್ತಾ ಅವರು "ಪೊನ್ನನು ಪೂರ್ವಕವಿ ಪ್ರಶಂಸೆಯಲ್ಲಿ ಅಸಗನನ್ನು ಹೆಸರೆತ್ತಿ ಹೇಳಿರುವುದರಿಂದ ಪಂಪನಿಂದೀಚೆಯವನಾಗಿದ್ದ ಪಕ್ಷದಲ್ಲಿ ಪಂಪನ ಹೆಸರನ್ನೂ ಹೇಳುತ್ತಿದ್ದನು. ಅವನ ಕಾಲಕ್ಕೆ ಹಿಂದಿದ್ದವರೊಳಗೆ ಅಥವಾ ಸಮಕಾಲಿಕರೊಳಗೆ ಅಸಗನಿದ್ದಿರಬೇಕು. ಮಿಕ್ಕವರು ಕವಿನಾಮಧಾರಕರಾಗಿದ್ದಿರಬೇಕಾದುದರಿಂದ ಪ್ರಸಿದ್ಧನಾದ ಪಂಪನು ಪೊನ್ನನ ಕಾಲಕ್ಕೆ ಹಿಂದೆ ಇದ್ದುದು ಸಂದೇಹಾಸ್ಪದವಾಗಿದೆ" ಎಂಬುದನ್ನೇ ನೋಡಬಹುದು. ಪೊನ್ನ ಪೂರ್ವಕವಿಗಳನ್ನು ಇತರ ಕವಿಗಳಂತೆ ಸ್ಮರಿಸದಿರುವುದು ಅವನ ಸ್ವಭಾವದತ್ತ ಅನುಪಮ ವಿರಕ್ತಿಗೆ ಸಾಕ್ಷಿ. ಅಸಗನನ್ನು ಪೊನ್ನ ನೆನೆದಿರುವನೆಂಬುದು ನಿಜವಾದುದಾದರೂ ಸಂಪಾದಕಮಾನ್ಯರು ಭಾವಿಸಿರುವಂತೆ ಪೂರ್ವಕವಿಗಳ ಸ್ಮರಣೆಯ ಥಾಟಿಯಲ್ಲಲ್ಲ. ತನ್ನ ಯೋಗ್ಯತೆಯನ್ನು ಮಿಗಿಲು ಮಾಡಿ ಹೇಳುವ ಅವಸರದಲ್ಲಿ ಪೊನ್ನ ತನ್ನ ಕಾಲಕ್ಕಾಗಲೇ ಜನಪ್ರಿಯನಾಗಿದ್ದ ಅಸಗನಿಗಿಂತ ತಾನು ನೂರ್ಮಡಿ ಮೇಲು ಎಂದು ಹೆಮ್ಮೆಯಿಂದ ಬೀಗಿ ಹೇಳಿಕೊಂಡಿರುವನು. ಸಂಪಾದಕಮಾನ್ಯರು ಪಂಪನಿಗಿಂತ ಪೊನ್ನ ಮೊದಲಿಗನು ಎಂದು ಅವಸರದ ತೀರ್ಮಾನ ಮಾಡುತ್ತಾ ಕೆಲವು ಕವಿಗಳು ಪೂರ್ವಕವಿಸ್ತವಾವಸರದಲ್ಲಿ ಮೊದಲು ಪೊನ್ನನ ಹೆಸರನ್ನು ಹೇಳಿ ಬಳಿಕ ಪಂಪನ ಹೆಸರನ್ನು ಹೇಳಿರುವುದನ್ನು ಪ್ರಸ್ತಾಪಿಸಿ, ತಮ್ಮ ತೀರ್ಮಾನಕ್ಕೆ ಇದನ್ನು ಆಧಾರವಾಗಿ ಕೊಟ್ಟಿರುವರು. ಪ್ರಾಸಪ್ರಿಯರಾದ ನಮ್ಮ ಕವಿಗಳು ಆದಿಪ್ರಾಸಕ್ಕಾಗಿ ಪೊನ್ನನ ಹೆಸರನ್ನು ಮೊದಲಿಗೆ ಹೇಳಿ ಅನಂತರ ಪಂಪನದನ್ನು ಹೇಳಿರಬಹುದೆಂಬುದನ್ನು ಎಲ್ಲರೂ ಒಪ್ಪುವರು. ಇದನ್ನೇ (ಪ್ರಾಸಕ್ಕಾಗಿ ಮಾಡಿಕೊಂಡ ಅನುಕೂಲ) ತಮ್ಮ ವಾದಕ್ಕೆ ಪುಷ್ಟಿಯಾಗಿ ಸ್ವೀಕರಿಸಿದರೆ ತಪ್ಪಾಗುತ್ತದೆ. ಪೊನ್ನ ರಾಷ್ಟ್ರಕೂಟ 3ನೇ ಕೃಷ್ಣನ ಆಸ್ಥಾನದಲ್ಲಿ ರಾಜಕವಿಯಾಗಿದ್ದನೆಂಬುದು ಪ್ರಸಿದ್ಧವಿರುವುದರಿಂದ, ಕವಿಚರಿತ್ರಕಾರರು ಕೊಡುವ ಕಾಲವನ್ನು (ಸು. 950) ಸಧ್ಯಕ್ಕೆ ಸ್ವೀಕರಿಸಿದರೆ ತಪ್ಪಾಗಲಾರದು.

ಹುಟ್ಟನಲ್ಲಿ ಜೈನನಾದ ಕವಿ ಪೊನ್ನ ಬದುಕಿನುದ್ದಕ್ಕೂ ವಿರಾಗಿಯಾಗಿ ಜೀವನ ನಡೆಸಿದವನು. ತನ್ನನ್ನು 'ಸವಣ' ನೆಂದು ಕರೆದುಕೊಳ್ಳುವುದರಲ್ಲಿ (ಶಾಂತಿಪು. 1.8) ಕವಿಗೆ ಹೆಮ್ಮೆ. ಹುಟ್ಟನಿಂದ ಪಡೆದ 'ಕಲ್ಕಿ' ಯಿಂದ ರೂಢಿಸಿಕೊಂಡ ಧರ್ಮಶ್ರದ್ಧೆಯನ್ನು ಪುರಾಣರಚನೆಯ ಮೂಲಕ ಪ್ರಕಟ ಪಡಿಸಿದನು. ತನ್ನ ನೆಚ್ಚಿನ ಧರ್ಮದ ಪ್ರಸಾರ ಪ್ರಚಾರಕ್ಕಾಗಿ ಶಾಂತಿಪುರಾಣ ವನ್ನು ಬರೆದನು. ತತ್ವವನ್ನು 'ಆದಿನಾಥ ಮತದಿಂದ' ಅರಿತ ಪೊನ್ನ ಕವಿತಾ ರಸವನ್ನು ಮತ್ತು ಸದರ್ಥವಾದಿತ್ವವನ್ನು ಇಂದ್ರಮುನಿಯಿಂದ ಅರಿತನು.[1] ಇಂದ್ರಮುನಿ ಪೊನ್ನನ ಗುರುಗಳಲ್ಲಿ ಒಬ್ಬರೆಂಬುದು ಮೇಲಿನ ಮಾತಿನಿಂದ ತಿಳಿದುಬರುತ್ತದೆ. ಪೊನ್ನ ತನ್ನ ಮತ್ತೊಬ್ಬ ಗುರುವಾದ ಜಿನಚಂದ್ರನನ್ನು ಶಾಂತಿಪುರಾಣದಲ್ಲಿ ವಿಶೇಷವಾಗಿ ನೆನೆದಿರುವನು. ಪೊನ್ನನಿಗೆ ಆಶ್ರಯವಿತ್ತವ ರಲ್ಲಿ ಒಬ್ಬರಾದ ಕಮ್ಮೆನಾಡಿನ ಪುಂಗನೂರಿನ ಮಲ್ಲಪ ಹಾಗೂ ಪುನ್ನಮಯ್ಯ ಸಹೋದರರು 'ಸಕಲಜ್ಞ'ನೂ 'ಕವಿಚಕ್ರವರ್ತಿ'ಯೂ ಆದ ಜಿನಚಂದ್ರೇಂದ್ರ (ಜಿನಚಂದ್ರ) ಗುರುಗಳಲ್ಲಿ ಶಾಂತಿನಾಥನ ಕಥೆಯನ್ನು ಹೇಳುವಂತೆ ಕೇಳಿ ಕೊಂಡರು- ಅವರ ಪ್ರಾರ್ಥನೆಯಂತೆ ಶಾಂತಿನಾಥನ ಕಥೆಯನ್ನು 'ಲೇಸಪ್ಪಿನಂ' 'ಸರ್ವದೇವಕವೀಂದ್ರ'ನಾದ ಪೊನ್ನನು ಬುಧರು ಪೊಗಳುವಂತೆ ಮಹೋತ್ಸಾ ಹದಿಂದ ಬರೆದನು.[2] ಮೇಲೆ ಹೇಳಿದ ಜಿನಚಂಪ್ರರು ಹತ್ತನೆಯ ಶತಮಾನದ ಪ್ರಖ್ಯಾತ ಗುರುಗಳಾಗಿದ್ದರೆಂಬುದು ಮಲ್ಲಪ ಹಾಗೂ ಪುನ್ನಮಯ್ಯ ಅವರ ಶಿಷ್ಯರಾಗಿದ್ದರೆಂಬುದರಿಂದಲೇ ವೇದ್ಯವಾಗುತ್ತದೆ. ಪೊನ್ನನ ತುಂಬು ಮನದ ಗುರುಸ್ತುತಿಯ ಪದ್ಯಗಳನ್ನು (1.25-36) ಓದಿದಾಗ ಜಿನಚಂದ್ರರ ಬಗ್ಗೆ ಪೂಜ್ಯಭಾವ ಮನದಲ್ಲಿ ಮೂಡುತ್ತದೆ. "ಎನಗೆ ಜಿನೇಂದ್ರಧರ್ಮಮೆ ಶರಣ್ ಮೊನೆಗೊಡ್ಡಿದ ಭೂರಿ ವೈರಿ ಸಾಧನಹರಣಂ ದಲೆಂದು ಜಿನಚಂದ್ರ ಮುನೀಂದ್ರರ ಪಾದಮೂಲದೊಳ್ ವಿನಮಿತರಾಗಿ ಕೊಂಡು ಕೊನೆವರ್ ಸಲೆ ವಾಣಿಯವಾಡಿಯೊಳ್ ಮಹಾವನಿಪರ್ ಅದೇನಗಣ್ಯಪುಣ್ಯಮೊ. ಭಾವಿಸೆ ತನ್ಮುನೀಂದ್ರನಾ"[3] ಎಂಬ ಶಾಂತಿಪುರಾಣದ ಪದ್ಯವನ್ನು ಓದಿದಾಗ ಜಿನ

1. ಶಾಂತಿಪು. 12.80.
2. ಶಾಂತಿಪು. 12.81.
3. ಶಾಂತಿಪು. 1.33.

ಚಂದ್ರರ ಬಗೆಗಿನ ಗೌರವ ಮುಗಿಲುಮುಟ್ಟುತ್ತದೆ. ಅಂದಿಗೆ ತುಂಬುಪ್ರಸಿದ್ಧ ರಾಗಿದ್ದ ಜಿನಚಂದ್ರರನ್ನು ಪೊನ್ನ ಗುರುವಾಗಿ ಮನ್ನಿಸಿದ್ದಷ್ಟೇ ಅಲ್ಲ ಜಿನ ಚಂದ್ರರೇ ತನ್ನೀ ಕೃತಿಗೆ ಪತಿ ಎಂದು ಮಿಗಿಲುಮಾಡಿ ಶಾಂತಿಪುರಾಣದಲ್ಲಿ ಹೇಳಿರುವನು.[1] ಅಂತೂ ಪೊನ್ನನಿಗೆ ಇಂದ್ರಮುನಿ ಹಾಗೂ ಜಿನಚಂದ್ರರೆಂಬ ಈರ್ವರು ಗುರುಗಳಿದ್ದರೆಂದೂ ಅವರಿಂದ ವಿಶೇಷವಾಗಿ ಆತ ಪ್ರಭಾವಿತನಾದ ನೆಂದೂ ಹೇಳಬಹುದು.

ಕನ್ನಡ ಸಾಹಿತ್ಯದ ಪ್ರಾರಂಭದ ದಿನಗಳನ್ನು ಗಮನಿಸಿದಾಗ ಅದು ಸಂಪದ್ಭರಿತವೂ ಸರ್ವತೋಮುಖವೂ ಆಗಿ ಬೆಳೆಯಲಿಕ್ಕೆ ರಾಜಾಶ್ರಯ ಬಹು ಮುಖ್ಯವಾಗಿತ್ತೆಂದು ಹೇಳಬಹುದು. ಹತ್ತನೆಯ ಶತಮಾನವನ್ನು ಕನ್ನಡ ಸಾಹಿತ್ಯದ ಅಭ್ಯಾಸದ ಅನುಕೂಲಕ್ಕಾಗಿ ವಿಭಜಿಸುವಾಗ-ಜೈನಯುಗವೆಂದು ಕರೆಯಲಾಗುವುದು. ಜೈನಧರ್ಮಕ್ಕೆ ಪ್ರೋತ್ಸಾಹಕೊಟ್ಟು ಅದು ಹಬ್ಬಲಿಕ್ಕೆ ಅವಕಾಶ ಮಾಡಿಕೊಟ್ಟವರು ಅಂದಿನ ರಾಜರುಗಳು. ರಾಜಾಶ್ರಯದ ತಣ್ಣೆಳ ಲಲ್ಲಿ ಕವಿಗಳು ಕಾವ್ಯಧರ್ಮ ಹಾಗೂ ಧರ್ಮಗಳ ಸಮನ್ವಯ ಸೂತ್ರವನ್ನು ಮುಂದಿಟ್ಟುಕೊಂಡು ಕೃತಿರಚನೆಗೆ ತೊಡಗಿದರು. ರಾಜನೇ ಕವಿಯಾಗಿ ಪಂಡಿತರಿಗೆ ಯೋಗ್ಯ ಪುರಸ್ಕಾರ ಮಾಡುವ ಒಂದು ಸತ್ಸಂಪ್ರದಾಯದ ಆರಂಭಿ ಗನಾದ 'ಕವಿರಾಜಮಾರ್ಗ'ಕಾರ. ಜೈನಧರ್ಮ ಹತ್ತನೆಯ ಶತಮಾನದಲ್ಲಿ ಅತ್ಯುಚ್ಚ ಸ್ಥಿತಿಯನ್ನು ಮುಟ್ಟಬೇಕಾಗಿದ್ದರೆ ಪಂಪ, ಚಾವುಂಡರಾಯರಂಥ ರಾಜಕೀಯ ಪ್ರಭಾವಶಾಲಿ ವ್ಯಕ್ತಿಗಳ ಕೈವಾಡ ಪ್ರಾಮುಖ್ಯವೆನ್ನಬಹುದು. ರಾಜ ಹಾಗೂ ಕವಿ ಇವರೀರ್ವರ ನಿಕಟವರ್ತಿತ್ವವೇ ಕನ್ನಡ ಸಾಹಿತ್ಯದ ಪುರೋಭಿವೃದ್ಧಿಗೆ ಮೂಲಕಾರಣ. ರಾಜನ ಮಿತ್ರನಷ್ಟೇ ಆಗಿರದೆ ಮಂತ್ರಿ, ದಂಡನಾಯಕ ಹೀಗೆ ರಾಜ್ಯದ 'ಕೀಲಿಕೈ'ಗಳೂ ಆದಾಗ ಸಾಹಿತ್ಯದ ಪುರೋ ಭಿವೃದ್ಧಿ ಒಂದು ವಿಧದಲ್ಲಾದರೆ ನೆಚ್ಚಿನ ಧರ್ಮ ಮತ್ತೊಂದು ವಿಧದಲ್ಲಿ ಪ್ರಭಾವಶಾಲೀ ಧರ್ಮವಾಗುವ ಅವಕಾಶ ಪ್ರಾಪ್ತವಾಯಿತು. ರಾಜ್ಯದ 'ಪ್ರಾಣಶಕ್ತಿ'ಗಳು ಜೈನರಾಗಿರುವುದರ ಮೂಲಕ ಹತ್ತನೆಯ ಶತಮಾನದಲ್ಲಿ ಜೈನಧರ್ಮ ಪ್ರಬಲ ಧರ್ಮವಾಗುವ ಸಾಧ್ಯತೆಯನ್ನು ಕಂಡುಕೊಂಡಿತು.

---

[1] ಶಾಂತಿಪು. 1.36.

ಜೈನಧರ್ಮದ ಪ್ರಚಾರಕ್ಕೆಂದೇ 'ಪುರಾಣ'ಗಳು ಸೃಷ್ಟಿಯಾದುವು. ಪರಧರ್ಮಗಳನ್ನು ಗೌರವಿಸುವ ಔದಾರ್ಯವನ್ನು ನಮ್ಮ ರಾಜರುಗಳು ಪ್ರಕಟಪಡಿಸಿದರಾದ ಕಾರಣ ಪಂಪ ಪೊನ್ನರು ಪರಧರ್ಮಸಹಿಷ್ಣುವಾದ ಅರಸನ ಪ್ರೀತಿ, ಔದಾರ್ಯ, ಮೆಚ್ಚುಗೆಗಳನ್ನು ಸ್ವಶಕ್ತಿಯಿಂದ ಸಂಪಾದಿಸಿದರು. ಪಂಪನಿಗೆ ಎರಡನೆಯ ಅರಿಕೇಸರಿ ಆಶ್ರಯವಿತ್ತು ಬೆಂಬಲಿಸಿದರೆ ಪೊನ್ನನಿಗೆ ರಾಷ್ಟ್ರಕೂಟ 3ನೇ ಕೃಷ್ಣ ಪ್ರೋತ್ಸಾಹ ನೀಡಿದನು. ಪಂಪ, ಅರಿಕೇಸರಿಯರ ಅವ್ಯಾಜ ಪ್ರೇಮದ ಕುರುಹಾಗಿ 'ವಿಕ್ರಮಾರ್ಜುನವಿಜಯ' ಒಡಮೂಡಿತು. ಆಶ್ರಯದಾತನನ್ನು ಭಾರತ, ರಾಮಾಯಣಗಳ ನಾಯಕರುಗಳಿಗೆ 'ತಗುಳ್ಚಿ' ಹೇಳುವ ಲೌಕಿಕ ಕಾವ್ಯಪರಂಪರೆಗೆ ಹಾದಿಯಾಯಿತು. ಪೊನ್ನ ತನ್ನ ಪ್ರತಿಭೆ ವಿದ್ವತ್ತುಗಳಿಂದ ರಾಜಮಾನ್ಯನಾಗಿ, 'ಉಭಯಕವಿಚಕ್ರವರ್ತಿ' ಎಂಬ ಬಿರುದಿಗೂ ಭಾಜನನಾಗಿ 'ಭುವನೈಕರಾಮ'ನೆಂದು ಖ್ಯಾತನಾದ ತನ್ನ ಆಶ್ರಯದಾತ 3ನೇ ಕೃಷ್ಣನನ್ನು ನಾಯಕನನ್ನಾಗಿ ಮಾಡಿಕೊಂಡು, ಪಂಪನಿಂದ ಸ್ಫೂರ್ತಿಪಡೆದು ಲೌಕಿಕ ಕೃತಿಯೊಂದನ್ನು–ಭುವನೈಕ ರಾಮಾಭ್ಯುದಯವೆಂಬ ರಾಮಕಥೆಯನ್ನು–ಬರೆದನು. ಅನುಪಲಬ್ಧವಾದ ಈ ಕೃತಿ ದೊರೆತರೆ ವಿಭಿನ್ನವಾದ ಚಾರಿತ್ರಿಕ ಕಾವ್ಯವೊಂದರ ಅಂತರಾಳದಿಂದ ಮಹತ್ತರವಾದ ಸಂಗತಿಗಳನ್ನು ಹೊರತೆಗೆಯಬಹುದೋ ಏನೋ? ಪೊನ್ನನು ಶಾಂತಿಪುರಾಣದಲ್ಲಿ ತನ್ನ 'ಕವಿತ್ವಕ್ಕೆ ಮೆಚ್ಚಿ' ಉಭಯ ಕವಿಚಕ್ರವರ್ತಿ ಎಂಬ ಬಿರುದನ್ನು ಅನುಗ್ರಹಿಸಿದ್ದರ ಪ್ರಸ್ತಾಪ ಮಾಡಿರುವನು.[1] ಜನ್ನ ಹಾಗೂ ಪಂಚತಂತ್ರದ ದುರ್ಗಸಿಂಹ ಪೊನ್ನನಿಗೆ ಕವಿಚಕ್ರವರ್ತಿ ಎಂಬ ಬಿರುದು ಕೃಷ್ಣನಿಂದ ಬಂದಿದ್ದುದನ್ನು ಹೇಳಿರುವರು. ಪೊನ್ನನಿಗೆ 3ನೇ ಕೃಷ್ಣನೊಬ್ಬನೇ ಆಶ್ರಯವೀಯಲಿಲ್ಲ. ಕಮ್ಮನಾಡಿಗೆ ಸೇರಿದ ಪುಂಗನೂರಿನ ನಾಗಮಯ್ಯನ . ಮಕ್ಕಳಾದ ಮಲ್ಲಪ ಹಾಗೂ

---

1. ಕವಿತಾವಿಳಾಸನುಂ ಚ । ಕ್ರವರ್ತಿ ತಾನಿರ್ದು ಮೆಚ್ಚಿ ಪೆಸರ್ಗೊಂಡೆರಡುಂ ।
ಕವಿತೆಯೊಳಮುಭಯಕವಿ ಚ । ಕ್ರವರ್ತಿಯೆನೆ ನೆಗಳ್ದಿನೀ ಕುರುಳ್ಗಳ
ಸವಣಂ ॥ (12.72)
ಭುವನದ ಕನ್ನಡ ಸಕ್ಕದ । ಗವಿಗಳ್ ಸಲೆ ಸಾಲೆಸೋಲೆ ಸವಣಂಗಿತ್ತಂ ।
ಸವಿವೇಕಮುಭಯ ಕವಿಚ । ಕ್ರವರ್ತಿವೆಸರಂ ನಿಜಾಹಿತೋಷ್ಣಂ ಕೃಷ್ಣಂ ॥
(1.9)

ಪುನ್ನಮಯ್ಯ ಸಹೋದರರು ಪೊನ್ನನಿಗೆ ಆಶ್ರಯವಿತ್ತು ಅವನಿಂದ 'ಉಪಮಾತೀತವೂ' 'ಪುರಾಣಚೂಡಾಮಣಿ'ಯೂ ಆದ ಶಾಂತಿಪುರಾಣವನ್ನು ಸವಿತವದಂತು ಬರೆಯಿಸಿದರು. ಕೃತಿರಚನೆಗೆ ಕಾರಣಕರ್ತೃಗಳಾದ ಈ ಸಹೋದರರ ಗುಣಗಾನವನ್ನು ಶ್ರದ್ಧಾಭಕ್ತಿಗಳಿಂದ ಕವಿ ಕೃತಿಯ ಪ್ರಾರಂಭ ಹಾಗು ಅಂತ್ಯಗಳಲ್ಲಿ ಮಾಡಿರುವನು[1]

ತ್ರಿಷಷ್ಟಿ ಶಲಾಕಾಪುರುಷರು ಜೈನರಿಗೆ ಪೂಜಾರ್ಹರು. ಪ್ರಸಿದ್ಧರಾದ ಈ 63 ಮಂದಿ ಮಹಾಪುರುಷರ ಚಾರಿತ್ರ್ಯ ನಿರೂಪಣೆಯೇ 'ತ್ರಿಷಷ್ಟಿಶಲಾಕಾ ಪುರುಷ ಪುರಾಣ'ದ ಉದ್ದೇಶ. 24 ಮಂದಿ ತೀರ್ಥಂಕರರು, 12 ಮಂದಿ ಷಟ್ಖಂಡ ಚಕ್ರವರ್ತಿಗಳು, 9 ಮಂದಿ ಬಲದೇವ, 9 ಮಂದಿ ವಾಸುದೇವ, 9 ಮಂದಿ ಪ್ರತಿವಾಸುದೇವ–ಹೀಗೆ 63 ಮಂದಿ ಮಹಾಪುರುಷರನ್ನು 'ತ್ರಿಷಷ್ಟಿ ಶಲಾಕಾ ಪುರುಷರೆಂದು ಕರೆಯಲಾಗುವುದು. ತ್ರಿಷಷ್ಟಿ ಶಲಾಕಾಪುರುಷರ ಕಥೆಗಳ ಅಭ್ಯಾಸದಿಂದ ಆತ್ಮಕ್ಕಿರುವ ಬಂಧನಗಳೂ ಅವುಗಳಿಂದಾಗುವ ಹಾನಿಯೂ, ಶುಭಾಶುಭ ಕಾರ್ಯಗಳಿಂದಾಗುವ ಒಳಿತು ಕೆಡಕುಗಳೂ ಅರಿವಾಗಿ ಧರ್ಮದಲ್ಲಿ ಅನುರಕ್ತಿಯುಂಟಾಗಿ ಹೊಸತಾಗಿ ಕರ್ಮಬಂಧವು ಭಾರದಂತೆಯೂ ಸಂಚಿತ ಕರ್ಮವು ಧ್ವಂಸವಾಗುವಂತೆಯೂ ಮಾಡಿಕೊಂಡು ಮುಕ್ತಿಗೆ ಕಾರಣವನ್ನು ಅರಿತು ಮುಕ್ತಿ ಪ್ರಾಪ್ತವಿಧಾನವನ್ನರಿಯಬಹುದೆಂಬ ಸಾಮಾನ್ಯ ತಿಳುವಳಿಕೆ ಪ್ರಚಲಿತವಿದೆ. 9ನೇ ಶ. ನದಲ್ಲಿದ್ದ ಜಿನಸೇನಾಚಾರ್ಯರು ರಾಷ್ಟ್ರಕೂಟ ನೃಪತುಂಗನ ಆಚಾರ್ಯರಾಗಿದ್ದು, ಅವರು ಜೈನ ಮಹಾಪುರಾಣ[2]ವನ್ನು ಬರೆಯ ಹೊರಟು 42 ಸಂಧಿಗಳನ್ನು ಮಾತ್ರ ಬರೆದು ಕಾಲವಾದರು. ಇವರ ನಂತರ ಇವರ ಶಿಷ್ಯರಾದ ಗುಣಭದ್ರಾಚಾರ್ಯರು ಕ್ರಿ.ಶ. 898ರಲ್ಲಿ ಬಂಕಾಪುರದಲ್ಲಿ ಜಿನಸೇನಾಚಾರ್ಯರು ಅಪೂರ್ಣ ಮಾಡಿದ್ದ ಮಹಾಪುರಾಣದ ಮುಂದಿನ ಅರುವತ್ತು ಸಂಧಿಗಳನ್ನು ಬರೆದು ಮಹಾಪುರಾಣವನ್ನು ಪೂರ್ಣಗೊಳಿಸಿದರು. ಜಿನಸೇನಾಚಾರ್ಯರು ಬರೆದದ್ದನ್ನು 'ಪೂರ್ವ ಪುರಾಣ'ವೆಂತಲೂ ಗುಣಭದ್ರಾಚಾರ್ಯರು ಬರೆದದ್ದನ್ನು 'ಉತ್ತರ ಪುರಾಣ'

---

1. ಶಾಂತಿಪು. 1.37-55;12.61-63,81 ಮತ್ತು ಪ್ರತಿ ಆಶ್ವಾಸಾಂತ್ಯ ಗದ್ಯ.
2. ತ್ರಿಷಷ್ಟಿ ಶಲಾಕಾಪುರುಷರ ಚರಿತ್ರೆಗಳನ್ನು ಒತ್ತಟ್ಟಿಗೆ ವಿವರಿಸುವ ಗ್ರಂಥಕ್ಕೆ ಮಹಾಪುರಾಣವೆನ್ನಲಾಗುವುದು.

ವೆಂತಲೂ ಕರೆಯುವ ವಾಡಿಕೆಯಿದೆ.[1] ಕನ್ನಡ ಕವಿಗಳು ರಚಿಸಿದ ಜೈನ ಪುರಾಣಗಳಿಗೆ ಪೂರ್ವಪುರಾಣ, ಉತ್ತರ ಪುರಾಣಗಳು ಆಕರಗಳಾಗಿವೆ.

ಸಂಸಾರ ಸಾಗರದಲ್ಲಿ ಮುಳುಗೇಳುತ್ತಿರುವ, ತೊಳಲಾಡುತ್ತಿರುವ ಜೀವಿಗಳು ಸಮ್ಯಗ್‌ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್‌ಚಾರಿತ್ರಗಳೆಂಬ ರತ್ನತ್ರಯವನ್ನಾಶ್ರಯಿಸಿ ಸಂಸಾರ ಸಾಗರವನ್ನು ದಾಟಿ ಮುಕ್ತಿದಡದತ್ತ ನಡೆದ ಬಹುಜನ್ಮಗಳ ನಿಡುಗತೆಯನ್ನೂ ಜೀವದ ಕ್ರಮವಿಕಾಸವನ್ನೂ ತಿಳಿಸುವುದೇ, ಮನದಟ್ಟುಮಾಡಿಕೊಡುವುದೇ ಜೈನ ಪುರಾಣಗಳ ಮುಖ್ಯ ಗುರಿ. ಕನ್ನಡದಲ್ಲಿ ಜೈನ ಕವಿಗಳು ಒಬ್ಬೊಬ್ಬ ತೀರ್ಥಂಕರನನ್ನು ಕಥಾನಾಯಕನನ್ನಾಗಿ ತೆಗೆದುಕೊಂಡು ಪುರಾಣ ಬರೆದಿರುವುದು ಗಮನೀಯ ಸಂಗತಿಯಾಗಿದೆ. ತೀರ್ಥಂಕರರೆಂದರೆ ಅರಿವನ್ನು ಭುವಿಯಲ್ಲಿ ಹರಿಯಿಸಿದವರು. ಜ್ಞಾನಿಗಳಾದ ಇವರು ತಾವು ಪಡೆದ ಜ್ಞಾನವನ್ನು ಲೋಕದ ಒಳಿತಿಗೆ ವ್ಯಯಿಸಿದರು. ತಾವು ಮೋಕ್ಷದ ಮಾರ್ಗವನ್ನು ಕಂಡುಕೊಂಡದ್ದಲ್ಲದೆ ಸಂಸಾರದಲ್ಲಿ ತೊಳಲಾಡುತ್ತಿರುವ ಜೀವರಿಗೂ ಮೋಕ್ಷಮಾರ್ಗವನ್ನು ತೋರಿಸಿಕೊಟ್ಟರು. ಕನ್ನಡ ಕವಿಗಳು ಋಷಭನಾಥ, ಅಜಿತನಾಥ, ಚಂದ್ರಪ್ರಭ, ಪುಷ್ಪದಂತ, ಅನಂತನಾಥ, ಧರ್ಮನಾಥ, ಶಾಂತಿನಾಥ, ಮಲ್ಲಿನಾಥ, ನೇಮಿನಾಥ, ಪಾರ್ಶ್ವನಾಥ ಮತ್ತು ವರ್ಧಮಾನ ಈ ಹನ್ನೊಂದು ಮಂದಿ ತೀರ್ಥಂಕರರನ್ನು ಕುರಿತು ಬಿಡಿ ಪುರಾಣಗಳನ್ನು ಬರೆದಿರುವರು. ಕನ್ನಡ ಜೈನಪುರಾಣಗಳಲ್ಲಿ ಮೊದಲು ನಾವು ತೀರ್ಥಂಕರನ ಕಥೆಯನ್ನೂ ಅನಂತರ ಚಕ್ರವರ್ತಿ, ಬಲದೇವ-ವಾಸುದೇವ-ಪ್ರತಿವಾಸುದೇವ-ಇವರ ಕಥೆಗಳನ್ನೂ ನೋಡುತ್ತೇವೆ. ತೀರ್ಥಂಕರರೆಲ್ಲರ ಜೀವನಕಥಾವಸ್ತು ವಿಸ್ತಾರವಾಗಿಲ್ಲದಿರುವುದರಿಂದಲೋ ಏನೊ ಜೈನ ಕವಿಗಳು ಕೇವಲ ಹನ್ನೊಂದುಮಂದಿ ತೀರ್ಥಂಕರರ ಪುರಾಣವನ್ನು ಬರೆದು

---

1. ಕನ್ನಡದಲ್ಲಿ ಅದರಲ್ಲೂ ಗದ್ಯದಲ್ಲಿ ತ್ರಿಷಷ್ಟಿಶಲಾಕಾಪುರುಷ ಪುರಾಣವನ್ನು ಬರೆದ ಶ್ರೇಯಸ್ಸು ಗಂಗರಾಚಮಲ್ಲನಲ್ಲಿ ಮಂತ್ರಿ, ಸೇನಾಪತಿಯಾಗಿದ್ದ ಚಾವುಂಡರಾಯ (ಕ್ರಿ. ಶ. 975)ನಿಗೆ ಸೇರುತ್ತದೆ. ಚಾವುಂಡರಾಯ ಪುರಾಣದಲ್ಲಿ ಋಷಭ, ಶಾಂತಿ, ನೇಮಿ, ಮಹಾವೀರ - ಈ ನಾಲ್ವರ ಹೊರತಾಗಿ ಉಳಿದ ತೀರ್ಥಂಕರರ ಕಥೆಯೆಲ್ಲ ಎರಡೆರಡು ಪುಟಗಳಲ್ಲಿ ಮುಗಿದು ಹೋಗಿರುವುದು ಗಮನಾರ್ಹ ಸಂಗತಿಯಾಗಿದೆ.

ಉಳಿದವರನ್ನು ಮರೆತಿರುವರು. ಕೆಲವು ಜೈನ ಪುರಾಣಗಳಲ್ಲಿ ಕವಿಗಳು ತೀರ್ಥಂಕರ ಹಾಗೂ ಚಕ್ರವರ್ತಿಗಳ ಕಥೆಗೆ ಪುರಾಣವನ್ನು ಸೀಮಿತಗೊಳಿಸಿ ಕೊಂಡಿರುವುದುಂಟು. ಉದಾಹರಣೆಗೆ ಪಂಪ, ರನ್ನ ಇತ್ಯಾದಿ. ಮತ್ತೆ ಕೆಲ ವರು ತೀರ್ಥಂಕರ, ಚಕ್ರವರ್ತಿ ಕಥೆಗಳ ಜೊತೆಗೆ ಬಲದೇವ, ವಾಸುದೇವ-ಪ್ರತಿವಾಸುದೇವ ಈ ಮುಕ್ಕೂಟದವರ ಕಥೆಯನ್ನೂ ಹೇಳಿರುವರು. ಉದಾ ಹರಣೆಗೆ ಪೊನ್ನನ ಶಾಂತಿಪುರಾಣ, ನಾಗಚಂದ್ರನ ರಾಮಚಂದ್ರಚರಿತ ಪುರಾಣ, ಜನ್ನನ ಅನಂತನಾಥಪುರಾಣ ಇತ್ಯಾದಿ.

ಸುಮಾರು 8 ನೇ ಶತಮಾನದಲ್ಲಿದ್ದನೆಂದು ಹೇಳುವ ಶ್ರೀವಿಜಯನ 'ಚಂದ್ರಪ್ರಭಪುರಾಣ'ವೆ ಕನ್ನಡದ ಮೊತ್ತಮೊದಲ ಜೈನಪುರಾಣವೆನ್ನ ಬಹುದಾದರೂ ಶ್ರೀ ವಿಜಯನ ಕಾಲ ಇನ್ನೂ ನಿರ್ಧರಿತವಾಗಿಲ್ಲದಿರುವುದರಿಂದ ಇದನ್ನು ಕನ್ನಡದ ಮೊದಲ ಪುರಾಣವೆಂದು ನಿರ್ಧರವಾಗಿ ಹೇಳಲಾಗದು; ಸದ್ಯಕ್ಕೆ ಉಪಲಬ್ಧವಿರುವ ಪಂಪನ ಆದಿಪುರಾಣವೇ ಕನ್ನಡದ ಮೊದಲ ಜೈನ ಪುರಾಣ. ಪಂಪನಿಗೆ ಆದಿಪುರಾಣ ರಚನೆಗೆ ಜಿನಸೇನಾಚಾರ್ಯರ ಪೂರ್ವಪುರಾಣ ಆಕರಗ್ರಂಥವಾಗಿದೆ, ಪೂರ್ವಪುರಾಣದ ತುಂಬುಪ್ರಭಾವಕ್ಕೆ ಒಳಗಾದ ಪಂಪ ಪುರಾಣರಚನೆಯನ್ನು ಲಕ್ಷಣವೊಂದರ ಚೌಕಟ್ಟಿಗೆ ಒಳಪಡಿಸಿದನು. "ಆ ಪುರಾಣಕ್ಕಂ ಲೋಕಾಕಾರ ಕಥನಮುಂ, ದೇಶನಿವೇಶೋಪ ದೇಶಮುಂ, ನಗರ ಸಂಪತ್ಪರಿವರ್ಣನಮುಂ, ರಾಜ್ಯರಾಮಣೀಯಕಾಖ್ಯಾನಮುಂ, ತೀರ್ಥ ಮಹಿಮಾ ಸಮರ್ಥನಮುಂ, ಚತುರ್ಗತಿ ಸ್ವರೂಪ ನಿರೂಪಣಮುಂ, ತಪೋ ದಾನವಿಧಾನವರ್ಣನಮುಂ, ತತ್ಫಲಪ್ರಾಪ್ತ ಪ್ರಕಟನಮುಂ ಎಂದಿಂತು ಅವ ಯವಂಗಳೆಂಟಕ್ಕುಂ" ಎಂದು ಪಂಪ ಜೈನಪುರಾಣದ ಲಕ್ಷಣವನ್ನು ಆದಿ ಪುರಾಣ[1]ದಲ್ಲಿ ಮೊದಲಿಗೆ ಹೇಳಿ ಮುಂದಿನ ಜೈನಪುರಾಣಕವಿಗಳಿಗೆ ಪುರಾಣ ಕವಿಗಳಿಗೆ ಪುರಾಣ ರಚನೆಗೆ ಒಂದು 'ಲಕ್ಷಣ'ವನ್ನು ಹಾಕಿಕೊಟ್ಟನು. ಪಂಪ ಹೇಳಿರುವ ಪುರಾಣ ಲಕ್ಷಣವನ್ನನುಸರಿಸಿ ಪೊನ್ನ ಆ ಚೌಕಟ್ಟಿನಲ್ಲಿಯೇ 'ಶಾಂತಿಪುರಾಣ'ವನ್ನು ರಚಿಸಿರುವನು.

ಪೊನ್ನ ಉಭಯಭಾಷಾಕವಿ. ಸಂಸ್ಕೃತ ಮತ್ತು ಕನ್ನಡವನ್ನು

---

1. ಆದಿಪು. 1.42

ಅವಳಿ-ಜವಳಿಗಳಂತೆ ಸಲಹುತ್ತ ಬಂದವನು[1]. ಎರಡೂ ಭಾಷೆಗಳ ಮೇಲೆ ಪೊನ್ನನಿಗಿರುವ ಪ್ರಭುತ್ವವನ್ನರಿತೇ ಮೂರನೇ ಕೃಷ್ಣ ಅವನಿಗೆ ಉಭಯಕವಿ ಚಕ್ರವರ್ತಿ ಎಂಬ ಬಿರುದನ್ನಿತ್ತುದು; ಕಾಳಿದಾಸಾದಿ ಕವಿಗಳ ಕೃತಿಗಳನ್ನು ಆಳವಾಗಿ ಪೊನ್ನ ಅಭ್ಯಾಸ ಮಾಡಿರುವನೆಂಬುದಕ್ಕೆ ಶಾಂತಿಪುರಾಣದಲ್ಲಿ ಅವುಗಳ ದಟ್ಟ ಪ್ರಭಾವ ಕಂಡುಬರುವುದೇ ನಿದರ್ಶನ. ಅಸಗಕವಿಯ ಪ್ರಸಿದ್ಧ ಕೃತಿಯಾದ ಸಂಸ್ಕೃತ ಕೃತಿ 'ಶಾಂತಿಪುರಾಣ'ವು ಪೊನ್ನನ ಶಾಂತಿ ಪುರಾಣದ ಮೇಲೆ ಪ್ರಭಾವ ಮುದ್ರೆಯನ್ನು ಒತ್ತಿರಬಹುದು.

'ಶಾಂತಿಪುರಾಣ' ಪೊನ್ನನ ಪ್ರತಿಭೆ ವಿದ್ವತ್ತನ್ನು ನಿಚ್ಚಳವಾಗಿ ಗುರುತಿಸಬಹುದಾದ 12 ಆಶ್ವಾಸಗಳ ದೊಡ್ಡ ಚಂಪೂಕೃತಿ. 'ಶಾಂತಿಪುರಾಣ'ದ ಮತ್ತೊಂದು ಹೆಸರು ಪುರಾಣ ಚೂಡಾಮಣಿ. 2ನೇ ನಾಗವರ್ಮನು ವರ್ಧಮಾನ ಪುರಾಣದಲ್ಲಿ ಶಾಂತಿ ಪುರಾಣವನ್ನು 'ಪುರಾಣಚೂಡಾಮಣಿ' ಎಂದು ಗೌರವಪೂರ್ವಕವಾಗಿ ಕರೆದಿರುವನು. ಬಹುಶಃ ಈ ಹೆಸರೇ ಹೆಚ್ಚಿಗೆ ಮನ್ನಣೆಯ ರೂಪದಲ್ಲಿ ಪ್ರಚಾರದಲ್ಲಿ ಇದ್ದಿರಬೇಕು. ಧ್ವನಿಪೂರ್ಣವಾದ ಹೆಸರಿನಿಂದ ತನ್ನ ಕೃತಿಯ ಹಿರಿಮೆಯನ್ನು ಪೊನ್ನ ಸಾರಿರುವನು. ಕವಿಯೆ ಹೇಳುವಂತೆ "ಶಾಂತಿಜಿನ ಜನ್ಮ ಜಲಧಿಗೆ ಶಾಂತಿಪುರಾಣಮೆ ಪರಾರ್ಘ್ಯರತ್ನಂ"[2] ಅದನ್ನು ಹೇಳುವ ಭಾಗ್ಯ ಪೊನ್ನನದಾಯಿತು. "ಆ ತೀರ್ಥಂಕರನ ಪೆಂಪುಪಮಾತೀತಮುದರ್ಕೆ ಬಯಸಿ ಕಣ್ಣುಂ ಕಾಲುಂ! ಬಾತೊಡೆ ಬರ್ಕುಮೆ ಪುಣ್ಯಮನಾತನ ನೆರಪಿದುದನೆಯ್ದೆ ನೆರಪದೆ ಮೊದಲೊಳ್"[3] ಎನ್ನುವ ಹೃದಯತುಂಬಿ ಬಂದ ಉತ್ಕಟಭಕ್ತಿಯ ನುಡಿಗೌರವ. ಆ ಪ್ರಸಿದ್ಧವಾದ

---

1. ಈ ಮಾತಿಗೆ ಪೊನ್ನನ ಕೆಳಗಿನ ಹೇಳಿಕೆ ಸಾಕ್ಷಿ :
   ದೊರೆಯಲ್ಲನೆ ಪೊಜೆಯಿಲ್ಲನೆ
   ನೆರಮಿಲ್ಲನೆ ಸಮಜಿ ಸಕ್ಕದಂ ಕನ್ನಡಮುಂ
   ಬೆರಡುಂ ಕವಿತೆಯುನಮುಳ್ಳೆ
   ತ್ತರಂತಿರೊಡನಡಪಿದಂ ಕುರುಳ್ಗಳ ಸವಣಂ ॥
   (ಶಾಂತಿಪು. 1.01)
2. ಶಾಂತಿಪು. 1.12.
3. ಶಾಂತಿಪು. 1.14.

ಶಾಂತಿನಾಥಸ್ವಾಮಿಯ ಪುರಾಣವನ್ನು, ಅಮರೀಜನರ ಮೃಧುಮಧುರ ಕಂಠ
ದಲ್ಲಿ ಸುಶ್ರಾವ್ಯವಾಗಿ ಹೊಮ್ಮಿ ಬರುತ್ತಿರುವ ತೀರ್ಥಂಕರ ಗುಣಕಥನವನ್ನು,
ಶೋಭಾಯಮಾನವಾದದ್ದನ್ನು, ತ್ರಿಲೋಕಗಳಲ್ಲಿ ಪೂಜಿತವಾಗಿರುವುದನ್ನು
ಹೇಳಿದ್ದೇ ಆದರೆ ದುರಿತಹರಣವಾಗುವುದು ಅಸಾಧ್ಯವೇ ?[1] ಎಂದು ಭಕ್ತಿ
ಯಿಂದ ವಿನಮ್ರನಾಗಿ ಪೊನ್ನ ಹೇಳುವನು. ಈ ಮಾತಿನಲ್ಲಿ ಅತಿಶಯೋಕ್ತಿ
ಯಿಲ್ಲವೆಂಬುದು ಶಾಂತಿನಾಥನ ಕಥೆಯನ್ನು ಲೆಕ್ಕವಿಲ್ಲದಷ್ಟು ಕವಿಗಳು ವಸ್ತು
ವನ್ನಾಗಿ ಸ್ವೀಕರಿಸಿ ಪುರಾಣ, ಚಾರಿತ್ರ, ಕಾವ್ಯಗಳನ್ನು ಬರೆದಿರುವುದರಿಂದ
ದೃಢಪಡುತ್ತದೆ. 'ಸಂತಿಣಾಹ ಚರಿಉ' ಎಂಬ ಹೆಸರಿನಲ್ಲಿ ಅಪಭ್ರಂಶದಲ್ಲಿ
ಮಹೀಂದ್ರಕವಿಯು ಕೃತಿರಚನೆ ಮಾಡಿರುವನು. 'ಶಾಂತಿನಾಥ ಚರಿತಂ'
ಎಂಬ ಹೆಸರಿನಲ್ಲಿ ಆಶಾಧರ, ದೇವಚಂದ್ರ, ಮುನಿದೇವಸೂರಿ, ಭವಚಂದ್ರ,
ಮಣಿಭದ್ರ, ಕನಕಪ್ರಭ, ಜ್ಞಾನಸಾಗರ, ಪ್ರದ್ಯುಮ್ನಸೂರಿ, ಹರ್ಷಭೂಷಣ
ಗಣಿ, ರತ್ನಶೇಖರಸೂರಿ, ಮೇಘವಿಜಯ, ಭಾವಪ್ರಭ, ಉದಯಸಾಗರ ಮೊದ
ಲಾದ ಸಂಸ್ಕೃತ ಕವಿಗಳು ಕಾವ್ಯರಚಿಸಿರುವರು. ಜಿನವಲ್ಲಭಸೂರಿ. ಹಾಗೂ
ಸೋಮಪ್ರಭಸೂರಿಗಳು ಪ್ರಾಕೃತದಲ್ಲಿ ಕಾವ್ಯ ರಚಿಸಿರುವರು. ಸಂಸ್ಕೃತದಲ್ಲಿ
ಅಜಿತ ಪ್ರಭಸೂರಿ, ವತ್ಸರಾಜ, ಜಿನಪ್ರಭ ಇವರೇ ಮೊದಲಾದವರು 'ಶಾಂತಿ
ನಾಥಚರಿತ' ವನ್ನು ಬರೆದರೆ ಬ್ರಹ್ಮಜಯಸಾಗರ, ಸಕಲಕೀರ್ತಿ, ಶಾಂತಿಕೀರ್ತಿ,
ಅಸಗ, ಶ್ರೀಭೂಷಣ, ಬ್ರಹ್ಮದೇವ-ಇವರುಗಳು 'ಶಾಂತಿನಾಥ ಪುರಾಣ'
ವನ್ನು ಬರೆದಿರುವರು. ಇವಲ್ಲದೆ ಸಂಸ್ಕೃತ ಪ್ರಾಕೃತಗಳಲ್ಲಿ ಬಂದಿರುವ ಮಹಾ
ಪುರಾಣ, ತ್ರಿಷಷ್ಠಿ ಮಹಾಪುರಾಣ ಗ್ರಂಥಗಳಲ್ಲೂ ತೀರ್ಥಂಕರನಾದ ಶಾಂತಿ
ನಾಥನ ಕಥೆಯನ್ನು ನಾವು ನೋಡಬಹುದು. ಕೃತಿಯ ನಾಯಕ ಜಿನಚಂದ್ರ
ದೇವ-ಪೊನ್ನನ ಗುರು. ಈತ ಪೊನ್ನನಿಗೆ ಶಾಂತಿಪುರಾಣದ ರಚನೆಗೆ ಪ್ರೇರೆ
ಪಣೆಯನ್ನಿತ್ತಿರಬಹುದು.[2] ತಾನು ವಿಶೇಷವಾಗಿ ಗೌರವಿಸುವ ಜಿನಚಂದ್ರನನ್ನು
ಶಾಂತೀಶ್ವರನಿಗೆ ಹೋಲಿಸಿ, ಕೃತಿ ಶಾಂತಿನಾಥನ ಪುರಾಣವಾದರೂ ಜಿನಚಂದ್ರ
ದೇವನೇ ನಾಯಕನೆಂದು ಹೇಳಿ, ತನ್ನ ಪರಮ ಪೂಜ್ಯ ಗುರು ಜಿನಚಂದ್ರ

---

1. ಶಾಂತಿಪು. 1.15
2. ಶಾಂತಿಪು. 12.81

ಹಾಗೂ ತೀರ್ಥಂಕರಸ್ವಾಮಿ ಶಾಂತಿನಾಥರಲ್ಲಿ ವ್ಯತ್ಯಾಸವನ್ನು ಕಾಣದೆ[1] ತೀರ್ಥಂಕರನನ್ನು ಹೆಸರಿಸುವಾಗಲೆಲ್ಲಾ ಜಿನಚಂದ್ರನನ್ನೇ ಹೆಸರಿಸಿ ಅಪಾರ ವಾದ ತನ್ನ ಭಕ್ತಿಯನ್ನು ಪೊನ್ನ ಪ್ರಕಟಪಡಿಸಿರುವನು. ಉತ್ಸವನಿಧಿ ಮಲ್ಲ ಪಾರ್ಯ ಹಾಗೂ ಯಶೋನಿಧಿ ಪುನ್ನಮಾರ್ಯ ಈ ಸಹೋದರರು ಪೊನ್ನ ನಿಂದ ಅದರ 'ಸವಿ ತವದಂತು' ಪೇಳಿಸಿದರು. ರಚಿಸಿದವನು ಕವಿಚಕ್ರವರ್ತಿ ; ಕೃತಿನಾಯಕ ಜಿನಚಂದ್ರದೇವ ; ಉತ್ಸವನಿಧಿ ಮಲ್ಲಪಾರ್ಯ ಹಾಗೂ ಯಶೋನಿಧಿ ಪುನ್ನಮಾರ್ಯ ಈ ಕೃತಿಯನ್ನು ಪೊನ್ನನಿಂದ ಹೇಳಿಸಿದವರು. ಹೀಗಿರುವಾಗ ಕೃತಿ ಸಾಧರಣವೇ ? "ಶಾಂತಿಪುರಾಣಮೇಂ ಕರಂ ನವರಸ ಮೇಂ ಸಮರ್ಥಯುತಮೇಂ ಮೃದುಬಂಧನಮೇಂ ಪ್ರಸನ್ನಮೋ"[2] ಎಂದು ಕವಿಯೇ ತನ್ನ ಕೃತಿಯ ಬಗೆಗೆ ಉದ್ಗಾರ ತೆಗೆದಿರುವನು. "ಶಾಂತಿ ಪುರಾಣದ ರೇಖೆಗಳುಂತುಬಿಾದಬೊಗವಿಯ ರೇಖೆ ಬರ್ಕುಮೆ" ಎನ್ನುವ ತೀವ್ರಾಭಿಮಾನ ನಮ್ಮ ಪೊನ್ನನದು.

ಕಥಾಸಾರ :

ಪೂರ್ವವಿದೇಹದ ವತ್ಸಕಾವತೀದೇಶದಲ್ಲಿ ಪ್ರಭಾಕರಿ ಎಂಬ ಪುರ. ಅದನ್ನು ಸ್ತಿಮಿತಸಾಗರನು ವಸುಂಧರೆ ಹಾಗು ವಸುಮತಿ ಎಂಬಿಬ್ಬರು ಪತ್ನಿ ಯರೊಂದಿಗೆ ಆಳುತ್ತಿದ್ದನು. ವಸುಂಧರೆಗೆ ಅಪರಾಜಿತನೆಂಬ ಮಗನೂ ವಸು ಮತಿಗೆ ಅನಂತವೀರ್ಯನೆಂಬ ಮಗನೂ ಹುಟ್ಟಿದರು. ಬಲದೇವ (ಅಪರಾಜಿತ) ವಾಸುದೇವ (ಅನಂತವೀರ್ಯರು) ಅಲಂಘ್ಯಬಲ, ಉಗ್ರಬಲರಾಗಿ ಬೆಳೆದರು. ಹೀಗಿರಲು ಒಂದು ದಿನ ಲೋಕನಾಥನಾದ ಸ್ವಯಂಪ್ರಭ ತೀರ್ಥೇಶ್ವರನು ಸ್ತಿಮಿತಸಾಗರನ ರಾಜ್ಯಕ್ಕೆ ಬಂದನು. ಅರಸನು ಪುತ್ರ ಕಳತ್ರ ಮಿತ್ರ ಸಹಿತ ಮುನಿದರ್ಶನಕ್ಕೆ ನಡೆದು ಗಣನಾಥನಿಗೆ ಗುರುಭಕ್ತಿಪೂರ್ವಕವಾಗಿ ವಂದಿಸಿ ಧರ್ಮವನ್ನು ಕೇಳಿ ಅದರಿಂದುಂಟಾದ ನಿರ್ವೇಗದಿಂದ ಪರಮೇಶ್ವರನ ದೀಕ್ಷೆಯನ್ನು ಸ್ವೀಕರಿಸಿದನು. ತಂದೆ ತಪಸ್ಸಿಗೆ ಮನವೊಲಿದು ದುಃಖ,

---

1. ಜಿನಚಂದ್ರ ಮುನೀಂದ್ರನೆ ಶಾಂ | ತಿನಾಥನೀ ಶಾಂತಿನಾಥನಾ ಜಿನಚಂದ್ರಂ| ಜಿನಚಂದ್ರಮುನೀಂದ್ರನೆ ಶಾಂ | ತಿನಾಥನಾವನಾದೊಂ ಭವಾವಳೀವಿರಮಣ ದೊಳ್ ‖ (12.60)
2. ಶಾಂತಿಪು. 1.37

ಜಿನತತ್ವಬೋಧೆ ಇವೆರಡೂ ವಿಷ-ಅಮೃತಗಳಂತೆ ಮನದಲ್ಲಿ ನಿಲ್ಲಲು ಬಲದೇವ ವಾಸುದೇವರು ಸಮವಸರಣಮಂಟಪದಿಂದ ಹೊರಬಂದು ರಾಜಧಾನಿಗೆ ನಡೆದರು. ತಮ್ಮನ್ನು ನೋಡಿದ ಮಾತ್ರಕ್ಕೇ ದುಃಖ ಉಕ್ಕಿಬಂದು ಸೈರಣೆಗೆಟ್ಟು ಪ್ರಲಾಪಿಸುತ್ತಿದ್ದ ತಾಯಿಯರಿಗೆ ನಮಸ್ಕರಿಸಿ ಅವರನ್ನು ಸಮಾಧಾನಿಸಿದರು. ಒಂದು ಶುಭದಿನ ಬಲದೇವ ಪಟ್ಟಾಭಿಷಿಕ್ತನಾದನು; ಅನಂತವೀರ್ಯನು ಯುವರಾಜನಾದನು.

ಒಂದು ದಿನ ಬಲದೇವ-ವಾಸುದೇವರು ಓಲಗದಲ್ಲಿರಲು ಅಮಿತನೆನ್ನುವ ದೂತನು ಬಂದು ಹೀಗೆಂದನು: 'ವೈಣ ಶಾರೀರ ಗೀತ ವಿಶಾರದ'ರಾದನಾರದರು ನಿಮ್ಮಲ್ಲಿರುವ ಬರ್ಬರ, ಕಿರಾತೆಯರೆಂಬ ಗಾಯಕಿಯರ ಗಾಯನವನ್ನು ಕೇಳಿ ಬಹಳವಾಗಿ ಮೆಚ್ಚಿ ನನ್ನ ಒಡೆಯನಾದ ಚಕ್ರವರ್ತಿ ದಮಿತಾರಿಯ ಬಳಿ ಬಂದು ಆ ಗಾಯಿಕಾ ರತ್ನದ್ವಯವು ಸರ್ವರತ್ನಭಾಜನನಾದ, ಚಕ್ರವರ್ತಿಯಾದ ನಿನಗಲ್ಲದೆ ಇತರರಿಗೆ ಯೋಗ್ಯವಲ್ಲ ಎಂದು ಹೇಳಿ ಹೋದರು. ನನ್ನ ಅರಸು ಆ ಗಾಯಕಿಯರನ್ನು ಬೇಡಿ ನಿಮ್ಮಲ್ಲಿಗೆ ನನ್ನನ್ನು ಅಟ್ಟಿರುವನು.

ದಮಿತಾರಿ ಕಳುಹಿಸಿದ್ದ ಪಾಗುಡವನ್ನು ಸ್ವೀಕರಿಸಿ, ಅಮಿತನನ್ನು ಬೀಡಿಗೆ ಕಳುಹಿಸಲಾಯಿತು. ದಮಿತಾರಿಯು ಕಳುಹಿಸಿದ್ದ ಬಹುಮಾನಗಳಲ್ಲಿ ಸುಗಂಧ ಬೀರುವ ಪ್ರಕಾಶಮಾನಭರಿತವಾದ ಒಂದು ಹಾರವನ್ನು ನೋಡಿ ಅಪರಾಜಿತನು ಮೂರ್ಛೆ ಹೋದನು. ಮೂರ್ಛೆಯಿಂದ ಎಚ್ಚತ್ತು ರಾಜನು ಆ ಹಾರವು ನನ್ನ ಹಿಂದಣ ಜನ್ಮವನ್ನುನೆನಪಿಸಿತು. ಈ ಜನ್ಮಕ್ಕೆ ಹಿಂದೆ ಮೂರನೆಯ ಜನ್ಮದಲ್ಲಿ ನಾನು ಅಮಿತತೇಜನೆಂಬ ವಿದ್ಯಾಧರನಾಗಿ ಹುಟ್ಟಿದ್ದೆನು. ಅನಂತವೀರ್ಯನು ನನ್ನ ಹಿಂದಣ ತಂದೆಗೆ ಸೋದರಳಿಯನಾದ ಶ್ರೀವಿಜಯನೆಂಬವನಾಗಿ ಹುಟ್ಟಿದ್ದನು ಎಂದು ಪೂರ್ವಭವ ಸ್ಮರಣೆಯಾಗಿ ಅದನ್ನು ವಿವರಿಸುತ್ತಿರಲು ಆ ಜನ್ಮದ ವಿದ್ಯೆಗಳೆಲ್ಲವೂ ಅಪರಾಜಿತ ಅನಂತವೀರ್ಯರಲ್ಲಿ ನೆಲೆಗೊಂಡುವು. ಆ ಸೋದರರು ಬರ್ಬರ, ಕಿರಾತೆಯರೆಂಬ ಆ ಗಾಯಕೆಯರ ವೇಷವನ್ನು ಧರಿಸಿ, ಮಂತ್ರಿಗಳನ್ನು "ನಾವು ಬರುವವರೆಗೆ ಈ ಪುರ ಮಂಡಲಗಳಿಗೆ ಶಿಕ್ಷೆ, ರಕ್ಷೆ ಎಲ್ಲವೂ ನೀವೆ" ಎಂದು ಹೇಳಿ ಅವರನ್ನು ಒಪ್ಪಿಸಿದರು. ಅನಂತರ ದೂತನಾದ ಅಮಿತನಲ್ಲಿಗೆ ಕೋಶಾಧ್ಯಕ್ಷನನ್ನು ಕಳುಹಿಸಿ ದಾನ ಸನ್ಮಾನಗಳಿಂದ ಆ ದಮಿತಾರಿಯ ದೂತನನ್ನು ತಣಿಸಿ, ಚಕ್ರವರ್ತಿಯ

ಕುಮಾರಿಯರಲ್ಲಿ ಒಬ್ಬಳನ್ನು ಅನಂತವೀರ್ಯನಿಗೆ ಕೊಡಿಸುವಂತೆ ಒತ್ತಾಯಿಸಿ ದನು. ಅಪರಾಜಿತನ ದಾನ-ಸನ್ಮಾನಗಳಿಂದ ಸಂತೃಪ್ತನಾದ ಅಮಿತನು ಚಕ್ರವರ್ತಿಯ ಕನ್ಯೆಯನ್ನು ಕೊಡಿಸುವುದಾಗಿ ಪ್ರತಿಜ್ಞೆಮಾಡಿದನು.

ಗಾಯಿಕೆಯರ ವೇಷಧರಿಸಿ ಬಲದೇವ ವಾಸುದೇವರು ದೂತನಾದ ಅಮಿತನೊಂದಿಗೆ ವಿಮಾನವೇರಿ ದಮಿತಾರಿಯಲ್ಲಿಗೆ ಬಂದರು. ಅವರನ್ನು ನೋಡಿದ ದಮಿತಾರಿ ವಿಸ್ಮಯಾಕ್ರಾಂತಚಿತ್ತನಾಗಿ ಇವರು ದೇವತಾಸ್ತ್ರೀಯ ರಲ್ಲದೆ ಮಾನವಕನ್ಯೆಯರಲ್ಲವೆಂದು ಮನದಲ್ಲಿ ನಿಶ್ಚಯಿಸಿ ಮಗಳಾದ ಕನಕ ಶ್ರೀಯ ಬಳಿಗೆ ಅವರನ್ನು ಕಳುಹಿಸಿದನು.

ಒಂದುದಿನ ದಮಿತಾರಿ ಸಭೆಯಲ್ಲಿರಲು ಅಲ್ಲಿಗೆ ಭಯೋತ್ಕಂಪಿತನಾದ ರಾಣೀವಾಸದ ಪೆರ್ಗಡೆ ಬಂದು "ದೇವಾ, ನಿಮ್ಮ ಆಳ್ವಿಕೆಗೆ ಒಳಗಾಗಿರುವ ಭೂಭಾಗದಲ್ಲೆಲ್ಲೂ ಕೇಳಲಾಗದ ಅಪವಾದ ಇಂದು ನಮ್ಮ ಕನ್ಯಾಂತಃಪುರದಲ್ಲಿ ಕಾಣಲಾದುದು. ಅಪರಾಜಿತನು ಗಾಯಿಕೆಯ ರೂಪವನ್ನು ಧರಿಸಿಬಂದು ತನ್ನ ತಮ್ಮ ಅನಂತವೀರ್ಯನಿಗೆಂದು ಕನಕಶ್ರೀಯನ್ನು ಒಪ್ಪಿಸಿ ಗಗನ ಗಾಮಿನೀ ವಿದ್ಯೆಯಿಂದ ಅವರಿರ್ವರನ್ನೂ ಕೊಂಡೊಯ್ಯುತ್ತಾ 'ಹರಿ ಕರಿಗೆ ಮುಳಿಗುಮಲ್ಲದೆ ನರಿಗಂ ಕೋಟಿಗಮೇಂ ಮುಳಿಗುಮೆ? ಬರವೇಟಿಂ ನಿಜ ಸೈನ್ಯ ಸಹಿತ ಮಹಿತನನ್' ಎಂದು ನಿಮಗೆ ತಿಳಿಸಲು ಹೇಳಿದನು" ಎಂದನು. ಆ ಮಾತುಕೇಳಿ ದಮಿತಾರಿ ಕೋಪೋದ್ರೇಕಕ್ಕೆ ಒಳಗಾದರೂ ಧೀರತಾಜಲದಿಂದ ಆ ಕೋಪಾಗ್ನಿಯನ್ನು ಮೆಲ್ಲ ಮೆಲ್ಲನೆ ನಂದಿಸಿ, ಮನದ ಉದ್ರೇಕವನ್ನು ಸಮಾ ಧಾನಿಸಿ, ಕೋಪಗೊಳ್ಳುವ ಎದೆಯಲ್ಲಿ ಕೋಪವನ್ನು ಮುಖಕ್ಕೆ ತಾರದೆ, ವೀರಾಗ್ರಗಣ್ಯರಾದ ಸಭಾಸದರೊಂದಿಗೆ ವಿಚಾರಮಾಡಿ ನೀತಿವರ್ಧನ ನಿಮಿತ್ತ ಪ್ರೀತಿವರ್ಧನನೆಂಬ ದೂತನನ್ನು ಅಪರಾಜಿತನಲ್ಲಿಗೆ ಅಟ್ಟಿದನು. ಪ್ರೀತಿ ವರ್ಧನನು ಅಪರಾಜಿತಾನಂತವೀರ್ಯರನ್ನು ಕಂಡು ನಮಸ್ಕರಿಸಿ ಕದ್ದುತಂದ ಕನ್ಯಾರತ್ನವನ್ನು ಈಗಲೇ ಒಪ್ಪಿಸಿ ತಡಮಾಡದೆ ಚಕ್ರವರ್ತಿಗೆ ಶರಣಾಗು. ಹೆಚ್ಚು ಮಾತೇಕೆ, ನೀನು ಬಂದು ಅವನನ್ನು ಕಾಣು. ಕಂಡದ್ದೇ ಆದರೆ ಕ್ಷೇಮ ಎಂದು ಮೊದಲಾಗಿ ಸಾಮಪೂರ್ವಕವಾಗಿ ನಯವಾದ ಮಾತುಗಳನ್ನು ಆಡಿ ದನು. ಅದಕ್ಕೆ ಸೌಜನ್ಯಕಂದಾಂಕುರನಾದ ಅಪರಾಜಿತನು "ಮೊಲಕ್ಕೊಡ್ಡಿದ

ಬಲೆಯೊಳ್ ಮೃಗರಾಜಂ ತೊಡರ್ಗುಮೆ? ನಿಮ್ಮರಸಂ ಸುಕುಮಾರ ಚಕ್ರ ವರ್ತಿ, ನಡೆದೊನಿಲ್ಲಿವರಂ ಬರಲಾಱನದಱಿಂದಮಾತನೆಲ್ಲಿರ್ದನಲ್ಲಿವರಮಾನೆ ಪೋಗಿ ಕಾದುವೆನೆಂದು ತಱಿಸಂದು ಕಟ್ಟಾಳಾಗಿ ನಿನ್ನ ಬರ್ಪಾಗಳೆ ಬರಲೆಂ ದಿರ್ದನೆನ್ನ ತಮ್ಮನತ್ಯಾಗ್ರಹದಿಂದಂ ಮಾಣಿಸಿದೆನ್" ಎಂದು ಗರ್ಜಿಸಿ ದೂತ ನನ್ನು ವಿಸರ್ಜಿಸಿದನು.

ಎರಡೂ ಕಡೆ ಯುದ್ಧಸಿದ್ಧತೆಗಳಾದುವು. ಘನಘೋರ ಯುದ್ಧ ವಾಯಿತು. ದಮಿತಾರಿಯ ಬಲ ಚಂದ್ರಬಲವಿಲ್ಲದ ಅಂಕಕಾರನಂತೆ ಸೋತು, ಮೂರ್ತಿಬಲವಿಲ್ಲದ ಮಲ್ಲನಂತೆ ಪೆಟ್ಟುತಾಳಿ, ಬಾಹುಬಲವಿಲ್ಲದ ರಾಜಪುತ್ರ ನಂತೆ ಶಕ್ತಿಗುಂದಿ, ನೆಲಬಲವಿಲ್ಲದ ನೆಲವತ್ತಿಗನಂತೆ ಕಟ್ಟು ಕಳಚಿ, ದೈವಬಲ ವಿಲ್ಲದ ಸೇವಕನಂತೆ ಮುಟ್ಟುಗೆಟ್ಟು, ಕಾಳಗದಲ್ಲಿ ಸೋತಿತು. ಅನಂತವೀರ್ಯ ಹಾಗೂ ದಮಿತಾರಿಯ ನಡುವೆ ಭೀಕರ ಯುದ್ಧ ನಡೆಯಿತು. ದಮಿತಾರಿ ಬಿಟ್ಟ ಚಕ್ರವೂ'ಬಯ್ತಿಟ್ಟ' ಚಕ್ರದಂತೆ ಅನಂತವೀರ್ಯನ ಬಲದ ಭುಜದಲ್ಲಿ ಬಂದು ನೆಲಸಿತು. ಆಗಲೂ ಧೈರ್ಯಗೆಡದೆ ದಮಿತಾರಿ ತನ್ನ ಶತ್ರುವನ್ನು ತರಿದುಹಾಕುವೆನೆಂದು ಕತ್ತಿಯೊಂದಿಗೆ 'ಮಿಂಚಂ ತಳ್ಕೈಸಿದ ಕಾರ ಕಾಮುಗಿ ಲಂತೆ' ಬಂದಾಗ ಅನಂತವೀರ್ಯನು ತನ್ನ ಬಲಭುಜದ ಸಮೀಪದಲ್ಲಿದ್ದ ಚಕ್ರ ವನ್ನು ತಿರುಗಿಸಿ ಬಿಟ್ಟು ಅರಿಶಿರವನ್ನು ಕತ್ತರಿಸಿದನು. ರಣವಿಜಯಿಯಾಗಿ ಬಂದು ನಮಸ್ಕರಿಸಿದ ತಮ್ಮನನ್ನು ಅಪರಾಜಿತನು ಮೇಲೆತ್ತಿ ಅಪ್ಪಿ ಆಶೀರ್ವಾದ ಮಾಡಿದನು. ಯುದ್ಧದಲ್ಲಿ ಅಂಜಿದ ವಿದ್ಯಾಧರರಿಗೆ ಅಭಯನೀಡಿದನು. ದಮಿತಾರಿಗೆ ಶರೀರಪೂಜೆ ಮಾಡಲು ಆಜ್ಞೆಮಾಡಿ, ಯುದ್ಧರಂಗವನ್ನು ಸುತ್ತು ಬಂದು ಚಕ್ರವನ್ನು, ಚಕ್ರವರ್ತಿಶ್ರೀಯನ್ನು ತಮ್ಮನಲ್ಲಿ ಅಪರಾಜಿತನು ಹೊಂದಿ ಸಿದನು. ಅಷ್ಟಲ್ಲದೆ ತಂದೆಯ ಮರಣವನ್ನೂ ತನ್ನ ಅನುಚಿತವಾದ ಆಚರಣೆ ಯನ್ನೂ ನೆನೆದು ಕಲ್ಲನೆ ಕನಲುತ್ತಿದ್ದ ಕನಕಶ್ರೀಯನ್ನು ಸಂತೈಸಿ ಅವಳ ದುಃಖ ವನ್ನು ನಿವಾರಿಸಿ ದಮಿತಾರಿಗೆ ಪಾರಲೌಕಿಕ ವಿಧಿಯನ್ನು ನೆರವೇರಿಸಿದನು.

ಸೋದರರು ಕನಕಶ್ರೀಯೊಂದಿಗೆ ಪ್ರಭಾಕರೀಪುರಕ್ಕೆ ವಿಮಾನದಲ್ಲಿ ಹೋಗುತ್ತಿದ್ದಾಗ ವಿಮಾನವು ತಡೆಹಿಡಿಯಲ್ಪಟ್ಟಿತು. ಅಪರಾಜಿತ ವಿಮಾನ ದಿಂದಿಳಿದು ಕೀರ್ತಿಧರಕೇವಳಿಯ ಪಾದಗಳಿಗೆ ನಮಸ್ಕರಿಸಿದನು. ಅನಂತ ವೀರ್ಯ ಹಾಗೂ ಕನಕಶ್ರೀ ಮುನಿಗಳ ಮುಂದೆ ಬಂದು ನಮಸ್ಕರಿಸಲು ಮುನಿ

ಕನಕಶ್ರೀಯು ಪೂರ್ವಭವವನ್ನು ಕುರಿತು ಹೀಗೆಂದನು: ಐರಾವತದ ಧಾತ ಕೀಷಂಡದ ಶಂಖಗ್ರಾಮದಲ್ಲಿ ಸಾಧುದೇವನೆಂಬ ಬೇಸಾಯಗಾರನಿದ್ದನು. ಅವನ ಹೆಂಡತಿ ಪೃಥುಶ್ರೀ. ಇವಳಿಗೆ ಒಕ್ಕಣ್ಣುರುಡಿ, ಗೂನಿ, ಕುಂಟಿ, ವೋಟಿ, ಕುಷ್ಠಿನಿ, ಕುಳ್ಳಿಯರಾದ ಆರುಮಂದಿ ಹೆಣ್ಣುಮಕ್ಕಳು. ಅವರಲ್ಲಿ ಮೊದಲನೆಯವಳೇ ನೀನು. ದಾರಿದ್ರ್ಯವೆಂಬ ವೃಕ್ಷದ ಹಣ್ಣುಗಳನ್ನು ಹಲವು ಕಾಲ ತಿಂದು ಮಕ್ಕಳ ಕಾಟಕ್ಕೆ ಬೇಸತ್ತು ನಿನ್ನ ತಂದೆ ದೇವಕ ಪ್ರಾಣ ಬಿಟ್ಟನು. ತಂಗಿಯರ ರಕ್ಷಣೆಯ ಭಾರ, ಬಡತನದ ಭಾರ ನಿನ್ನೊಬ್ಬಳ ಮೇಲೆ ಬಿದ್ದರೂ ಮದುವೆಯಾಗದೆ ನೀನು ಸಹಿಸಿದೆ. ಹಣ್ಣುಗಳನ್ನು ಆಯ್ದು ತಂದು ಮಾರಲಿಕ್ಕಾಗಿ ನೀನು ಶಂಖಾಚಲಕ್ಕೆ ನಿತ್ಯದಂತೆ ಹೋದೆ. ಮರಳಿ ಬರುವಾಗ ದಾರಿಯಲ್ಲಿ ನೀನು ಸರ್ವಯಶಗುರುಗಳನ್ನು ಭೇಟಿಮಾಡಿ ಅವರಿಂದ ಧರ್ಮ ಬೋಧೆ ಕೇಳಿದೆ, ಒಂದು ದಿನ ಮಾಸೋಪವಾಸಮಾಡಿ ನಗಾರಕೇವಲಿ ಯೊಂದಿಗೆ ಚರಿಗೆಗೆ ನಡೆದ ಸುವ್ರತೆಯರೆಂಬ ಆರ್ಯಿಕೆಯರನ್ನು ನೀನು ತಡೆದು ಭಕ್ತಿಪೂರ್ವಕವಾಗಿ ಅವರಿಗೆ ಆಹಾರದಾನ ನೀಡಲು ಆಕೆ ನೀನು ಕೊಟ್ಟ ಆಹಾರವನ್ನು ಕಕ್ಕಿ ಹೊರಹಾಕಿದಳು. ನೀನು ಆಗ ಹೇಸಿ ಮನೆಯಿಂದ ಹೊರಗೆ ಹೋದೆ. ಆ ಸನ್ಯಾಸಿನಿಯನ್ನು ಕಂಡ ನೆರೆಮನೆಯವರು ಅವಳನ್ನು ದೇಹಾರಕ್ಕೆ ಕಳುಹಿಸಿದರು. ಮತ್ತೊಂದು ದಿನ ನೀನು ಆಕಾಶದಲ್ಲಿ ವಿಮಾನ ದಲ್ಲಿ ಚರಿಸುತ್ತಿದ್ದ ಖೇಚರದಂಪತಿಗಳನ್ನು ನೋಡಿದೆ. ಖೇಚರರ ಸುಖವನ್ನು ಪಡೆಯಲು ನಿನ್ನ ಮನಸ್ಸು ಬಯಸಿತು. ನೀನು ಸತ್ತು ಖೇಚರದಂಪತಿಗಳಾದ ದಮಿತಾರಿ–ಮಂಗಳೆಯರಿಗೆ ಕನಕಶ್ರೀಯೆಂಬ ಮಗಳಾದೆ. ಶಿವಮಂದಿರಪುರ ವನ್ನಾಳುವ ಕನಕಪುಂಗವ–ಜಯದೇವಿಯರಿಗೆ ಕೀರ್ತಿಧರನೆಂಬ ಹೆಸರಿನಿಂದ ನಾನು ಮಗನಾದೆನು. ನನಗೂ ನನ್ನ ಹೆಂಡತಿ ಪವನವೇಗಿಗೂ ನಿನ್ನ ತಂದೆ ದಮಿತಾರಿ ಮಗನಾದನು. ನಾನು ಆತನನ್ನು ನನ್ನ ರಾಜ್ಯದಲ್ಲಿ ನಿಲ್ಲಿಸಿ ಶಾಂತಿಕ ಗುರುಗಳ ಪಾದಮೂಲದಲ್ಲಿ ದೀಕ್ಷೆಸ್ವೀಕರಿಸಿ ಘಾತಿಕರ್ಮಗಳನ್ನು ನಾಶಮಾಡಿ ಜಿನತ್ವವನ್ನು ಪಡೆದೆನು. ನಿನಗೆ ಹಿಂದಣಜನ್ಮದಲ್ಲಿ ಆಹಾರದಾನ ಸಮಯದಲ್ಲಾದ ಜಿಗುಪ್ಸೆಯಿಂದಾಗಿ ಇಷ್ಟೆಲ್ಲ ತೊಂದರೆಗಳು ಪ್ರಾಪ್ತವಾದುವು.

ಭವಾವಳಿಯ ವಿವರ ತಿಳಿದ ಮೇಲೆ ಜಿನೇಂದ್ರನ ಪಾದಗಳಿಗೆ ವಂದಿಸಿ ವಿಮಾನವನ್ನೇರಿ ಮೂವರೂ ಪ್ರಭಾಕರೀ ಪುರವನ್ನು ಮುಟ್ಟಿದರು.

ದಮಿತಾರಿಯ ಮಕ್ಕಳಾದ ವಿದ್ಯುದ್ದಂಷ್ಟ್ರ ಹಾಗೂ ಸುದಂಷ್ಟ್ರರು ಸೇನೆಯೊಂದಿಗೆ ಪುರವನ್ನು ಮುತ್ತಿ ಹೋರಾಡುತ್ತಿರಲು ಎರಡು ಬಾಣಗಳಿಂದ ಅವರನ್ನು ಅನಂತ ವೀರ್ಯನು ಸಂಹರಿಸಿದನು. ವಿದ್ಯಾಧರನ ಬಲವೆಲ್ಲಾ ಮಂಜುಕರಗಿದಂತೆ ಕರಗಿತು. ರಾಜಧಾನಿಯನ್ನು ಪ್ರವೇಶಿಸಿದ ಅಪರಾಜಿತನು ಅಷ್ಟಾಹ್ನಿಕ ಮಹಾಮಹಿಮೆಯನ್ನು ಜಿನೇಶ್ವರನಿಗೆ ಮಾಡಿ ಅನಂತರ ಚಕ್ರಪೂಜೆಯನ್ನು ಮಾಡಿ ತಮ್ಮನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ನಿರ್ವೇಗಮನಳಾದ ಕನಕಶ್ರೀ ನಾಲ್ಕುಸಾವಿರ ಕನ್ಯೆಯರೊಂದಿಗೆ ಸ್ವಯಂಪ್ರಭುಗುರುಗಳ ಪಾದ ಕಮಲಗಳ ಬಳಿ ತಪಶ್ಚರಣ ನಿರತೆಯಾಗಿ ಸುರೇಂದ್ರಲೋಕಾತಿಥಿಯಾದಳು.

ಅಪರಾಜಿತನ ಅಗ್ರಮಹಿಷಿ ವಿಜಯೆಯೆನ್ನುವವಳಿಗೆ ಸುಮತಿ ಎಂಬ ಮಗಳಾದಳು. ಅವಳು ವಿವಾಹವಯಸ್ಕಳಾಗಲು ಸ್ವಯಂವರವನ್ನು ಏರ್ಪಡಿಸಲಾಯಿತು. ಸ್ವಯಂವರ ಸಭೆಗೆ ಪ್ರವೇಶಿಸುತ್ತಿರುವಲ್ಲಿ ವಿಮಾನ ದಲ್ಲಿದ್ದ ಖೇಚರಿಯೋರ್ವಳು ಸುಮತಿಯನ್ನು ಕುರಿತು ಹೀಗೆಂದಳು: ಅಕ್ಕಾ ನೆನಪುಮಾಡಿಕೊ! ಪುಷ್ಕರಾರ್ಧದಲ್ಲಿ ಪೂರ್ವಮಂದರದ ಭಾರತದಲ್ಲಿ ನಂದನ ವೆಂಬ ಪುರವಿರುವುದು.. ಅದನ್ನು ಮಹೇಂದ್ರನೆನ್ನುವವನು ಆಳುತ್ತಿದ್ದನು. ಆ ರಾಜನಿಗೆ ಅನಂತಮತಿಯೆಂಬ ಹೆಂಡತಿಯಿದ್ದಳು. ಆ ದಂಪತಿಗಳಿಗೆ ನಾನೂ ನೀನೂ ಅನಂತಶ್ರೀ ಧನಶ್ರೀ ಎಂಬ ಹೆಸರುಗಳಿಂದ ಹುಟ್ಟಿದೆವು. ನಾನು ಹಿರಿಯವಳು. ನೀನು ಕಿರಿಯವಳು. ನಾವೀರ್ವರೂ ಒಂದುದಿವಸ ವಸಂತಕಾಲದಲ್ಲಿ ವನವಿಹಾರಮಾಡಲು ಹೋಗಿ ನಂದಗುಪ್ತರಿಂದ ಧರ್ಮ ಬೋಧೆ ಪಡೆದೆವು. ನಾವಿರ್ವರೂ ಉಯ್ಯಾಲೆಯಾಡುತ್ತಿರಲು ನಮ್ಮನ್ನು ಕಂಡು ಮೋಹಗೊಂಡು ತ್ರಿಪುರದ ಒಡೆಯ ವಜ್ರಾಂಗನು ಹಿಡಿದುಕೊಂಡು ಆಕಾಶಕ್ಕೆ ನೆಗೆದನು. ಆತನ ಹೆಂಡತಿ ವಜ್ರಮಾಳಿನಿ ಇದನ್ನು ಕಂಡು ಈರ್ಷೆ ಹಾಗೂ ದುಃಖಗಳಿಂದ ಕೂಡಿ ಹರಿತವಾದ ಕತ್ತಿಯನ್ನು ಹಿಡಿದು ಬೆನ್ನಟ್ಟಿ ಬಂದು ವಜ್ರಾಂಗನ ಬೆನ್ನಿಗೆ ತಿವಿದಳು. ನೋವು ತಾಳಲಾರದೆ ಆತ ನಮ್ಮನ್ನು ಬಿಡಲು ಪರ್ಣಲಘುವಿದ್ಯೆಯನ್ನು ವಜ್ರಮಾಳಿನಿ ಆಜ್ಞೆಮಾಡಿ ಕಳುಹಿಸಲು ನಾವು ಅದರ ಸಹಾಯದಿಂದ ಭೀಮಾಟವಿಯ ಸರೋವರದ ಸಮೀಪದಲ್ಲಿ ಕೆಡವಲ್ಪಟ್ಟೆವು. ನಾವು ಅಲ್ಲಿ ಸನ್ಯಸನ ಸ್ವೀಕರಿಸಿ ಪ್ರಾಣಬಿಟ್ಟೆವು. ನಾನು ಸೌಧರ್ಮೇಂದ್ರನಿಗೆ ನವಮಿಕೆ ಎಂಬ ದೇವಿಯಾದೆನು. ನೀನು ಕುಬೇರನಿಗೆ

ರತಿಯಾದೆ. ನಾವು ನಂದೀಶ್ವರದ್ವೀಪದಲ್ಲಿ ಭೇಟಿಯಾಗಿ ಪರಸ್ಪರ ಗುರುತು ಸಿಕ್ಕಿ ಜೊತೆಗೂಡಿ ಜಿನನನ್ನು ಪೂಜಿಸಿ ಮನುಷ್ಯಲೋಕದಲ್ಲಿ ಯಾರಾದರೂ ಒಬ್ಬರು ಮತ್ತೊಬ್ಬರನ್ನು ಪ್ರತಿಬೋಧಿಸುವಂತೆ ಪ್ರತಿಜ್ಞೆ ಸ್ವೀಕರಿಸಿ ಹೋದೆವು. ಅದನ್ನು ನೀನು ಮರೆತೆ–ಎಂದು ಹೇಳಲು ಅದೆಲ್ಲವನ್ನು ಚೆನ್ನಾಗಿ ಕೇಳಿ ಆ ದೇವಿ ರೂಪವನ್ನು ನೋಡಿ ಮೂರ್ಛೆಹೋದಳು. ಸ್ವಲ್ಪವೇಳೆಯಲ್ಲೇ ಎಚ್ಚತ್ತು ಸುಮತಿ ಪೂರ್ವಜನ್ಮದ ತನ್ನ ಅಕ್ಕನಿಗೆ ನಿಮ್ಮ ಮಾತನ್ನು ಉಪೇಕ್ಷಿಸಲಾರೆ ನೆಂದು ಮಾತುಗೊಟ್ಟು ಕಳುಹಿಸಿದಳು. ತಂದೆ–ತಾಯಿಯರಿಂದ ಬೀಳ್ಕೊಂಡು ಸುಮತಿ ಸುವ್ರತಾಗಣಿನೀ ಸಮಕ್ಷದಲ್ಲಿ ಐನೂರುಮಂದಿ ರಾಜಕುವರಿಯರ ಜೊತೆಯಲ್ಲಿ ದೀಕ್ಷೆ ಸ್ವೀಕರಿಸಿದಳು.

ಇತ್ತ ಅನಂತವೀರ್ಯ ಪ್ರಾಣಬಿಡಲು ಬಲದೇವನು ಅರಿಂಜಯನೆಂಬ ತನ್ನ ಕಿರಿಯಮಗನಿಗೆ ಪಟ್ಟಗಟ್ಟಿ ಸ್ವಯಂಪ್ರಭತೀರ್ಥೇಶ್ವರರ ಬಳಿ ಸನ್ಯಸನ ವನ್ನು ಸ್ವೀಕರಿಸಿ ಉಗ್ರೋಗ್ರತಪದಲ್ಲಿ ಪರೀಷಹ ವೀರರನ್ನು ಗೆದ್ದನು. ಸಿದ್ಧ ಗಿರಿಯಲ್ಲಿ ಪ್ರಾಯೋಪಗಮನದಿಂದ ದೇಹವನ್ನು ತೊರೆದು ಅಪರಾಜಿತನು ಅಚ್ಯುತೇಂದ್ರನಾದನು. ಅನಂತವೀರ್ಯನು ಸತ್ತು ರತ್ನಪ್ರಭೆ, ಘರ್ಮೆಯೆಂಬ ಮೊದಲ ನರಕದ ಹದಿಮೂರು ಇಂದ್ರಕಗಳಲ್ಲಿ ಮೊದಲನೆಯದಾದ ಸೀಮಂತ ದಲ್ಲಿ ನಲವತ್ತೆರಡುಸಾವಿರ ವರ್ಷ ಆಯುಸ್ಸುಳ್ಳವನಾಗಿ ಜನಿಸಿದನು.

ಅಚ್ಯುತೇಂದ್ರನು ನಂದೀಶ್ವರದ್ವೀಪಕ್ಕೆ ಅಮರಪರಿವಾರದೊಂದಿಗೆ ಹೋಗಿ ಜಿನಸ್ವಾಮಿಗೆ ಅಷ್ಟಾಹ್ನಿಕ ಮಹಾಮಹಿಮೆಯನ್ನು ಮಾಡಿ ಹದಿನಾರು ಅಕೃ ತ್ರಿಮ ಜಿನಾಲಯಗಳಿಗೆ ತ್ರಿಕರಣಪೂರ್ವಕವಾಗಿ ಶುದ್ಧಮನದಿಂದ ವಂದಿಸಿ ಬರುತ್ತಿರುವಲ್ಲಿ ಖೇಚರನೋರ್ವನನ್ನು ಕಂಡನು. ದಿವಿಜೇಶ್ವರನನ್ನು ಖೇಚರನು 'ಮುಂ ನಿನ್ನಂ ಕಂಡಱಿಯದೆಯುಂ ಸ್ವಾಮಿ ಕಂಡಂತಾದಪುದು' ನನ್ನ ಮನದ ಸಂಶಯವನ್ನು ಪರಿಹರಿಸು ಎಂದು ಪ್ರಾರ್ಥಿಸಿದನು. ಅವಧಿಜ್ಞಾನದಿಂದ ಎಲ್ಲವನ್ನೂ ತಿಳಿದ ಅಚ್ಯುತೇಂದ್ರನು ಹೀಗೆಂದು ಹೇಳತೊಡಗಿದನು.

ಜಂಬೂದ್ವೀಪದ ವಿಜಯಾರ್ಧದ ರಥನೂಪುರಚಕ್ರವಾಳಪುರವನ್ನು ಜ್ವಳನಜಟಿ ಆಳುತ್ತಿದ್ದನು. ವಾಯುವೇಗೆ ಆತನ ಮಾದೇವಿ. ಈ ದಂಪತಿ ಗಳಿಗೆ ಅರ್ಕಕೀರ್ತಿ, ಸ್ವಯಂಪ್ರಭೆ ಎಂಬ ಈರ್ವರು ಮಕ್ಕಳು, ಅವರು

ದೊಡ್ಡವರಾಗಲು ಅರ್ಕಕೀರ್ತಿಗೆ ಗಗನಕೂಟ ಪುರಾಧೀಶನ ಮಗಳು ಜ್ಯೋತಿರ್ಮಾಲೆಯನ್ನು ಕೊಟ್ಟು ಮದುವೆಮಾಡಲಾಯಿತು, ಮಗಳಿಗೆ ಯೋಗ್ಯ ವರನಾರೆಂಬುದನ್ನು ತಿಳಿದು ಹೇಳಲು ನೈಮಿತ್ತಿಕನೆಂಬ ಶಕುನಿಗನನ್ನು ಜ್ವಳನಜಟಿ ಕರೆಯಿಸಿದನು. ಭರತಕ್ಷೇತ್ರಕ್ಕೆ ತಿಲಕಪ್ರಾಯವಾದ ಸುರಮ್ಯನಾಡಿನ ಪೌದನಪುರವನ್ನಾಳುವ ಪ್ರಜಾಪತಿಗೆ ವಿಜಯಾವತಿ ಹಾಗೂ ಮೃಗಯಾವತಿ ಎಂಬ ಈರ್ವರು ಪತ್ನಿಯರಿರುವರು. ವಿಜಯನು ವಿಜಯಾವತಿಗೂ ತ್ರಿಪೃಷ್ಠನು ಮೃಗಯಾವತಿಗೂ ಹುಟ್ಟಿದರು. ಕಿರಿಯರಸಿಯ ಮಗನಾದ ತ್ರಿಪೃಷ್ಠನೇ ಜ್ಯೋತಿರ್ಮಾಲೆಗೆ ಯೋಗ್ಯವರನೆಂದು ಶಕುನಿಗನು ಹೇಳಿದನು. ಜ್ವಳನಜಟಿ ಇಂದುವೆಂಬ ದೂತನನ್ನು ಮದುವೆಗೆ ಸಂಬಂಧಿಸಿದ ಮಾತುಕತೆಯಾಡಲು ಪ್ರಜಾಪತಿಯಲ್ಲಿಗೆ ಅಟ್ಟಿದನು. ಪ್ರಜಾಪತಿಯು ವಿವಾಹ ಸಂಬಂಧಕ್ಕೆ ಒಪ್ಪಿ ಕಾಣಿಕೆ ಕಳುಹಿಸಿದನು. ತ್ರಿಪೃಷ್ಠ-ಜ್ಯೋತಿರ್ಮಾಲೆಯರ ವಿವಾಹ ವೈಭವದಿಂದ ಜರುಗಿತು. ಆ ಸುದ್ದಿ ತಿಳಿದ ತ್ರಿಖಂಡಾಧಿಪತಿಯೂ ಅರ್ಧಚಕ್ರವರ್ತಿಯೂ ಆದ ಹಯಗ್ರೀವನು ಕೆರಳಿ ಜ್ಯೋತಿರ್ಮಾಲೆಯನ್ನು ಭುಜಬಲದಿಂದ ಕೊಂಡುತರುವ ತೀರ್ಮಾನಕ್ಕೆ ಬಂದು ಸೈನ್ಯದೊಡನೆ ನಡೆದನು ಘನಘೋರ ಯುದ್ಧ ನಡೆಯಿತು. ತ್ರಿಪೃಷ್ಠನ ಅಣ್ಣ ವಿಜಯನು ಅಶ್ವಗ್ರೀವನ ಮಗನಾದ ವಿಪುಳಕಂಠನನ್ನೂ ತಮ್ಮನಾದ ಸುಕಂಠನನ್ನೂ ಕೊಂದನು; ಅಶ್ವಗ್ರೀವನ ಅಳಿಯ ಕಾಮದೇವನನ್ನು ಗೆದ್ದನು. ಹೋರಾಟದಲ್ಲಿ ಅಶ್ವಗ್ರೀವ ನಿರಾಯುಧನೂ ನಿರ್ವಿದ್ಯನೂ ಆಗಲು ಕೆರಳಿದ ಆತ ಚಕ್ರವನ್ನು ಪ್ರಯೋಗಿಸಿದನು. 'ಕಡಗೊಂಡೊಂ ಕುಡುವಂತೆ' ಆ ಚಕ್ರವನ್ನು ಮರಳಿ ವಿಜಯನು ಬಿಡಲು ಅರಿಶಿರವು 'ಸೆಂದರದುಂಡಿಗೆ ಧರೆಗೆನಿಸಿ' ಬಿದ್ದಿತು. ಯುದ್ಧದಲ್ಲಿ ಹೋರಾಡಿ ಸತ್ತ ಪ್ರಖ್ಯಾತ ವೀರರಿಗೆಲ್ಲಾ ಶರೀರಪೂಜಾಪೂರ್ವಕ ಸಂಸ್ಕಾರ ವಿಧಿಯನ್ನು ಮಾಡಿ, ದಕ್ಷಿಣೋತ್ತರ ಶ್ರೇಣಿಗಳೆರಡನ್ನೂ ಜ್ವಳನಜಟಿಗೆ ಕೊಟ್ಟು ತ್ರಿಪೃಷ್ಠ ತ್ರಿಖಂಡಮಂಡಲಾಧಿಪತ್ಯವನ್ನು ಹೊಂದಿ ಪೌದನಪುರಕ್ಕೆ ಮರಳಿದನು. ಜ್ವಳನಜಟಿಗೆ ವಿರಕ್ತಿಯುಂಟಾಗಿ ಮಗನಾದ ಅರ್ಕಕೀರ್ತಿಯನ್ನು ಪಟ್ಟಕ್ಕೇರಿಸಿ ಅಭಿನಂದನ ಗುರುಗಳ ಪಕ್ಕದಲ್ಲಿ ತಪಸ್ಸಿಗೆ ಕುಳಿತನು. ಅಗ್ರಮಹಿಷಿಯಾದ ವಾಯುವೇಗೆ ಶ್ರೀಮತಿ ಎಂಬ ಆರ್ಯಿಕೆಯ ಸಮೀಪದಲ್ಲಿ

ಜೈನದೀಕ್ಷೆಯನ್ನು ಸ್ವೀಕರಿಸಿದಳು. ಈ ಸುದ್ದಿ ತಿಳಿದ ಪ್ರಜಾಪತಿಯೂ ವಿಜಯ ನನ್ನು ಅಧಿರಾಜ್ಯದಲ್ಲಿ ನಿಲ್ಲಿಸಿ ಪಿಹಿತಾಸ್ರವರೆಂಬ ಮುನಿಗಳ ಬಳಿ ಸನ್ಯಸನ ಸ್ವೀಕರಿಸಿದನು. ಜ್ವಳನಜಟಿಯ ಮಗನಾದ ಅರ್ಕಕೀರ್ತಿಗೆ ಅಮಿತತೇಜ ನೆಂಬ ಮಗ ಜನಿಸಿದನು. ಖೇಚರೇಂದ್ರ, ಮನವಿಟ್ಟು ಕೇಳು, ಆ ಅಮಿತ ತೇಜನೇ ನಾನು. ನನಗೆ ಕಿರಿಯವಳು ಸುತಾರೆ.

ತ್ರಿಪೃಷ್ಠ ಹಾಗೂ ಸ್ವಯಂಪ್ರಭೆಯರಿಗೆ ಶ್ರೀವಿಜಯ, ವಿಜಯ, ಜ್ಯೋತಿಃಪ್ರಭೆ ಎಂಬ ಮೂವರು ಮಕ್ಕಳಾದರು. ವಾಸುದೇವನಾದ ತ್ರಿಪೃಷ್ಠನು ಎಂಭತ್ತೊಂದು ಲಕ್ಷ ವರುಷ ಬಾಳಿ ಕೊನೆಗೆ ದೇಹತ್ಯಜಿಸಿ ಏಳನೆಯ ನರಕಕ್ಕೆ ಇಳಿದನು. ತಮ್ಮನ ಮರಣಾನಂತರ ವಿಜಯನು ತಮ್ಮನ ಹಿರಿಯ ಮಗನಾದ ಶ್ರೀವಿಜಯನಿಗೆ ಪಟ್ಟಗಟ್ಟಿ ಪಿಹಿತಾಸ್ರವಗುರುಗಳ ಸಮೀಪದಲ್ಲಿ ದೀಕ್ಷೆಸ್ವೀಕರಿಸಿ ಪರಿವ್ರಾಜಕತ್ವವನ್ನು ಧರಿಸಿ ಮುಕ್ತಿಶ್ರೀಯನ್ನು ಪಡೆದನು.

ಅರ್ಕಕೀರ್ತಿಯು ಅಮಿತತೇಜನಾದ ನನಗೆ ರಾಜ್ಯವಿತ್ತು ಅಭಿನಂದನ ಮುನಿಮುಖ್ಯನ ಪಕ್ಕದಲ್ಲಿ ದಿಗಂಬರನಾದನು. ಅಂದಿನ ಶ್ರೀವಿಜಯನೇ ನೀನಾಗಿರುವೆ. ಶ್ರೀಗೆ ವಿಜಯಕ್ಕೆ ಮೊತ್ತಮೊದಲಿಗನಾಗಿ ಸಕಲರಾಜರನ್ನು ವಿಧೇಯರನ್ನಾಗಿಸಿ ಶ್ರೀವಿಜಯನೆಂಬ ಹೆಸರನ್ನು ಚಕ್ರವರ್ತಿ ತ್ರಿಪೃಷ್ಠನ ಮಗ ನಾದ ನೀನು ಅನ್ವರ್ಥವಮಾಡಿದೆ ಎಂದು ಅಚ್ಯುತೇಂದ್ರನು ಖೇಚರನಿಗೆ ಹೇಳಿ ಮತ್ತೆ ಪೂರ್ವ ಭವದ ವಿವರವನ್ನು ಹೇಳತೊಡಗಿದನು.

ಶ್ರೀವಿಜಯನು ತಮ್ಮನೊಡಗೂಡಿ ತಂಗೆ ಜ್ಯೋತಿಃಪ್ರಭೆಗೆ ಸ್ವಯಂ ವರವನ್ನು ಏರ್ಪಡಿಸಿ ರಾಜಕುಮಾರರುಗಳಿಗೆ ಕರೆಕಳುಹಿಸಿದನು. ಸೋದರ ಮಯ್ದುನನಾದ ಅಮಿತತೇಜನನ್ನು ಶ್ರೀವಿಜಯ ಕರೆಯಿಸಿದನು. ಸ್ವಯಂವರ ಶಾಲೆಯಲ್ಲಿ ರಾಜಕುಮಾರರು ಪೀಠಸ್ಥರಾಗಿರಲು ಅವರಲ್ಲಿ ಅಮಿತತೇಜನಿಗೆ ಜ್ಯೋತಿಃಪ್ರಭೆ ಮಾಲೆಹಾಕಿದಳು. ಜ್ಯೋತಿಃಪ್ರಭೆಯನ್ನು ಮದುವೆಯಾಗಿ ಪತ್ನಿಯೊಂದಿಗೆ ಅಮಿತತೇಜ ರಥನೂಪುರ ಚಕ್ರವಾಳಪುರವನ್ನು ಪ್ರವೇಶಿಸಿ ದನು. ಅಮಿತತೇಜ ತನ್ನ ತಂಗಿ ಸುತಾರೆಗೆ ಸ್ವಯಂವರವನ್ನು ಏರ್ಪಡಿಸಿ ದನು. ಶ್ರೀವಿಜಯನೇ ಮೊದಲಾದ ರಾಜಕುಮಾರರು ಸುತಾರೆಯ ಕೈಹಿಡಿ ಯಲು ಬಂದರು. ಸುತಾರೆ ಶ್ರೀವಿಜಯನಿಗೆ ಮಾಲೆ ಊಡಿದಳು. ಪತ್ನಿ ಯೊಂದಿಗೆ ಶ್ರೀವಿಜಯ ಪೌದನಪುರಕ್ಕೆ ಮರಳಿದನು.

ಶ್ರೀವಿಜಯನು ಓಲಗಗೊಟ್ಟಿರಲು ಅಮೋಘಜಿಹ್ವನೆಂಬ ಶಕುನ ಪಂಡಿತನು ಅಲ್ಲಿಗೆ ಬಂದು ಇಂದಿಗೆ ಏಳನೆಯ ದಿವಸಕ್ಕೆ ಅರಸನ ತಲೆಯ ಮೇಲೆ ಸಿಡಿಲುಬಡಿಯುವುದೆಂದು ಶಕುನ ನುಡಿದನು. ಅದನ್ನು ತಪ್ಪಿಸಲು, ರಾಜನು ಏಳುದಿವಸಗಳವರೆವಿಗೆ ಜಿನಾಲಯದಲ್ಲಿ ಇರುವಂತೆಯೂ ರಾಜನ ಬದಲಿಗೆ ಸಿಂಹಾಸನದ ಮೇಲೆ ಯಕ್ಷಪ್ರತಿಮೆಯನ್ನು ಕೂರಿಸುವಂತೆಯೂ ಮಣಿವಿಭೂಷಣನೆಂಬ ಅಮಾತ್ಯಶ್ರೇಷ್ಠನು ಸಲಹೆಯಿತ್ತನು. ಏಳನೆಯ ದಿವಸ ಸಿಂಹಾಸನದ ಮೇಲೆ ಇರಿಸಿದ್ದ ಯಕ್ಷಪ್ರತಿಮೆಯು ಸಿಡಿಲಿನ ಹೊಡೆತದಿಂದ ಚೂರು ಚೂರಾಯಿತು. ಸಂತೋಷಗೊಂಡ ಶ್ರೀವಿಜಯ ಶಕುನಿಗನಾದ ಅಮೋಘಜಿಹ್ವನಿಗೆ ಬಹುಮಾನವಿತ್ತು ಅವನನ್ನು ಕಳುಹಿಸಿದನು. ಅರಸನಿಗಿದ್ದ ಕಂಟಕ ಕಳೆಯಲು ಆ ಸುದ್ದಿಯನ್ನು ಸಚಿವೋತ್ತಮನು ಸ್ವಯಂಪ್ರಭೆಗೆ ತಿಳಿಸಿ ಹರ್ಷವನ್ನುಂಟುಮಾಡಿದನು. ಆಗ ಅಲ್ಲಿಗೆ ಖೇಚರನೋರ್ವನು ಬಂದು ಹೀಗೆಂದು ಬಿನ್ನವಿಸಿದನು:

ನಾನು ಸಂಭಿನ್ನನೆಂಬ ಶಕುನಿಗನ ಮಗನು. ನಾನು ಮತ್ತು ನನ್ನ ತಂದೆ ಆಕಾಶದಲ್ಲಿ ಬರುತ್ತಿರಲು ಸುತಾರೆ ಸಹಾಯ ಯಾಚಿಸಿ ಕೂಗುತ್ತಿರುವುದನ್ನು ಕೇಳಿ ಅವಳಿದ್ದಲ್ಲಿಗೆ ಹೋಗಿ ಧೈರ್ಯನೀಡಿದೆವು. ಅಶನಿಘೋಷನು ನನ್ನ ಗಂಡನನ್ನು ಸೋಲಿಸಿ ಜ್ಯೋತಿರ್ವನದಿಂದ ನನ್ನನ್ನು ಹೊತ್ತುತಂದು ತನ್ನ ಪಟ್ಟಣಕ್ಕೆ ಕೊಂಡೊಯ್ಯುತ್ತಿರುವನು. ಆದಕಾರಣ ನೀವು ನನ್ನ ಗಂಡನನ್ನು ರಕ್ಷಿಸುವುದು. ತಡಮಾಡಿದರೆ ನನ್ನನ್ನು ಕಾಣದೆ ಪ್ರಾಣತ್ಯಜಿಸುವನು–ಎಂದು ಸುತಾರೆ ಹೇಳಲು ನಾವು ಜ್ಯೋತಿರ್ವನಕ್ಕೆ ಬಂದೆವು. ಅಲ್ಲಿ ಸುತಾರೆಯ ರೂಪಧರಿಸಿದ ಅಶನಿಘೋಷನ ಬಹುರೂಪಿಣಿ ವಿದ್ಯೆಯು ಹಾವು ಕಚ್ಚಲ್ಪಟ್ಟು ಸತ್ತುಬಿದ್ದಿದ್ದಿತು. ಸುತಾರೆಯೆಂದೇ ಭ್ರಮಿಸಿ ಸುಡಲು ಚಿತಾರೂಢನಾಗಿದ್ದ ಶ್ರೀವಿಜಯನನ್ನು ಹೊರತೆಗೆದು ನನ್ನ ತಂದೆ ಆ ಬಹುರೂಪಿಣೀ ವಿದ್ಯೆಯನ್ನು ಗೋಳುಗುಟ್ಟಿಸಿದನು. ಶ್ರೀವಿಜಯನೊಂದಿಗೆ ನನ್ನ ತಂದೆ ಅಮಿತ ತೇಜನ ಬಳಿಗೆ ಹೋಗುತ್ತಾ ಸುದ್ದಿ ಮುಟ್ಟಿಸಲು ನಿಮ್ಮಲ್ಲಿಗೆ ನನ್ನನ್ನು ಅಟ್ಟಿದನು–ಎಂದನು. ಸ್ವಯಂಪ್ರಭೆ ರಥನೂಪುರ ಚಕ್ರವಾಳಪುರಕ್ಕೆ ಬಂದಳು.

ಅಮಿತತೇಜನು ಶ್ರೀವಿಜಯನಿಗೆ ಹೇತಿವಿದಾರಿಣಿ ಹಾಗೂ ಬಂಧವಿಮೋಚಿನಿ ಎಂಬ ಎರಡು ವಿದ್ಯೆಗಳನ್ನು ಕೊಟ್ಟು ತನ್ನ ಮಗನೊಡನೆ ಅಶನಿ

ಘೋಷನೊಡನೆ ಯುದ್ಧಮಾಡಲು ಕಳುಹಿಸಿ ತಾನೂ ಮಹಾಬಳವೆಂಬ ಹೆಸರಿನ ವಿದ್ಯೆಯನ್ನು ಸಾಧಿಸಿಕೊಂಡು ಆ ವಿದ್ಯೆಯೊಂದಿಗೆ ಚಂಪಾಪುರಕ್ಕೆ ಬಂದನು. ಅಶನಿಘೋಷನು ತನ್ನ ಬಹುರೂಪಿಣಿ ವಿದ್ಯಾಪ್ರಭಾವದಿಂದ ಶ್ರೀವಿಜಯನೊಂದಿಗೆ ಕಾದುತ್ತಿದ್ದನು. ಅಮಿತತೇಜನು ಬರಲು ಅಶನಿಘೋಷನ ವಿದ್ಯೆಗಳು ಶಕ್ತಿಗುಂದಿದುವು; ಸೈನಿಕರು ಹಿಂದೆ ಸರಿದರು. ಭಯಕಂಪಿತನಾದ ಅಶನಿಘೋಷ ದಿಕ್ಕುಗೆಟ್ಟು ಓಡಿದನು. ಅಮಿತತೇಜ ಅವನನ್ನು ಕೊಂದಲ್ಲದೆ ಬಿಡೆನೆಂದು ತನ್ನ ವಿದ್ಯೆಗಳಿಗೆ ಅವನ ಬೆನ್ನುಹತ್ತುವಂತೆ ಆಜ್ಞೆಮಾಡಿದನು. ಅಪರಣನಾಶಿಕ್ಯನಗರದ ಸಮೀಪದಲ್ಲಿರುವ ಗಜಧ್ವಜ ಪರ್ವತದ ಮೇಲಿದ್ದ ವಿಜಯಕೇವಳಿಯನ್ನು ಕಂಡು ಅಶನಿಘೋಷನ ಭಯ, ಹಾಗೂ ಅಮಿತತೇಜನ ಕ್ರೋಧ ಮಾಯವಾದುವು. ಅಲ್ಲಿಗೆ ಸುತಾರಾಸಮೇತ ಸ್ವಯಂಪ್ರಭೆಯೂ ಬಂದಳು. ಧರ್ಮವನ್ನು ಕೇಳಿದ ಮೇಲೆ ಅಮಿತತೇಜನು ವಿಜಯಕೇವಳಿಯನ್ನು "ನನ್ನ ತಂಗೆ ಸುತಾರೆಯ ಮೇಲೆ ಅಶನಿಘೋಷನಿಗೇಕೆ ಮುನಿಸಾಯಿತು ? ಏಕೆ ಅವಳನ್ನು ಕದ್ದನು ? ಇದನ್ನು ತಿಳಿಸು" ಎಂದು ಕೇಳಲು ಅದಕ್ಕೆ ಮುನಿ ಅವರ ಪೂರ್ವಭವಗಳ ವಿವರವನ್ನು ತಿಳಿಸಿದನು. ಅಶನಿಘೋಷ ಜೈನದೀಕ್ಷೆಯನ್ನು ಸ್ವೀಕರಿಸಿದನು. ಸ್ವಯಂಪ್ರಭಾದೇವಿಯೂ ದೀಕ್ಷೆ ಸ್ವೀಕರಿಸಿದಳು. ಅಮಿತತೇಜ ಹಾಗೂ ಶ್ರೀವಿಜಯರು ಮುನಿಗೆ ನಮಸ್ಕರಿಸಿ ತಮ್ಮ ತಮ್ಮ ರಾಜಧಾನಿಗೆ ಮರಳಿದರು.

ಪೌದನಪುರದ ನಂದನವನದಲ್ಲಿರುವ ಚೈತ್ಯಾಲಯದಲ್ಲಿ ಗುರುದೇವ, ಅಮರದೇವರೆಂಬ ಚಾರಣರು ಬಂದು ನೆಲಸಿರಲು ಅವರಲ್ಲಿಗೆ ಶ್ರೀವಿಜಯನು ಬಂದು "ನನ್ನ ತಂದೆ ತ್ರಿಪೃಷ್ಠನಿಗೆ ತ್ರಿಖಂಡಚಕ್ರವರ್ತಿಪದವು ಪ್ರಾಪ್ತವಾದ ಬಗೆಯನ್ನು ವಿವರಿಸಿ" ಎಂದು ಕೇಳಲು ಗುರುದೇವ ಮುನೀಂದ್ರನು ಹೀಗೆಂದನು : ಪೂರ್ವವಿದೇಹದಲ್ಲಿ ಶ್ರೀಯಾಂಸ್ರರೆಂಬ ತೀರ್ಥಂಕರರ ಗಣದೇವರು ತ್ರಿಷಷ್ಟಿಶಲಾಕಾಪುರುಷಪುರಾಣ ಪ್ರಸ್ತಾವದಲ್ಲಿ ಬಂದ ಮೊದಲ ಅರ್ಧಚಕ್ರವರ್ತಿಯಾದ ತ್ರಿಪೃಷ್ಠನ ಕಥೆಯನ್ನು ಹೇಳಲು ಅದನ್ನು ನಾವು ಆಲಿಸಿದೆವು. ಅದು ಹೀಗಿದೆ :

ಭರತಕ್ಷೇತ್ರದ ಮಗಧ ವಿಷಯದ ರಾಜಗೃಹವನ್ನು ವಿಶ್ವಭೂತಿ ಆಳುತ್ತಿದ್ದನು–ಅವನ ಪತ್ನಿ ಜೈನೆಗೆ ವಿಶ್ವನಂದಿ ಎಂಬ ಮಗನಾದನು. ರಾಜನ

ತಮ್ಮನಾದ ವಿಶಾಖಭೂತಿಗೆ ಸುಲಕ್ಷಣೆ ಎಂಬ ಪತ್ನಿಯಿಂದ ವಿಶಾಖನಂದಿ ಎಂಬ ಮಗನಾದನು. ವಿಶ್ವಭೂತಿಗೆ ಸಂಸಾರದಲ್ಲಿ ನಿರ್ವೇಗ ತಲೆದೋರಲು ವಿಶಾಖಭೂತಿಯನ್ನು ಅಧಿರಾಜ ಪದವಿಯಲ್ಲೂ ವಿಶ್ವನಂದಿಯನ್ನು ಯುವರಾಜ ಪದವಿಯಲ್ಲೂ ನಿಲ್ಲಿಸಿ ಶ್ರೀಧರಗುರುಗಳ ಶಿಷ್ಯನಾಗಿ ಮೋಕ್ಷಲಕ್ಷ್ಮಿಗೆ ಅಧಿಪತಿಯಾದನು. ವಿಶ್ವನಂದಿ ಪಟ್ಟಣದ ಹೊರಭಾಗದಲ್ಲಿ ಸುಂದರವಾದ ನಂದನ ವನವನ್ನು ನಿರ್ಮಿಸಿದನು. ಶತ್ರುಗಳು ಬಲಿಷ್ಠರಾಗಿ ಮರ್ಯಾದೆ ಮೀರಿದಾಗ ವಿಶಾಖನಂದಿ ಅವರನ್ನು ಪ್ರಧ್ವಂಸನಮಾಡಲು ಹೊರಟನು.. ಆಗ ವಿಶ್ವನಂದಿ ಅವನನ್ನು ತಡೆದು ಚತುರಂಗಬಲದೊಂದಿಗೆ ನಡೆದು ಶತ್ರುರಾಜರನ್ನು ಗೆದ್ದು ಬಂದನು. ತಾನು ನಿರ್ಮಿಸಿದ್ದ ಉದ್ಯಾನವನವನ್ನು ತಾನಿಲ್ಲದ ವೇಳೆಯಲ್ಲಿ ವನಪಾಲಕರಿಂದ ಕಸಿದು ಆಕ್ರಮಿಸಿಕೊಂಡಿದ್ದ ವಿಶಾಖನಂದಿಯನ್ನು ಓಡಿಸಿ ತನ್ನ ವಶಕ್ಕೆ ಅದನ್ನು ವಿಶ್ವನಂದಿ ತೆಗೆದುಕೊಂಡನು. ವಿಶಾಖಭೂತಿ ವಿಶ್ವನಂದಿಯನ್ನು ತನ್ನ ಬಳಿಗೆ ಕರೆಯಿಸಿ ವಿಶಾಖನಂದಿ ಮಾಡಿದ ತಪ್ಪನ್ನು ಕ್ಷಮಿಸುವಂತೆ ಹೇಳಿ ವಿಶಾಖನಂದಿಯಿಂದ ಅವನ ಕಾಲನ್ನು ಹಿಡಿಯಿಸಿ ಹಿಂದಿನಂತೆ ಸುಖದಿಂದ ರಾಜ್ಯಭಾರಮಾಡುತ್ತಿದ್ದನು. ವಿಶಾಖಭೂತಿಗೆ ವೈರಾಗ್ಯ ತಲೆದೋರಲು ವಿಶ್ವನಂದಿಯನ್ನು ಕರೆದು ರಾಜ್ಯಭಾರ ಸ್ವೀಕರಿಸು ಎಂದನು. ನೀವಾದುದನ್ನು ನಾನೂ ಹೊಂದುವೆನೆಂದು ಹೇಳಿ ವಿಶಾಖಭೂತಿಯೊಡನೆ ವಿಶ್ವನಂದಿ ದಿಗಂಬರ ದೀಕ್ಷೆಯನ್ನು ಸ್ವೀಕರಿಸಿದನು. ವಿಶಾಖನಂದಿ ಅಧಿರಾಜಪದವಿಯಲ್ಲಿ ನಿಂತನು. ವಿಶಾಖಭೂತಿಯು ಸತ್ತು ಶತಾರಕಲ್ಪದಲ್ಲಿ ಸಾಮಾನಿಕದೇವನಾದನು. ವಿಶ್ವನಂದಿ ವಿಹರಿಸುತ್ತ ಉತ್ತರ ಮಧುರೆಗೆ ಬಂದು ಮಾಸೋಪವಾಸದ ಪಾರಣೆಗೆಂದು ಭಿಕ್ಷೆ ಸ್ವೀಕರಿಸಲು ಬರುತ್ತಿರುವಾಗ ಕೆರಳಿದ ಗೂಳಿಯೊಂದು ಅವನನ್ನು ತನ್ನ ಕೊಂಬಿನಿಂದ ತಿವಿದು ಗಾಯಗೊಳಿಸಿತು. ಆ ವೇಳೆಯಲ್ಲಿ ಸೂಳೆಗೇರಿಯಲ್ಲಿ ಸುಳಿದಾಡುತ್ತಿದ್ದ ವಿಶಾಖನಂದಿ ಅಲ್ಲಿಗೆ ಬಂದು ಮರ್ಮಾಘಾತವಾಗುವಂತೆ ಅವಹೇಳನ ಮಾಡಿದನು. ಆಗ ಮುನಿಪತಿ ಮುನಿದು 'ನೀನು ಎಲ್ಲಿ ಹುಟ್ಟಿದರೂ ನಿನ್ನನ್ನು ಕೊಲ್ಲದೆ ಬಿಡೆನು' ಎಂದು ರೌದ್ರಪರಿಣಾಮದಿಂದ ಜೀವಬಿಟ್ಟು ವಿಶಾಖಭೂತಿ ಹುಟ್ಟಿದ ಆ ಶತಾರಕಲ್ಪದಲ್ಲಿಯೇ ಸಾಮಾನಿಕ ದೇವನಾಗಿ ಹುಟ್ಟಿದನು. ತನ್ನ ಚಿಕ್ಕ ತಂದೆ (ವಿಶಾಖಭೂತಿ) ಹಾಗೂ ತಾನು ಚಕ್ರವರ್ತಿ ಪ್ರಜಾಪತಿ ಮಹಾರಾಜನಿಗೆ ಬಲದೇವ (ವಿಜಯ) ವಾಸುದೇವ

(ತ್ರಿಪೃಷ್ಠ)ರಾಗಿ ಜನಿಸಿದರು. ವಿಶಾಖನಂದಿಯು ಸತ್ತು ಅನೇಕ ಜನ್ಮಗಳನ್ನು ದಾಟಿ ಬಂದು ಐರಾವತ ತೀರದ ಕಾನನದ ಆಶ್ರಮದಲ್ಲಿ ವೈಖಾನಸಕುಲಪತಿ ಯಾದ ಮಹಾಜಟಿ ಹಾಗೂ ಆತನ ಹೆಂಡತಿ ಜಯಾಮಾನಿನಿಗೆ ಸುಜಟನೆಂಬ ಮಗನಾಗಿ ಬಳೆದು ಜಿನದೀಕ್ಷೆ ಹೊಂದಿ ಕೊನೆಗೆ ಅಸುರನಾಗಿ ಹಿಂದಣ ಪ್ರತಿಜ್ಞೆ ಯಂತೆ ಅಶ್ವಗ್ರೀವನೆಂಬ ಖೇಚರನಾದನು. ಪುರಾತನ ವೈರದಿಂದ ಆ ತ್ರಿಪೃ ಷ್ಠನ ಕೈಯಿಂದ ಆತ ಸಾವನ್ನಪ್ಪಿದನು. ಹೀಗೆಂದು ದೇವಗುರು ಹೇಳಲು ತಂದೆಯ ಭವಾವಳಿಯನ್ನು ತಿಳಿದು ಶ್ರೀವಿಜಯನು ವಿನಯದಿಂದ ಕೂಡಿ ನಮಸ್ಕರಿಸಿ ಅರಮನೆಗೆ ಮರಳಿದನು.

ಅಮಿತತೇಜ ಹಾಗೂ ಶ್ರೀವಿಜಯನು ಬೇಸಗೆಯಲ್ಲಿ ವನಕೇಳಿಯಲ್ಲಿರಲು ವಿಪುಳರು, ಅಚಳರು ಎಂಬ ಮುನಿಗಳನ್ನು ಕಂಡು ಅವರಿಗೆ ವಂದಿಸಿ ಧರ್ಮ ವನ್ನು ಕೇಳಿ ತಮ್ಮಲ್ಲಿ ಭೋಗಲಾಲಸೆ ಇನ್ನೂ ಏಕೆ ಕೊನೆಗೊಂಡಿಲ್ಲವೆಂದು ಪ್ರಶ್ನಿಸಿದರು. ಮುನಿನಾಥರು ಅವರಿಗೆ ಇನ್ನು ನಿಮಗೆ ಇಪ್ಪತ್ತಾರುದಿವಸ ಆಯುಷ್ಯವೆಂದು ಹೇಳಿ ಹೋದರು. ಮಯ್ದುನರೀರ್ವರೂ ಬಾಹ್ಯ ಅಭ್ಯಂತರ ಪರಿಗ್ರಹಗಳನ್ನು ನಿವಾರಿಸಿ ತಮ್ಮ ಮಕ್ಕಳಾದ ಸುತೇಜ ಹಾಗೂ ಶ್ರೀದತ್ತ ರನ್ನು ರಾಜ್ಯದಲ್ಲಿ ನಿಲ್ಲಿಸಿ ಪ್ರಾಯೋಪಗಮನದಿಂದ ಈರ್ವರೂ ಶರೀರತ್ಯಾಗ ಮಾಡಿದರು. ಅಮಿತತೇಜನು ಮಣಿಚೂಳನೆಂಬ ದೇವನಾಗಿಯೂ ಶ್ರೀವಿಜ ಯನು ಮಣಿಚೂಳನೆಂಬ ದೇವನಾಗಿಯೂ ಜನ್ಮವೆತ್ತಿದರು. ಅವರೀರ್ವರೂ ಮಿತ್ರರಾಗಿ ಪವಿತ್ರಸ್ಥಾನಗಳಿಗೆಲ್ಲಾ ಹೋಗಿ ಬಂದು ಸತ್ತು ಪೂರ್ವವಿದೇಹದ ವತ್ಸಕಾವತೀವಿಷಯದ ಪ್ರಭಾಕರೀಪುರವನ್ನಾಳುವ ಸ್ತಿಮಿತಸಾಗರನಿಗೂ ವಸುಂಧರೆಗೂ ಮಣಿಚೂಳನಾದ ನಾನು ಅಪರಾಜಿತನೆಂಬ ಹೆಸರಿನಲ್ಲಿ ಬಲದೇವನಾದೆನು. ಸ್ತಿಮಿತಸಾಗರನಿಗೂ ವಸುಮತಿಗೂ ಮಣಿಚೂಳನಾದ ನೀನು ಅನಂತವೀರ್ಯನೆಂಬ ಹೆಸರಿನಲ್ಲಿ ವಾಸುದೇವನಾದೆ ಎಂದು ಖೇಚರನಿಗೆ ಅಚ್ಯುತೇಂದ್ರನು ತಿಳಿಸಿದನು. ಮತ್ತೆ ಭವಸಂಬಂಧಿಯಾದ ವಿಚಾರವನ್ನು ಖೇಚರನಿಗೆ ಅಚ್ಯುತೇಂದ್ರನು ವಿವರಿಸುತ್ತಾ ಹೀಗೆಂದನು :

ದಮಿತಾರಿಯನ್ನು ಕೊಂದಮೇಲೆ ಅರ್ಧಚಕ್ರವರ್ತಿಯಾಗಿ ನೀನು ನಿನ್ನ ಆಯು ಮುಗಿಯಲು ರತ್ನಪ್ರಭೆಯೆಂಬ ಮೊದಲ ನರಕದಲ್ಲಿ ಹದಿಮೂರು ಇಂದ್ರಕಗಳೊಳಗೆ ಚಂದ್ರಕವೆನ್ನುವ ಮೊದಲ ಇಂದ್ರಕದಲ್ಲಿ 42,000 ವರ್ಷ

ಮಧ್ಯಮಾಯಷ್ಯನಾಗಿ ಹುಟ್ಟಿದೆ. ನಾನು ನಿನ್ನ ವಿಯೋಗದುಃಖದಿಂದ ಸನ್ಯ
ಸನ ಹೊಂದಿ ಪ್ರಾಯೋಪಗಮನದಿಂದ ದೇಹವನ್ನು ತೊರೆದು ಅಚ್ಯುತೇಂದ್ರ
ನಾದೆನು. ನರಕದಲ್ಲಿ ನೋವುಂಡು ನೀನು ಗಗನವಲ್ಲಭಪುರವನ್ನಾಳುವ ಸಿಂಹ
ನಾದ–ಮೇಘಮಾಲಿನಿ ದಂಪತಿಗಳಿಗೆ ಮೇಘನಾದನೆಂಬ ಮಗನಾದೆ, ತಂದೆಯ
ನಂತರ ವಿಯಚ್ಚರ ಚಕ್ರವರ್ತಿತ್ವವನ್ನು ಪಡೆದು ಐನೂರುಮಂದಿ ಮಕ್ಕಳೊ
ದಿಗೆ ಇಲ್ಲಿಯವರೆವಿಗೂ ರಾಜ್ಯಭಾರಮಾಡಿ ನೀನು ಇಂದು ವಂದನಾಭಕ್ತಿಗ
ಬಂದುದರಿಂದ ಓರೋರ್ವರನ್ನು ಕಂಡು ಪ್ರೀತಿಯಾಯಿತು. ಸಮ್ಯಗ್ದರ್ಶನ
ವನ್ನು ಅವಲಂಬಿಸಿ ಮೋಹಾಂಧದ ಬಂಧನದಿಂದ ನಿನ್ನನ್ನು ನೀನು ಬಿಡಿಸಿ
ಕೊಳ್ಳುವುದರಲ್ಲಿ ತೊಡಗು–ಎಂದು ಅಚ್ಯುತೇಂದ್ರನು ಹಿತನುಡಿದು ಅಚ್ಯುತ
ಕಲ್ಪಕ್ಕೆ ನಡೆದನು.

ಮೇಘನಾದನು ವಿರಕ್ತಿಹೊಂದಿ ಅಭಿನಂದನರೆಂಬ ವೃದ್ಧಯೋಗಿಗಳಿಂದ
ಜೈನದೀಕ್ಷೆ ಸ್ವೀಕರಿಸಿ, ಮಹೋಪಸರ್ಗಗಳನ್ನೆಲ್ಲಾ ಸೈರಿಸಿ, ಪ್ರಾಣಬಿಟ್ಟು,
ಅಚ್ಯುತಕಲ್ಪದಲ್ಲಿ ಪ್ರತೀಂದ್ರ ಪದವನ್ನು ಪಡೆದು ತನ್ನ ಅಣ್ಣ ಅಚ್ಯುತೇಂದ್ರನ
ಜೊತೆಗೂಡಿದನು.

ಅಚ್ಯುತೇಂದ್ರನು ಪೂರ್ವವಿದೇಹದ ಸೀತಾನದಿಯ ತೆಂಕಣ ತಡಿಯ
ಮಂಗಳಾವತೀ ವಿಷಯದ ರತ್ನಸಂಚಯಪುರವನ್ನಾಳುವ ಕ್ಷೇಮಂಕರ
ತೀರ್ಥಕರ ನೃಪಕುಮಾರನಿಗೂ ಆತನ ಹೆಂಡತಿ ಕನಕಚಿತ್ರೆಗೂ ವಜ್ರಾ
ಯುಧನೆಂಬ ಮಗನಾಗಿ ಹುಟ್ಟಿದನು. ವಜ್ರಾಯುಧನು ಲಕ್ಷ್ಮೀವತಿ
ಯನ್ನು ಮದುವೆಯಾದನು. ಪ್ರತೀಂದ್ರನೇ ಇವರಿಗೆ ಸಹಸ್ರಾಯುಧನೆಂಬ
ಮಗನಾಗಿ ಹುಟ್ಟಿದನು. ಸಹಸ್ರಾಯುಧನು ಮನೋಹರಿ ಎನ್ನುವವಳನ್ನು
ಮದುವೆಯಾಗಿ ಕನಕಶಾಂತಿ ಎಂಬ ಮಗನನ್ನು ಪಡೆದನು. ಕ್ಷೇಮಂಕರನು
ಪರಮದೀಕ್ಷೆಯನ್ನು ಸ್ವೀಕರಿಸಿದನು. ಆ ಪರಮೇಶ್ವರನು ಕಿತ್ತು ಬಿಸುಟ ಕುಂತ
ಳಗಳನ್ನು ಉತ್ತರದಕ್ಷಿಣೇಂದ್ರರು ಪಂಚರತ್ನದ ತಟ್ಟೆಯಲ್ಲಿಟ್ಟು ಪಂಚಮಾಬ್ಧಿ
ಯಲ್ಲಿ ಅದನ್ನು ಚೆಲ್ಲಿದರು.

ವಜ್ರಾಯುಧನ ಸಭೆಗೆ ಚಾರ್ವಾಕನೋರ್ವನು ಬಂದು ಜೈನಸಿದ್ಧಾಂ
ತದ ಮೂಲವನ್ನೇ ಪ್ರಶ್ನಿಸಹೊರಡಲು ಅವನ ವಾದವನ್ನು ಖಂಡಿಸಿ ಜೈನ

ಧರ್ಮದ ಹಿರಿಮೆಯನ್ನು ವಜ್ರಾಯುಧನು ಪ್ರತಿಪಾದಿಸಿದನು. ನಿರುತ್ತರನಾದ ಚಾರ್ವಾಕನನ್ನು ಅವಮಾನಿಸದೆ ದೊರೆ ವಿಶೇಷವಾಗಿ ಅವನನ್ನು ಮನ್ನಿಸಿದನು. ಈ ಗೌರವಗಳಿಂದ ನಾಚಿದ ಅವನನ್ನು ದೊರೆ "ಕಿಱುಕುಳನೊಳ್ ಪಡೆ[ದ ಗೆಲ್ಲ ದಿಂದಂ] ಪಿರಿಯನೊಳ್ ಪಡೆದ ಸೋಲಮುತ್ತಮಂ" ಎಂದು ಸಮಾಧಾನಿ ಸಿದನು. ವಜ್ರಾಯುಧ ಸುಖದಿಂದ ರಾಜ್ಯಭಾರಮಾಡುತ್ತಿರಲು ಆಯುಧಾ ಗಾರದಲ್ಲಿ ಚಕ್ರರತ್ನಹುಟ್ಟಿತೆಂದು ಆಯುಧಾಧ್ಯಕ್ಷನು ಬಂದು ಸಂತೋಷದ ಸುದ್ದಿ ತಿಳಿಸಿದನು. ಒಸಗೆಯ ಮೇಲೆ ಮತ್ತೊಂದೊಸಗೆ ಎನ್ನುವಂತೆ ಕ್ಷೇಮಂ ಕರನಿಗೆ ಕೇವಲ ಜ್ಞಾನಪ್ರಾಪ್ತವಾಯಿತೆನ್ನುವ ಸಂತಸದ ಸುದ್ದಿಯೂ ಬಂದು ಮುಟ್ಟಿತು. ಮಹೀಪತಿ ಅಂತಃಪುರ ಪರಿವಾರ ಜನ ಸಮೇತ ಸಮವಸರಣ ಭೂಮಂಡಳಕ್ಕೆ ಬಂದು ಜಿನಪತಿಗೆ ವಂದಿಸಿದನು.

ಚಕ್ರಪೂಜೆಮಾಡಿ ಪುರಾತನ ಚಕ್ರವರ್ತಿಗಳಂತೆ ವಜ್ರಾಯುಧನು ದಿಗ್ವಿಜಯಕ್ಕೆ ನಡೆದು ಷಟ್ಖಂಡಮಂಡಲವನ್ನು ಗೆದ್ದು ಸಂತೋಷದಿಂದ ಹಿಂತಿ ರುಗಿದನು. ವಜ್ರಾಯುಧನ ಮೊಮ್ಮಗನಾದ ಕನಕಶಾಂತಿಯು ಶಿವಮಂದಿರ ಪುರವನ್ನಾಳುವ ಮೇರುಮಾಳಿ ಹಾಗೂ ಆತನ ಹೆಂಡತಿ ಅಮಿತಮಾಳಿಯರ ಮಗಳು ಕನಕಮಾಳೆಯನ್ನು ಮದುವೆಯಾದನು. ವೃಷತ್ಕಾಸಾರಪುರವ ನ್ನಾಳುವ ಜಯಸೇನೆ ಹಾಗೂ ಆತನ ಹೆಂಡತಿ ಜಯಾಂಗನೆಯರ ಮಗಳಾದ ವಸಂತಸೇನೆಯನ್ನೂ ಕನಕಶಾಂತಿ ಮದುವೆಯಾದನು. ಒಂದು ದಿನ ತುಹಿ ನಾದ್ರಿಗೆ ಕ್ರೀಡಾನಿಮಿತ್ತ ಕನಕಶಾಂತಿ ಹೋಗಿ ಅಲ್ಲಿ ವಿಪುಳಮತಿಮುನೀಂ ದ್ರರನ್ನು ಕಂಡು ನಮಸ್ಕರಿಸಿ ಧರ್ಮವನ್ನು ಕೇಳಿ ವೈರಾಗ್ಯಹೊಂದಿ ಜಿನದೀಕ್ಷೆ ಯನ್ನು ಸ್ವೀಕರಿಸಿದನು, ಆತನ ಈರ್ವರು ಪತ್ನಿಯರು ರತ್ನಸಂಚಯಪುರಕ್ಕೆ ಬಂದು ಸಮ್ಯಜ್ಞಾನ ಸಮ್ಯಗ್ದರ್ಶನ, ಸಮ್ಯಗ್ಚಾರಿತ್ರ ಭೂಷಿತರಾಗಿ ವಿಮಳ ಮತಿಮುನಿಯ ಸನ್ನಿಧಾನಲ್ಲಿ ದೀಕ್ಷೆ ಸ್ವೀಕರಿಸಿದರು. ಕನಕಶಾಂತಿಯು ಉಪ ಸರ್ಗಗಳನ್ನೆಲ್ಲಾ ಸ್ಥೈರಿಸಿ ಕೇವಲ ಜ್ಞಾನವನ್ನು ಹೊಂದಿದನು. ಕನಕ ಶಾಂತಿಯನ್ನು ವಂದಿಸಿ ಬಂದಮೇಲೆ ವಜ್ರಾಯುಧನಿಗೆ ನಿರ್ವೇಗವಾಗಿ ರಾಜ್ಯ ವನ್ನು ಮಗನಿಗೆ ಒಪ್ಪಿಸಿ ಕ್ಷೇಮಂಕರ ತೀರ್ಥಕರಪರಮದೇವರು ಗುರುಗಳಾ ಗಲು ಮೂರುಸಾವಿರ ಮಹೀನಾಥರೊಡನೆ ಸನ್ಯಸನ ಸ್ವೀಕರಿಸಿದನು.

ವಜ್ರಾಯುಧಮುನಿ ಕೇವಲಜ್ಞಾನಪಡೆದುದನ್ನು ತಿಳಿದ ಸಹಸ್ರಾಯು
ತನ್ನ ಮಗನಾದ ಪ್ರೀತಿಂಕರನಿಗೆ ರಾಜ್ಯವನ್ನೊಪ್ಪಿಸಿ ಪಿಹಿತಾಸ್ರವಗುರುಗಳ
ಬಳಿ ದೀಕ್ಷೆಯನ್ನು ಸ್ವೀಕರಿಸಿದನು. ಸಿದ್ಧಾದ್ರಿಯಲ್ಲಿ ವಜ್ರಾಯುಧಮುನಿಯ
ಪ್ರಾಯೋಪಗಮನದಿಂದ ದೇಹತ್ಯಜಿಸಿ ಪ್ರೀತಿಂಕರ ವಿಮಾನದಲ್ಲಿ ಅಮಿ
ವಿಕ್ರಮನೆಂಬ ಅಹಮಿಂದ್ರನಾದನು. ಸಹಸ್ರಾಯುಧಯೋಗಿಗಳ
ಪ್ರಾಯೋಪಗಮನದಿಂದ ದೇಹತ್ಯಜಿಸಿ ವಜ್ರಾಯುಧ ಹುಟ್ಟಿದ ವಿಮಾನದಲ್ಲಿ
ಕಾಂತಿಪ್ರಭನೆಂಬ ಅಹಮಿಂದ್ರನಾದನು.

ಪೂರ್ವ ವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಲಾವತಿಯ
ಪುಂಡರೀಕಿಣೀ ಪುರವನ್ನಾಳುವವನು ಘನರಥನೆಂಬ ದೊರೆ. ಆತನಿಗೆ ಮನೋ
ಹರೆ, ಪ್ರೀತಿಮತಿ ಎಂಬ ಈರ್ವರು ಹೆಂಡಿರು. ಅಮಿತವಿಕ್ರಮನು ಮನೋಹರೆಗ
ಮೇಘರಥನೆಂಬ ಮಗನಾಗಿಯೂ; ಕಾಂತಿಪ್ರಭನು ಪ್ರೀತಿಮತಿಗೆ ದೃಢರಥನೆಂಬ
ಮಗನಾಗಿಯೂ ಹುಟ್ಟಿದರು. ಇವರೀರ್ವರೂ ಯೌವನಸ್ಥರಾಗಲು ಮೇಘ
ರಥನಿಗೆ ಪ್ರಿಯಮಿತ್ರೆಯೆಂಬ ಕನ್ಯೆಯನ್ನೂ ಧೃಢರಥನಿಗೆ ಸುಮತಿಯೆಂಬ ಕನ್ಯೆ
ಯನ್ನೂ ತಂದು ವಿವಾಹಮಾಡಲಾಯಿತು. ಪ್ರಿಯಮಿತ್ರೆಗೆ ನಂದಿವರ್ಧನ
ನೆಂಬ ಮಗನೂ ಸುಮತಿಗೆ ವರಸೇನನೆಂಬ ಮಗನೂ ಹುಟ್ಟಿದರು. ಘನರಥನು
ಮೋಕ್ಷಾಪೇಕ್ಷಿಯಾಗಿ ಮಗ ಮೇಘರಥನಿಗೆ ರಾಜ್ಯವನ್ನು ಒಪ್ಪಿಸಿ ಸುದರ್ಶನ
ವೆಂಬ ಸಿಬಿಗೆಯನ್ನೇರಿ ನಂದನವನಕ್ಕೆ ನಡೆದನು. ಘನರಥನಿಗೆ ಕೇವಲಜ್ಞಾನ
ಪ್ರಾಪ್ತವಾದುದನ್ನು ಅರಿತ ಜೈನಶಾಸನಚೂಡಾಮಣಿಯಾದ ಮೇಘರಥನು
ಸಮವಸರಣ ಪ್ರದೇಶಕ್ಕೆ ಬಂದು ತ್ರಿಜಗಚ್ಚೂಡಾಮಣಿಗೆ ತ್ರಿಕರಣಶುದ್ಧಿ
ಯಿಂದ ನಮಸ್ಕರಿಸಿ, ಸ್ತುತಿಸಿ ಅಲ್ಲಿಂದ ಹೊರಬಂದು ಅರಮನೆಯನ್ನು ಪ್ರವೇ
ಸಿದನು. ಮನುಷ್ಯ ಸೌಂದರ್ಯ ಅಶಾಶ್ವತವೆಂಬುದನ್ನು ಒಮ್ಮೆ ಮನಗಂಡ
ಮೇಘರಥನು ನಿರ್ವೇಗಹೊಂದಿ ದೃಢರಥನಿಗೆ ಸಾಮ್ರಾಜ್ಯವನ್ನೊಪ್ಪಿಸಲು
ಹೊರಟಾಗ ಆತನೂ ಅದನ್ನೊಪ್ಪದೆ ಇರಲು ನಂದಿವರ್ಧನನಿಗೆ ಪಟ್ಟಗಟ್ಟಿ
ಘನರಥ ತೀರ್ಥಕರರಿಂದ ಈರ್ವರೂ ಜಿನದೀಕ್ಷೆ ಸ್ವೀಕರಿಸಿದರು. ಮೇಘರಥ
ಮಹಾಮುನೀಂದ್ರನು ತೀರ್ಥಕರಪುಣ್ಯವನ್ನು ಸಂಪಾದಿಸಿ ಸತ್ತು ಸರ್ವಾರ್ಥ
ಸಿದ್ಧಿಯಲ್ಲಿ ಮಹೇಂದ್ರನೆಂಬ ಅಹಮಿಂದ್ರನಾದನು. ದೃಢರಥಯತೀಂದ್ರನು
ಪ್ರಾಯೋಪಗಮನದಿಂದ ದೇಹತ್ಯಾಗಮಾಡಿ ಸರ್ವಾರ್ಥಸಿದ್ಧಿಯಲ್ಲಿ ಇಂದ್ರ

ಚಂದ್ರನೆಂಬ ಅಹಮಿಂದ್ರನಾದನು. ಮಹೇಂದ್ರನು ಹಸ್ತಿನಾಪುರದ ವಿಶ್ವ
ಸೇನ ಹಾಗೂ ಅವನ ಹೆಂಡತಿ ಐರಾದೇವಿಯರಿಗೆ ಶಾಂತಿನಾಥ ತೀರ್ಥಂಕರನು
ಮಗನಾಗಿ ಹುಟ್ಟುವುದಕ್ಕೆ ಆರುತಿಂಗಳಿದೆ ಎನ್ನುವಾಗಲೇ ಕುಬೇರನು
ಸುವರ್ಣವೃಷ್ಟಿಯನ್ನು ಕರೆದನು. ಪಂಚಾಶ್ಚರ್ಯಗಳಾದುವು. ಸೌಧರ್ಮೆಂ
ದ್ರನು ಐರಾದೇವಿಯನ್ನು ಅಲಂಕರಿಸಲು ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ,
ಲಕ್ಷ್ಮಿಯರೆಂಬ ಆರುಮಂದಿ ದೇವಿಯರನ್ನು ಕಳುಹಿಸಿದನು. ವಿಜಯೆ,
ವೈಜಯಂತೆ, ಜಯಂತೆ, ಅಪ್ರರಾಜಿತೆ, ಆನಂದೆ, ನಂದೋತ್ತರೆ, ನಂದೆ, ನಂದ
ವರ್ಧನೆಯರೆಂಬ ಎಂಟು ಮಂದಿ ದಿಕ್ಕುಮಾರಿಯರನ್ನು ಪ್ರಸವಕಾಲದ ಸೇವೆ
ಗೆಂದು ಇಂದ್ರ ಅವರನ್ನು ನಿಯಮಿಸಿದನು. ಇವರೆಲ್ಲರೂ ಬಂದು ಜಿನೇಂದ್ರ
ಮಾತೆಯ ಸೇವೆಯಲ್ಲಿ ನಿರತರಾದರು. ದೇವಲೋಕದ ಮಹಾನ್ ಔಷಧಗಳಿಂದ
ಜಿನಮಾತೆಯ ಗರ್ಭಶೋಧ ಮಾಡಲಾಯಿತು. ಒಂದು ಶುಭದಿನ ನೀರ್ವಿಂದು
ರಜನೀಸಮಯದಲ್ಲಿ ಮಲಗಿ ಮನೋಹರ ಮುಹೂರ್ತದಲ್ಲಿ ಷೋಡಶ ಶುಭ
ಸ್ವಪ್ನಗಳನ್ನು ಐರಾದೇವಿ ಕಂಡಳು. ಪತಿಗೆ ಅವುಗಳನ್ನು ತಿಳಿಸಲು ಕನಸಿನ
ಫಲಗಳನ್ನು ವಿಶ್ವಸೇನನು ಪತ್ನಿಗೆ ತಿಳಿಸಿದನು. ಫಾಲ್ಗುಣ ಶುದ್ಧ ಪಂಚಮಿ
ಭರಣಿ ನಕ್ಷತ್ರದಲ್ಲಿ ತ್ರಿಲೋಂಕಾಂಬಿಕೆಯ ಗರ್ಭದಲ್ಲಿ ಬಂದು ಚಂದ್ರನು
ನೆಲಸಿದನು. ಒಂಬತ್ತು ತಿಂಗಳು ಕಳೆಯಲು ಕಾರ್ತೀಕಶುದ್ಧ ಚತುರ್ದಶಿ
ಯಂದು ಭರಣಿನಕ್ಷತ್ರದಲ್ಲಿ ಬೆಳಗಿನ ಬ್ರಾಹ್ಮೀಮುಹೂರ್ತದಲ್ಲಿ ಜಿನನು ತಾಯಿಯ
ಗರ್ಭದಿಂದ ಹೊರಬಂದನು. ತನ್ನ ಆಸನಕಂಪದಿಂದ ತೀರ್ಥಂಕರನ ಜನನ
ವಾದುದನ್ನು ಅರಿತು ಸೌಧರ್ಮೇಂದ್ರನು ತನ್ನ ಪರಿವಾರದೊಂದಿಗೆ 'ಜನ್ಮಾಭಿ
ಷವಣ ಕಲ್ಯಾಣ'ವನ್ನು ನೆರವೇರಿಸಲು ಉತ್ಸುಕನಾಗಿ ಹಸ್ತಿನಪುರಕ್ಕೆ ಬಂದು
ಮಹಾರಾಜನ ರಾಜಮಂದಿರದಲ್ಲಿ ನಿಂತು ಪುಲೋಮಸುತೆಯನ್ನು ಜಿನಜನ
ನಿಯ ಮಂದಿರಕ್ಕೆ ಕಳುಹಿಸಿದನು. ಅಂಬಿಕೆ ಜಿನೇಂದ್ರದಾರಕರವಿಯನ್ನು
ನೋಡಿ ಮೂರುಬಾರಿ ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಪ್ರೀತಿಯಿಂದ ಆ ಜಿನಾ
ರ್ಭಕನನ್ನು ನೋಡಿ, ಅವನನ್ನು ಎತ್ತಿಕೊಳ್ಳಲು ಧೈರ್ಯಸಾಲದೆ ಇಂದ್ರನ
ಆಜ್ಞೆಯನ್ನು ನೆನೆದು ಸುಮ್ಮನಿರಲಾಗದೆ ಬಡವ ಮಾಣಿಕ್ಯವನ್ನು ಪಡೆವಂತೆ
ಪ್ರೀತಿಯಿಂದ ಎತ್ತಿಕೊಂಡು ಇಂದ್ರನ ದೇವಿಯು ಐರಾದೇವಿಯ ಪಕ್ಕದಲ್ಲಿ
ಮಾಯಾಶಿಶುವನ್ನಿರಿಸಿ ಬಂದಳು. ಶಚಿಯು ಜಿನಾರ್ಭಕನನ್ನು ನೀಡಲು

ಇಂದ್ರನು ತನ್ನ ಕರಪಲ್ಲವಗಳಿಂದ ಎತ್ತಿಕೊಂಡು ಐರಾವತದ ಬಂಧುರಸ್ಕಂದದ ಮೇಲಿಟ್ಟು ಇಂದ್ರಾಣಿಯನ್ನು ಹಿಂದೆ ಕೂರಿಸಿಕೊಂಡು ಅಮರಾದ್ರಿಗೆ ಬಂದನು.

ಸೌಧರ್ಮೇಂದ್ರನು ಮೇರುಪರ್ವತದ ಪಾಂಡುಕಶಿಲಾತಳದ ಮೇಲೆ ಪೂರ್ವಾಭಿಮುಖನಾಗಿ ನಿಂದು ಸಿಂಹಾಸನದಲ್ಲಿ ಜಿನೇಂದ್ರದಾರಕನನ್ನು ಇರಿಸಿ ಅಭಿಷೇಕಮಾಡಿಸಿ ದಿವಿಜೇಂದ್ರಲೋಕೋತ್ತಮ ಭೂಷಣಗಳನ್ನು ತೊಡಿಸಿದನು. ಜಿನೇಂದ್ರ ಭಾನುವನ್ನು ನೋಡಿ ಹರ್ಷೋತ್ಕರ್ಷಚಿತ್ತನಾಗಿ ನಮಸ್ಕರಿಸಿ ಸುರಪರಿವಾರದೊಂದಿಗೆ ಭಕ್ತಿಯಿಂದ ಸೌಧರ್ಮೇಂದ್ರನು ತಾಂಡವನೃತ್ಯವನ್ನು ಆಡಿದನು. ಆನಂದನೃತ್ಯ ಮುಗಿದಮೇಲೆ ಐರಾವತವನ್ನೇರಿ ಜಿನಾರ್ಭಕನನ್ನು ತೊಡೆಯಲ್ಲಿ ಕೂರಿಸಿಕೊಂಡು ಅಮರೇಂದ್ರನು ಹಸ್ತಿನಪುರಕ್ಕೆ ಬಂದನು. ಪುರದ ಹೊರ ಭಾಗದಲ್ಲಿ ನಿಂತು ಅಮರೇಂದ್ರನು ಪುರವನ್ನು ಅಷ್ಟಶೋಭೆಗೆಯ್ಯುವಂತೆ ವಿಶ್ವಸೇನ ಮಹಾರಾಜನಿಗೆ ಹೇಳಿಕಳುಹಿಸಿದನು. ಪುರಪ್ರವೇಶಿಸಿ ಸೌಧರ್ಮೇಂದ್ರನು ತೀರ್ಥಂಕರನ ತಂದೆ-ತಾಯಿಯರನ್ನು ಪೂಜಿಸಿ, ಜಿನನ ಜನ್ಮಾಭಿಷೇಕವೃತ್ತಾಂತವನ್ನು ಅವರಿಗೆ ತಿಳಿಸಿ ಶಾಂತಿ ಎಂಬ ಹೆಸರನ್ನು ಜಿನೇಂದ್ರ ಭಾನುವಿಗೆ ಇಟ್ಟು ಮತ್ತೆ ಆನಂದನೃತ್ಯವನ್ನು ಆಡಿ ಪರಿವಾರದೊಂದಿಗೆ ತನ್ನ ಮನೆಗೆ ಮರಳಿದನು. ಶಾಂತಿನಾಥ ಬೆಳೆದು ದೊಡ್ಡವನಾದನು. ಶಾಂತಿನಾಥನ ಆ ರೂಪನೆ ಚಿಂತಿಸಿ ಚಿಂತಿಸಿ ಕಾಂತೆಯರ್ ಪತಿಗೆ ರತಿಸೋಲ್ತು ಕೆಂದಳಿರಂತಲರ್ಗಣೆಗೆ ಡೊಣೆಯಾದರು.

ಸರ್ವಾರ್ಥಸಿದ್ಧಿಯ ಇಂದ್ರಚಂದ್ರನು ವಿಶ್ವಸೇನ ಹಾಗೂ ಯಶಸ್ವತಿಯರಿಗೆ ಚಕ್ರಾಯುಧನೆಂಬ ಮಗನಾಗಿ ಹುಟ್ಟಬಂದನು. ವಿಶ್ವಸೇನ-ಐರಾದೇವಿಯರು ಮಗನನ್ನು ಪಟ್ಟಗಟ್ಟಿಸಿಕೊಳ್ಳುವಂತೆ ಪ್ರಾರ್ಥಿಸಿ ಒಪ್ಪಿಸಿದರು. ಒಂದು ದಿನ ಆಯುಧಾಗಾರದಲ್ಲಿ ಚಕ್ರರತ್ನ ಉದ್ಭವವಾಯಿತು. ವೃದ್ಧಮಂತ್ರಿಗಳ ಕೋರಿಕೆಯಂತೆ ಚಕ್ರವನ್ನು ಮುಂದಿಟ್ಟುಕೊಂಡು ದಿಗ್ವಿಜಯವನ್ನು ಶಾಂತಿನಾಥ ಮಾಡಿ ಬಂದನು.

ಸುಖಸಂಕಥಾವಿನೋದದಲ್ಲಿ ಇಪ್ಪತ್ತೈದುಸಾವಿರವರ್ಷ ರಾಜ್ಯಲಕ್ಷ್ಮಿ ಚಕ್ರವರ್ತಿ ಶಾಂತಿನಾಥನಲ್ಲಿ ಭೋಗಿಸಿದಳು. ಹೀಗಿರಲು ಒಂದುದಿನ ಶಾಂತಿ

ನಾಥನಿಗೆ ನಿರ್ವೇಗ ತಲೆದೋರಿ ಪರಿನಿಷ್ಕ್ರಮಣಕಲ್ಯಾಣಾಭಿಮುಖನಾಗಿ
ರಲು ಚಕ್ರವರ್ತಿಯ ಮನವರಿತು ಲೋಕಾಂತಿಕದೇವರು ಅವನಲ್ಲಿಗೆ ಬಂದರು.
ಅವರ ಉಪದೇಶದಿಂದ ಶಾಂತಿನಾಥ ತಪಸ್ಸಿಗೆ ನಡೆಯಲು ನಿಶ್ಚಯಿಸಿದನು.
ಹಿರಿಯಮಗನಾದ ನಾರಾಯಣನಿಗೆ ರಾಜ್ಯಭಾರವನ್ನು ಒಪ್ಪಿಸಿ ಸಿವಿಗೆಯನ್ನೇ
ರಿದನು. ಜ್ಯೇಷ್ಠಮಾಸದ ಸಿತಚತುರ್ದಶಿಯಂದು ಭರಣೀನಕ್ಷತ್ರದಲ್ಲಿ ಅಪ
ರಾಹ್ಣದಲ್ಲಿ ಪರಮದೀಕ್ಷೆಯನ್ನು ಶಾಂತಿನಾಥನು ಸ್ವೀಕರಿಸಿದನು. ಪರಿನಿಷ್ಕ್ರ
ಮಣಕಲ್ಯಾಣಪೂಜೋತ್ಸವದ ಅನಂತರ ಪ್ರದಕ್ಷಿಣಪೂರ್ವಕವಾಗಿ ಜಿನನಾಥ
ನಿಗೆ ನಮಸ್ಕರಿಸಿ ಇಂದ್ರಪ್ರಧಾನರಮರನಿಕುರುಂಬ ನಿರ್ಗಮಿಸಿತು. ಶಾಂತಿ
ನಾಥನು ಷೋಡಶ ವರ್ಷಗಳವರೆವಿಗೆ ತಪಸ್ಸನ್ನು ಮಾಡಿ ಕರ್ಮಗಳಿಂದ
ಮುಕ್ತನಾಗಿ ಕೇವಲಜ್ಞಾನವನ್ನು ಪಡೆದನು. ಸಮವಸರಣ ಮಂಟಪದಲ್ಲಿ
ಕುಳಿತು ಸಕಲಜೀವಿಗಳಿಗೂ ಅರ್ಥವಾಗುವಂತೆ ದಿವ್ಯಧ್ವನಿಯಲ್ಲಿ ಶಾಂತಿಜಿನನು
ಧರ್ಮಬೋಧೆಯನ್ನು ಮಾಡಿದನು. ಶಾಂತಿಜಿನ ವಿಹಾರಮಾಡುತ್ತ ಸಮ್ಮೇ
ದಗಿರಿಗೆ ಬಂದು ಒಂದು ತಿಂಗಳವರೆಗೆ ಯೋಗಸಮಾಧಿಯಲ್ಲಿ ನಿಂತನು.
ತೀರ್ಥಂಕರನ ಪರಿನಿರ್ವಾಣ ಕಲ್ಯಾಣಸೂಚನಾಚಿಹ್ನೆಗಳನ್ನು ತಂತಮ್ಮ
ಲೋಕಗಳಲ್ಲಿ ಕಂಡ ಚತುರ್ನಿಕಾಯಮರರು ಅರ್ಚನಾಸಾಮಗ್ರಿಗಳಿಂದ ಕೂಡಿ
ಬಂದು ಜಿನನಾಥ ಶರೀರವನ್ನು ಅರ್ಚಿಸಿದರು. ಜಿನದೇಹವನ್ನು ಬೂದಿಯಾಗು
ವವರೆವಿಗೆ ಸುಟ್ಟು ತ್ರಿಪುಂಡ್ರವನ್ನು ಹಣೆಯಲ್ಲಿಟ್ಟು ಸೌಧರ್ಮೇಂದ್ರನು ಆನಂದ
ನೃತ್ಯವನ್ನಾಡಿದನು. ಅವನ ಜೊತೆಗೆ ಮೂವತ್ತೆರಡು ಮಂದಿ ಇಂದ್ರರೂ
ಆನಂದನೃತ್ಯವನ್ನಾಡಿದರು.

ಶಾಂತಿನಾಥನನ್ನು ಕುರಿತ ಈ ಪುರಾಣದಲ್ಲಿ ಆತನ ಹಿಂದಣ ಹನ್ನೊಂದು
ಭವಗಳ ಅಂದರೆ ಶ್ರೀಷೇಣ, ಭೋಗಭೂಮಿಜ, ಶ್ರೀದೇವ, ಅಮಿತತೇಜ,
ಮಣಿಚೂಳ, ಅಪರಾಜಿತ, ಅಚ್ಯುತೇಂದ್ರ, ವಜ್ರಾಯುಧ, ಅಹಮಿಂದ್ರ
ಅಮಿತವಿಕ್ರಮ, ಮೇಘರಥ, ಮಹೇಂದ್ರ ಈ ಹೆಸರಿನ ವ್ಯಕ್ತಿಗಳಾಗಿ ಎತ್ತಿದ
ಜನ್ಮಗಳ ವಿವರಣೆಯನ್ನು ಕವಿ ಸುದೀರ್ಘವಾಗಿ ಪ್ರಸ್ತಾಪಿಸಿ ಕೊನೆಯ ಎರಡು
ಆಶ್ವಾಸಗಳಲ್ಲಿ ಶಾಂತಿನಾಥನ ಚರಿತ್ರೆ ಹೇಳಿರುವನು. ಪೊನ್ನ ತನ್ನ ಕೃತಿ
ಯನ್ನು ಅಪರಾಜಿತಭವದಿಂದ ಪ್ರಾರಂಭಿಸಿರುವನು. ಶಾಂತಿಪುರಾಣವು
ಪುರಾಣಲಕ್ಷಣದ ಚೌಕಟ್ಟಿನಲ್ಲಿ ತುಂಬು ನಿಷ್ಠೆಯಿಂದ ಪುರಾಣ ಸಂಪ್ರದಾಯ

ವನ್ನು ಪರಿಪಾಲಿಸಿದ ಕೃತಿ. ಭವಾವಳಿಗಳ ರಮ್ಯಕಥಾನಕಗಳು-ಬೇಸರತರಿಸ
ಓದಿಸಿಕೊಂಡು ಹೋಗಿರುವುದು–ಪೊನ್ನನ ಪ್ರತಿಭಾ ಕೈಯಾಟಕ್ಕೆ ನಿದರ್ಶನ
ವಾಗಿ ಬಂದಿದೆ ಡಾ॥ ರಂ-ಶ್ರೀ. ಮುಗಳಿಯವರು ಅಭಿಪ್ರಾಯಪಡುವಂತೆ
"ಮುಖ್ಯಕಥೆಗೆ ಅಮುಖ್ಯತ್ವವನ್ನು ಕೊಟ್ಟಿರುವುದು ಕಲಾ ದೃಷ್ಟಿಯಿಂದ
ಪ್ರಮಾಣಜ್ಞಾನದ ಅಭಾವವನ್ನು ತೋರಿಸುವುದಾದರೂ ಜೈನಪುರಾಣಗಳ
ಭವಾವಳಿಗಿರುವ ಮುಖ್ಯತ್ವವನ್ನು ತೋರಿಸುವುದು ಪೊನ್ನನ ಉದ್ದೇಶವಾಗಿ
ಬೇಕು" ಅಷ್ಟಾದಶವರ್ಣನೆಗಳಿಂದ; ಉತ್ಪ್ರೇಕ್ಷೆ, ಶ್ಲೇಷೆ, ಉಪಮಾದಿ ಅಲಂಕಾ
ಗಳಿಂದ ಸಂಪ್ರದಾಯನುವರ್ತಿಯಾಗಿ ಪೊನ್ನ ನಡೆದಿರುವಂತೆ ಕಾಣಬರುತ್ತದೆ.
ಪೊನ್ನನದು 'ಅತಿಗಂಭೀರ ಮೃದೂಕ್ತಿ'. 'ಕೇಳ್ದಂ ಬಹುಶ್ರುತನಲ್ಪ ಶ್ರುತ
ನೆನ್ನದಾರಕಿವಿಗಂ ನುಣ್ಪಿಂಪಿನೊಳ್ ಕೂಡೆ, ಪಂಡಿತರುಂ ಮೂರ್ಖರುಂ
ಎಕ್ಕೆಯಿಂ ಪೊಗಟೆ ಪೇಟಲ್ ಬಾಜಿಸಲ್, ಮುಂ ಸರಸ್ವತಿಯಂ ಸಾಧಿಸಿ
ಸಂದ ಸಯ್ಪು" ನಮ್ಮ ಪೊನ್ನನದು. ಅವನಿಗೆ ಭಾಷೆಯ ಮೇಲೆ ಸಂಪೂರ್ಣ
ವಾದ ಹತೋಟಿಯಿದ್ದುದರಿಂದಲೇ ಅವನ ಪದಸಂಬಂಧದ ನುಣ್ಪು ಇಂಪಿಗೆ
ಪಂಡಿತವರ್ಗ ಮಾರುಹೋದುದು; ಮನ-ಕಿವಿಗಳನ್ನು ತೆತ್ತದ್ದು. ಈ ಬಗೆಯ
ಅಪೂರ್ವವಾದ ಶಕ್ತಿ ಕನ್ನಡದ ಬಹುಮಂದಿ ಕವಿಗಳಿಗಿರಲಿಲ್ಲವೆಂದರೆ ತಪ್ಪಾ
ಗದು. ದೀರ್ಘಸಮಾಸಪದಗಳ ಬಳಕೆಮಾಡದೆ ಸಾಧ್ಯವಾದ ಮಟ್ಟಿಗೂ
ಪುಟ್ಟ ಪುಟ್ಟ ಪದಗಳ ಬಳಕೆಮಾಡಿ ತಾನು ಹೇಳಬೇಕಾದ ವಿಷಯ ಕೇಳುಗನ,
ಓದುಗನ ಮನಕ್ಕೆ ತಟ್ಟನೆ ಮುಟ್ಟುವ ಹಾಗೆ ಸರಳವೂ ಸುಲಭವೂ ಆದ ಶೈಲಿ
ಯನ್ನು ಪೊನ್ನನು ಕೃತಿರಚನೆ ಮಾಡಿರುವನು. ದಮಿತಾರಿಯ ಮನದಲ್ಲಿ ಅಮಿತ
ತೇಜನ ಆಸ್ಥಾನದಲ್ಲಿ ಹಾಡಿದ ಗಾಯಿಕಾದ್ವಯರ ಗಾಯನ ವಿಶೇಷತೆಯನ್ನು
ತಿಳಿಸಿ ಕೇಡಿನ ಬೀಜಬಿತ್ತಿ ಹೋದ 'ಕಲಹಕುತೂಹಲ' ನಾರದರ ಪಾತ್ರ
ಕಣ್ಣಿಗೆ ಕಟ್ಟುವಂತಿದೆ. ಮಗಳು ಕದ್ದೊಯ್ಯಲ್ಪಟ್ಟಳೆಂದು ತಿಳಿದಾಗಿನ ದಮಿ
ತಾರಿಯ ಅಂತಃಕ್ಷುಭಿತ ಚಿತ್ರ ಅಪೂರ್ವವಾಗಿ ಬಂದಿದೆ. ಜ್ಯೋತಿಃಪ್ರಭೆಯ
ಸ್ವಯಂವರ ವರ್ಣನೆ, ನಾರಕ ವರ್ಣನೆ, ವಸಂತವರ್ಣನೆ, ಭೂಮಿದೇವ
ಹಾಗೂ ವಜ್ರಾಯುಧರ ನಡುವೆ ನಡೆಯುವ ಸಂಭಾಷಣೆ–ಈ ಎಡೆಗಳಲ್ಲೆಲ್ಲಾ
ಪೊನ್ನನ ಪ್ರತಿಭಾಕುಂಚದ ಮಾಂತ್ರಿಕತನವನ್ನು ಕಾಣಬಹುದು. ಕವಿ
ಸಂಪ್ರದಾಯಪ್ರಿಯನಾಗಿರುವುದರಿಂದ ಆತನ ವರ್ಣನೆಗಳಲ್ಲಿ ಅನುಕರಣೆಯು

ಮನೋಭಾವವನ್ನು ನಾವು ಗುರುತಿಸಬಹುದು. ಪ್ರಸಿದ್ಧ ಸಂಸ್ಕೃತ ಕವಿಗಳ ಕೃತಿಗಳನ್ನು ಓದಿದವನಾದ ಪೊನ್ನ ಅವರ ಭಾವಗಳನ್ನೂ ವರ್ಣನೆಗಳನ್ನೂ ಅನುಕರಿಸಿರಬಹುದು. ಏಳನೆಯ ಆಶ್ವಾಸದ ಕೊನೆಯ ಭಾಗವನ್ನೆಲ್ಲಾ (ಪದ್ಯ 124-147) ವಸಂತದ ವರ್ಣನೆ ವ್ಯಾಪಿಸಿದೆ. ವಸಂತ ತಲೆದೋರಲು ವಜ್ರಾಯುಧ ಮಹಾರಾಜನು ವನಕೇಳಿಗೆ ನಡೆದ ಸಂದರ್ಭದಲ್ಲಿ ಸುಮಾರು 60 ಪದ್ಯಗಳು (8. 1-60) ವನಕೇಳೀವರ್ಣನೆಗೆ ಮೀಸಲಾಗಿದೆ. 'ಜಿನ ತತ್ವಂ ಸ್ಮರತತ್ವಮೆಂಬಿವೆರಡುಂ ದೂರಸ್ಥಂ' ಎನ್ನುವ ಪೊನ್ನ ಶಾಂತಿನಾಥ ತೀರ್ಥಂಕರನ ಚರಿತ್ರೆಯನ್ನು ಹೇಳುವಾಗಲೂ ಸಂಪ್ರದಾಯವನ್ನು ಬಿಡಲಾರ. ಶೃಂಗಾರಭರಿತವಾದ ವೇಶ್ಯಾವಾಟೆಯ ವರ್ಣನೆ ಎಂಟನೆಯ ಆಶ್ವಾಸದ ಉತ್ತರಾರ್ಧವನ್ನೆಲ್ಲಾ ವ್ಯಾಪಿಸಿದೆ (72ವ-109). ಜಲಕ್ಕನಾದ ಅಚ್ಚ ಬೆಳ್ದಿಂಗಳಿನಲ್ಲಿ ದೀನ ಜನತಾಕಲ್ಪಾಂಘ್ರಿಪನು ನಾಗರಿಕ ವಿಟ ವಿದೂಷಕ ಪೀಠಮರ್ದಕರೊಡನೆ ಮಕರಧ್ವಜನ ಓಲಗವೇ ಹೊರಟಂತೆ ವಸಂತೋತ್ಸವದ ಕೌಮುದೀ ಮಹೋತ್ಸವವನ್ನು ನೋಡುವ 'ಅಟ್ಟು'ಯಿಂದ ಹೊರಡುತ್ತಾನೆ. ರಾಜನು ತನ್ನ ಸಹಚರರೊಂದಿಗೆ ಬೆಳಗಾಗುವ ವರೆವಿಗೂ ವೇಶ್ಯಾವಾಟೆಯಲ್ಲಿ ಆಡ್ಡಾಡುತ್ತಾನೆ! ಪಂಚಕಲ್ಯಾಣಗಳ ವಿವರಣೆ ಪೂರ್ವ ಪುರಾಣಕವಿಗಳ ಪಥದಲ್ಲಿ ನಡೆದಿದ್ದು ಇಲ್ಲೆಲ್ಲಾ ತೀರ್ಥಂಕರನ ಮಹಿಮಾತಿಶಯಗಳ ನಿರೂಪಣೆಯ ಕಡೆಗೇ ಕವಿಯ ಗಮನವೆಲ್ಲಾ ಸಂದಾಯವಾದಂತಿದೆ. ಹಿಂಸಾ ಪ್ರಧಾನವಾದ ಯುದ್ಧದ ವರ್ಣನೆಗಳು ಪುರಾಣಗಳಲ್ಲಿ ವರ್ಣಿತವಾಗುವುದು ಅಪರೂಪ. ಪಂಪನಂತಹವನೂ ಶಾಂತರಸ ಪ್ರಧಾನವಾದ ಪುರಾಣದಲ್ಲಿ ಹಿಂಸಾ ಪ್ರಧಾನವಾದ ಯುದ್ಧವರ್ಣನೆಯನ್ನು ಮಾಡಲಿಚ್ಛಿಸದೆ ದಿಗ್ವಿಜಯ ವರ್ಣನೆಯ ಸಂದರ್ಭದಲ್ಲಿ ರಕ್ತಪಾತವಿಲ್ಲದೆಯೇ ಭರತನ ದಿಗ್ವಿಜಯವಾದಂತೆ ವರ್ಣಿಸಿ ಭರತ ಬಾಹುಬಲಿ ವ್ಯಾಯೋಗದ ಸಂದರ್ಭದಲ್ಲೂ ತತ್ವಬದ್ಧನಾಗಿ ದೃಷ್ಟಿಯುದ್ಧ ಜಲಯುದ್ಧ ಮಲ್ಲಯುದ್ಧಗಳನ್ನು ಅಣ್ಣತಮ್ಮಂದಿರು ಮಾಡಿದಂತೆ ಹೇಳಿ ಪಾರಾಗಿರುವುದನ್ನು ನಾವು ಗಮನಿಸಬಹುದು. ಪೊನ್ನ ಇಲ್ಲಿ 'ಅಹಿಂಸಾತತ್ವ'ಕ್ಕೆ ಮನತೆತ್ತವನಾದರೂ ಔಚಿತ್ಯ ಪ್ರಜ್ಞೆಯಿಂದ ಪ್ರೇರಿತನಾಗಿ ಮೂರು, ನಾಲ್ಕನೆಯ ಆಶ್ವಾಸಗಳಲ್ಲಿ ಲೌಕಿಕಕಾವ್ಯಗಳಲ್ಲಿ ಬರುವಂತೆಯೇ ಯುದ್ಧವರ್ಣನೆಗೆ ತೊಡಗಿರುವನು. ಯುದ್ಧರಂಗದಲ್ಲಿ ಕೆಲವರು ವೀರೋಚಿತ

ವಾಗಿ ಹೋರಾಡುತ್ತ "ಮಿಟ್ಟಿಗಾಡಿಯುಂ ಬರ್ದುಂಕಲಾಗದೆಂಬ ಮಾತಂ ತಿಬ್ಬಂ ಮಾಡಿ ಸೌಜನ್ಯ ಕಂದಾಂಕುರನ ಶರಕ್ಕಳ್ಕಿ ಬೆಟ್ಕಿತೊರ್ೞೆಡೆಯುಂ ಬೆನ್ನ ನಟ್ಟ ನಟ್ಟ ಜಟ್ಟಗೆಯಿಂ ಮಿಟ್ಟಿಗೊಂಬಿಟ್ಟಿಯಂತೆಯುಂ, ಬಡಿಗೊಂಡ ಮೊಲ ದಂತೆಯುಂ ತಲೆಕೆಳಗಾಗಿ ಬಿಟ್ಟಿರ್, ಕೆಲರುರದೊಳ್ ನಟ್ಟಂಬನಾಳ್ದೊಂ ಮುನ್ನಂ ಮೂದಲಿಸಿದೊಡಾ ಹೃಚ್ಛಲ್ಯಮಂ ಕಳೆವಂತೆ ಕಿಟ್ಟಿ ಕಳೆದು ಸತ್ತರ್, ಕೆಲರ್‌ನೆತ್ತರೊಳ್ ಮಿಂದು ತಮಗೆ ದೋಷಮಿಲ್ಲೆಂದದರ್ಕೆ ದಿವ್ಯಂ ಬಿಡಿವಂತೆ ನಂಬಿಸಲ್ ಚಲಂಬಿಡಿದು ನಿಂದಾಂತರ್, ಕೆಲರ್ ನೋಡೆ ನೋಡೆ ತಮ್ಮೊ ಟಕ್ಕೆ ತಾಮೆ ನಾಣ್ಚಿದರ್, ಕೆಲರೋಡುವಾಗಳಾಳ್ದಂ ಮೂದಲಿಸೆ ಮಗುಟ್ದು ನಡೆದು ಸತ್ತರ್, ಕೆಲರ್ ತಮ್ಮ ಮನೋಸಯನವಲ್ಲಭೆಯರನಗಲ್ದು ಮನೋ ಭವನಂಬೇಜಿಂಗಳ್ಕಿದರ್, ಅರೆಬರ್ ಜೈನಶಾಸನಚೂಡಾಮಣಿಯೆಂ ಬೇಱ ಮಗಮುಂಟೆಂದು ಸತ್ತರ್, ಕೆಲರ್ ಪುಣ್ಣ ಕೆಂಪೆ ಕಣ್ಗೆವಂದಂತೆ ಪಾಪೇಭ ಕಂಠೀರವನ ದೆಸೆಯನೆ ನೋಡಿ ನೋಡಿ ಗತಜೀವಿತರಾದರ್...." (4.30ವ) ಎನ್ನುವಲ್ಲಿ ಪೊನ್ನ ಕೊಡುವ ಚಿತ್ರ ಆ ವೀರಯುಗದ ರಣಾಂಗಣದ ವೀರರ ಚಿತ್ರವಲ್ಲದೆ ಬೇರಲ್ಲ. ಶಾಂತಿನಾಥ ತೀರ್ಥಂಕರನಷ್ಟೇ ಅಲ್ಲ ಚಕ್ರವರ್ತಿಯೂ ಆಗಿದ್ದು ಅವನ ದಿಗ್ವಿಜಯ ವರ್ಣನೆಯ ಸಂದರ್ಭದಲ್ಲಿ ಮಾತ್ರ ಅಹಿಂಸೆಯ ಪ್ರತಿಮೂರ್ತಿಯಾದ ಶಾಂತಿನಾಥನಿಂದ ಜೀವಹಾನಿ ನಡೆಸಬಾರದೆಂಬ ವಿಚಾ ರಕ್ಕೆ ಕಟ್ಟುಬಿದ್ದು ಇನಿತೂ ಸಾವು ನೋವುಗಳಿಲ್ಲದ ದಿಗ್ವಿಜಯ ವರ್ಣನೆ ಯನ್ನು ಕವಿ ಮಾಡಿರುವನು.

ಅಸಾಧಾರಣ ಆತ್ಮವಿಶ್ವಾಸದ ಮೂರ್ತಿಯಾದ ಪೊನ್ನ 'ಕನ್ನಡ ಕವಿತೆ ಯೊಳಸಗಂಗನ್ನೂರ್ಮಡಿ ರೇಖೆಗಗ್ಗಳಂ'; 'ಸಕ್ಕಧದೊಳ್ ಮುನ್ನುಳ್ಳ ಕಾಳಿ ದಾಸಂಗಂ ನಾಲ್ವಡಿ ರಚನೆಯೊಳ್ ಕುರುಳ್ಗಳ ಸವಣಂ' ಎಂದು ಆತ್ಮಶ್ಲಾಘನೆ ಮಾಡಿಕೊಂಡಿರುವನು. ಅಸಗನ ಕೃತಿಗಳು ಸಂಪೂರ್ಣವಾಗಿ ನಮಗಿಂದು ದೊರೆತಿಲ್ಲ. ಆದ್ದರಿಂದ ಅಸಗನಿಗಿಂತ ತನ್ನನ್ನು ಮಿಗಿಲು ಮಾಡಿಕೊಂಡ ಪೊನ್ನನ ಮಾತಿನ ಸತ್ಯಾಸತ್ಯತೆಯನ್ನು ಸಧ್ಯಕ್ಕೆ ತೂಕಮಾಡಲಾಗದು. ಅದು ಹೋಗಲಿ, ಪೊನ್ನನು 'ರಚನೆ'ಯಲ್ಲಿ ಕಾಳಿದಾಸನಿಗಿಂತ ತಾನು 'ನಾಲ್ವಡಿ' ಎಂದು ಹೇಳಿಕೊಂಡಿರುವುದಾದರೂ ಸಮನೆ?– ಇದರ ಬಗೆಗೂ ವಿದ್ವಾಂಸರು ಚರ್ಚಿಸಿ ಪೊನ್ನನ ಹೇಳಿಕೆಯನ್ನು ಆಧಾರಪೂರ್ವಕವಾಗಿ ಖಂಡಿಸಿರುವರು.

ಶಾಂತಿಪುರಾಣದ ಜ್ಯೋತಿಃಪ್ರಭೆಯ ಸ್ವಯಂವರ ವರ್ಣನೆಯೂ, ಶಾಂತೀಶನ ದಿಗ್ವಿಜಯ ವರ್ಣನೆಯೂ ಕಾಳಿದಾಸನ ರಘುವಂಶದ ಇಂದುಮತಿಯ ಸ್ವಯಂ ವರ ವರ್ಣನೆಯನ್ನೂ, ರಘುಮಹಾರಾಜನ ದಿಗ್ವಿಜಯ ವರ್ಣನೆಯನ್ನೂ ಸರಿ ಹೋಲುತ್ತವೆಂಬುದನ್ನು ಪ್ರೊ. ಡಿ. ಎಲ್. ನರಸಿಂಹಾಚಾರ್‌ರವರು ತುಲನೆ ಮಾಡಿ ಹೇಳಿರುವರು[1] ಪ್ರೊ. ಡಿ. ಎಲ್. ಎನ್‌ರವರು ಅಭಿಪ್ರಾಯಪಡುವಂತೆ "ಪೊನ್ನನ ವರ್ಣನೆಯು ಕಾಳಿದಾಸನ ವರ್ಣನೆಯ ತುಂಬಿದ ಪಡಿಯಚ್ಚು, ಕಾಳಿದಾಸದ ಕೈವಾಡವನ್ನು ಪೊನ್ನನ ವರ್ಣನೆಯಲ್ಲಿ ಬಹಳ ವಿಶದವಾಗಿ ನೋಡಬಹುದು. ಪೊನ್ನನು ಕಾಳಿದಾಸನ ವರ್ಣನಾರೀತಿಯನ್ನೇ ಅನುಸರಿಸಿ ಅವನಿಂದ ಪದ್ಯಗಳನ್ನು ಭಾಷಾಂತರಿಸಿರುತ್ತಾನೆ. ರಘುವಂಶದ ಸರ್ಗ ಸರ್ಗ ಗಳನ್ನೇ ಭಾಷಾಂತರಿಸಿ ತನ್ನವೆಂದು ಹೇಳಿಕೊಂಡಿದ್ದಾನೆ........" ಕಾಳಿದಾಸನ ರಘುವಂಶದ ಇಂದುಮತೀ ಸ್ವಯಂವರ ವರ್ಣನೆಯನ್ನೂ ರಘುಮಹಾ ರಾಜನ ದಿಗ್ವಿಜಯ ವರ್ಣನೆಯನ್ನೂ ಖಂಡಕಾವ್ಯವೆಂದು ಪರಿಗಣಿಸಿದರೆ ಪೊನ್ನನ ಜ್ಯೋತಿಃಪ್ರಭೆಯ ಸ್ವಯಂವರ ವರ್ಣನೆಯನ್ನೂ ಶಾಂತೀಶನ ದಿಗ್ವಿಜಯ ವರ್ಣನೆಯನ್ನೂ ಖಂಡಕಾವ್ಯವೆಂದೇ ಪರಿಗಣಿಸಬೇಕೆನ್ನುವ ಪ್ರೊ. ಡಿ. ಎಲ್. ಎನ್‌ರವರು, "ಇವುಗಳಲ್ಲಿ ಬರುವ ವ್ಯಂತರೇಶನ ಕಥೆಗಳನ್ನು ಕಿತ್ತುಹಾಕಿ ಶಾಂತಿಪುರಾಣದಿಂದ ಹೊರಕ್ಕೆ ತೆಗೆದು ಮುದ್ರಿಸಿದರೆ ನಮಗೆ ಎರಡು ಒಳ್ಳೆಯ ಖಂಡಕಾವ್ಯಗಳು ದೊರೆಯುತ್ತವೆ. ಇವುಗಳಿಗಿಂತ ಉತ್ತಮ ವಾದ ಭಾಷಾಂತರವನ್ನು ಮಾಡುವುದು ಸುಲಭವಲ್ಲ. ಪೊನ್ನನು ಆ ಕೆಲಸ ವನ್ನು ತಾನೆ ನಮಗಾಗಿ ಮಾಡಿರುತ್ತಾನೆ. ಇದಕ್ಕಾಗಿ ಅವನಿಗೆ ನಾವು ಎಷ್ಟು ಕೃತಜ್ಞರಾಗಿದ್ದರೂ ತೀರದು" ಎಂದು ಅಭಿಪ್ರಾಯಪಟ್ಟಿರುವರು.[2]

ಪುರಾಣಗಳು ಧರ್ಮಬೋಧೆಗೆ ಸಾಧನಗಳು. ಸವಣನಾದ ಪೊನ್ನ ಧರ್ಮಪ್ರಸಾರದ ಕಡೆಗೆ ಹೆಚ್ಚಿನ ಆಸಕ್ತಿವಹಿಸಿರುವುದರಿಂದ ಶಾಂತಿಪುರಾಣ ದುದ್ದಕ್ಕೂ ಅಲ್ಲಲ್ಲಿ ಸಂಕ್ಷೇಪವಾಗಿ ಧರ್ಮಬೋಧೆ ತಂದಿರುವನು. ಭೂಮಿದೇವ ಹಾಗೂ ವಜ್ರಾಯುಧರ ನಡುವೆ ನಡೆವ ಸಂಭಾಷಣೆಯ ಮೂಲಕ[3] ಧರ್ಮಾ

1. ಪೊನ್ನನೂ ಕಾಳಿದಾಸನೂ : ಪ್ರ. ಕ. 12.2
2. ಅದೇ.
3. ಶಾಂತಿಪು 8, 126–15

ಧರ್ಮಗಳ ವಿವೇಚನೆ ನಡೆಸಿರುವನು. ಇಲ್ಲಂತೂ ಪಂಪನ ಪ್ರಭಾವ ವಿಶೇಷವಾ
ಪೊನ್ನನ ಮೇಲೆ ಆದಂತೆ ಕಂಡುಬರುತ್ತದೆ.

ಏಳನೆಯ ಆಶ್ವಾಸನದಲ್ಲಿ ಬರುವ ನಾರಕವರ್ಣನೆ (85–102) ತೀರಾ
ಭಯಾನಕವಾಗಿ ಮೂಡಿಬಂದಿದೆ. ಓದುತ್ತಾ ಹೋದಂತೆ ಅಘಜೀವಗಳಿಗೆ
ನಡುಕವುಂಟಾಗುತ್ತದೆ. ಸರಳ ಭಾಷೆಯಲ್ಲಿರುವ ಈ ವರ್ಣನಾಭಾಗ ಜೀವಿ
ಗಳನ್ನು ಎಚ್ಚರಿಸುತ್ತದೆ; ಪಾಪಭೀರುಗಳಾಗುವಂತೆ ಮಾಡುತ್ತದೆ. ಶಾಂತಿ
ಪುರಾಣಗಳಲ್ಲಿ ಮೂರು ಸ್ವಯಂವರಗಳ ವರ್ಣನೆ ಬಂದಿದ್ದರೂ ಜ್ಯೋತಿ
ಪ್ರಭೆಯ ಸ್ವಯಂವರ ವರ್ಣನೆಗೆ ವಿಶೇಷ ಆದ್ಯತೆಯನ್ನು ನೀಡಿ ಔಚಿತ್ಯವನ್ನು
ಕವಿ ಮೆರೆದಿರುವನು. ತೀರ್ಥಂಕರನ ವ್ಯಕ್ತಿತ್ವ ಕಾಂತಿಯುಕ್ತವೂ ಓಜೋ
ಪೂರ್ಣವೂ ಆಗಬೇಕೆಂಬುದು ಕವಿಯ ಆಶಯ. ಹೀಗಾಗಿ ಕವಿಯು ಆ ಕ
ಹೆಚ್ಚಿನ ಗಮನ ಹರಿಸಿರುವನು. ಚಕ್ರಾಯುಧ ಆಯುಧಾಗಾರದಲ್ಲಿ ಹುಟ್ಟಿ
ಸಂತೋಷದ ಸುದ್ದಿ ತಿಳಿದರೂ ಶಾಂತಿನಾಥ ಆ ಸಂತೋಷದಲ್ಲಿ ಮೈಮರೆಯಲಿಲ್ಲ
ಕೇಳಿಯೂ ಕೇಳದಂತಿದ್ದನು. ಕುಲವೃದ್ಧರು ಚಕ್ರಪೂಜೆ ಮಾಡುವಂತೆ ಶಾಂ
ನಾಥನಿಗೆ ಸಲಹೆ ಕೊಟ್ಟಾಗ "ನನ್ನ ಪಾದದ್ವಯಗಳಿಗೆ ಸಿದ್ಧಪರಮೇಷ್ಠಿಗಳಲ್ಲ
ಸಮಸ್ತೋರ್ವೀಜನರು ನಮಸ್ಕರಿಸುವಾಗ, ಈ ಶರೀರದಿಂದ ಘಾತ್ಯಘಾತಿದುರಿ
ವಿನಾಶವೂ ಅನಂತಚತುಷ್ಟಯವೂ, ಕೇವಲಲಬ್ಧಿ ಲಾಭವೂ ಪ್ರಾಪ್ತವಾಗ
ವಾಗ ಇದನ್ನು ತಿಳಿದೂ ಚಕ್ರಲೋಹಖಂಡಕ್ಕೆ, ಈ ಕುಡುಗಲ್ಗೆ ಎರಗ
ಎಂದು ಹೇಳುವುದು ನನಗೆ ಮಾನ್ಯವೇ" ಎಂದು ನಯವಿನಯದಿಂದ ಹೇಳಿ ಆ
ಕುಲವೃದ್ಧರು ತಮ್ಮ ಸಲಹೆಯ ಬಗೆಗೆ ತಾವೇ ನಾಚುವಂತೆ ಮಾಡುವನು.[1]
ಇಲ್ಲಂತೂ ಕವಿಯ ಸೂಕ್ಷ್ಮಪ್ರಜ್ಞೆ ಅಚ್ಚರಿಯನ್ನುಂಟುಮಾಡುತ್ತದೆ. ವ್ಯಕ್ತಿತ್ವ
ವನ್ನು ಕಳೆಕಟ್ಟಿಸಲು ಕವಿ ಕೊಡುವ ಬಣ್ಣಗಾರಿಕೆ ಮನಸೆಳೆಯುತ್ತದೆ. ಪುಟ್ಟ
ಘಟನೆಯನ್ನೂ ನಾಯಕನ ವ್ಯಕ್ತಿತ್ವವನ್ನು ಬೆಳಗಿಸುವತ್ತ ಸಂಯೋಜಿಸುವ
ಕವಿಯ ಜಾಣ್ಮೆಗೆ ಓದುಗನ ಮನ ಬಾಗುತ್ತದೆ. ಈ ಮಾತಿಗೆ ನಿದರ್ಶನವಾಗಿ
ವೃಷಭಾಚಲದಲ್ಲಿ ಪ್ರಶಸ್ತಿಯನ್ನು ಕಾಕಿಣೀರತ್ನದಿಂದ ಬರೆಸುವ ಪ್ರಸಂಗವನ್ನೇ
ಪರಾಮರ್ಶಿಸಬಹುದು.[2] ಪಂಪನ ಭರತ ಮುನ್ನಿನ ಚಕ್ರವರ್ತಿಗಳ ಪ್ರಶಸ್ತಿಗೆ

1 ಶಾಂತಿಪು 10. 115–122
2 ನೋಡಿ: ಶಾಂತಿಪು 11.61–67.

ಯನ್ನು ಓದಿ ಗಳಿತಗರ್ವನಾಗುತ್ತಾನೆ. ತೊಟ್ಟನೆ ಅವನ ಗರ್ವವೆಲ್ಲಾ ಸೋರಿ ಹೋಗುತ್ತದೆ. ಆದರೂ ಆತ ವೃಷಭಾಚಲದಲ್ಲಿ ತನ್ನ ಪ್ರಶಸ್ತಿಯನ್ನು ಬರೆಯಿಸಿಯೇ ಮುನ್ನಡೆಯುತ್ತಾನೆ. ತೋಳ್ಬಲದಿಂದ ಹಾಗೂ ಚಕ್ರಬಲದಿಂದ ನೆಲವನ್ನೆಲ್ಲಾ ಭರತ ಗೆದ್ದುಬಂದ ಹಮ್ಮು ಪೂರ್ವ ಚಕ್ರವರ್ತಿಗಳ ಪ್ರಶಸ್ತಿ ವಾಚನಾನಂತರ ಗಾಳಿ ಹೋದ ಬಲೂನಿನಂತೆ ಕರಗಿಹೋಗುತ್ತದೆ. ಎಲ್ಲಿಯೂ ಸೋಲನ್ನು ಕಾಣದ ಆತನಿಗೆ ಅಲ್ಲಿ ಮುಖಭಂಗ ಕಾದಿತ್ತು! ಪೊನ್ನನ ನಾಯಕ ಶಾಂತಿನಾಥ ವೀರಾಗ್ರಣಿ, ಅಭಿಮಾನಮೇರು. ವೃಷಭಾಚಲದಲ್ಲಿ "ವಾಳಾಗ್ರಕ ಮವಕಾಶಮಿಲ್ಲದಂತು ಕಿಕ್ಕಿಱಿಗಿಱಿದಿರ್ದ ಪುರಾತನ ಚಕ್ರವರ್ತಿಗಳ ನಾಮಾಂಕಮಾಳಿಕೆಯಂ ಕಂಡು" ಒಂದು ಕ್ಷಣ ಸಿಗ್ಗಾಯಿತು. ಸ್ತಿಮಿತ ಮನದ ಶಾಂತಿನಾಥ ಮಂತ್ರಿಗಳನ್ನು ಕುರಿತು ಹೀಗೆಂದ :

"ಮುಂ ಬರೆದಭಿಧಾನಮನಟಿ
ದಿಂ ಬರೆವಹಮಿಕೆಯ ಪೆಸರೊಳೇವಂದಪುದೇ
ನುಂ ಬೇಡ ಬನ್ನಿಂ........"

ಮಂತ್ರಿ ಮುಖ್ಯರಿಗೆ ಹೀಗೆ ಹೇಳಿದವನೇ ಶಾಂತಿನಾಥ ಬೀಡನ್ನು ಪ್ರವೇಶಿಸಿ ಸುಖದಿಂದಿದ್ದನು. ಮಂತ್ರಿಮುಖ್ಯರು ಆಗ ಸುಮ್ಮನಿರಲಾಗಲಿಲ್ಲ. ಅವರು "ಪುರಾತನಚಕ್ರವರ್ತಿ ಪ್ರವರ್ತಿತ ಮಾರ್ಗಮಿದೆಂದು" ಭಾವಿಸಿ ಕಾಕಿಣೀರತ್ನ ದಿಂದ ಮುನ್ನ ಅಲ್ಲಿ ಬರೆಯಲಾಗಿದ್ದ ಒಂದು ಪ್ರಶಸ್ತಿಯನ್ನು ಒರೆಸಿ ಶಾಂತಿ ನಾಥನ ಪ್ರಶಸ್ತಿಯನ್ನು ಅಲ್ಲಿ ಬರೆಯಿಸಿದರು.

ಪೊನ್ನನದು ಸರಳ ಸುಭಗ ಶೈಲಿ. ಒಮ್ಮೆ ಓದಿದರೆ ಮನಮುಟ್ಟು ವಂತೆ ಹೇಳುವ ಅನನ್ಯಗುಣ ಅವನದು. ಹೇಳುವ ಅಭಿಪ್ರಾಯವನ್ನು ಆವನು ಚಿತ್ತವತ್ತಾಗಿಸಲು ಉಪಮೆಗಳನ್ನು ಹೇರಳವಾಗಿ ಬಳಸಿರುವನು. ಮೋಟಗಿನ ಮಬಳಿಯ ಮಿಂಚಿನಂತೆ (1.14ವ)[1]
ಮತ್ತಹಸ್ತಿಗೆ ಪಕ್ಕಾದ ಗುಬ್ಬಿಯ ಮೆಯ್ಯಂತೆ (2.38 ವ)
ಪೆರೆಸುಲಿದ ಪಾವಿನಂತೆ (3.9)
ಗೆಲ್ಲಂಗೊಂಡಂ ಬಗೆಗೊಳ್ಪ ತೆಜದೆ (4.43)

---

1 ಈ ಆಶ್ವಾಸ ಹಾಗೂ ಪದ್ಯ ಸಂಖ್ಯೆಗಳು ಶಾಂತಿಪುರಾಣ ಸಂಗ್ರಹದವು.

ಕಡಗೊಂಡಂ ಕುಡುವಂತೆ (4.50)
ಮಿಂಚಂ ತಳ್ಕೈಸಿದ ಕಾರ ಕಾರ್ಮುಗಿಲಂತೆ (3.22 ವ)
ಗಱಿವಱಿಯ ಪಾವು ಬರ್ಪಂತೆ (6.42)
ನಂಜಿನೊಳೂಡಿದ ಕಂಜಮನೆಂಜಲಿಸಿದ ಮಧುಪನಂತೆ (6.53)
ಅರಿಶಿರಂ ಸೆಂದರದುಂಡಿಗೆ ಥರೆಗೆನಿಸಿ ಬಿಟ್ಟುದು (4.50)
ಕೆಯ್ಯ ಬೆಸಗೊಳ್ವಾರಂಭಿಗನವೋಲ್ (7.34)
ಬಳ್ಳಿಸಂಕಲೆಯುಮಂ ಪೋದ ಗಜಂ ಬನಕ್ಕೆ ತಳರ್ವಂತೆ (3.34)
ಪತಿಂವರೆ ಪುರುಷನನಱಿಸಿಕೊಳ್ವವೋಲ್ (5.6)
ಏಱ್ಗಿಯ ಪಾಡಿವದಿಂದು ಧರಿತ್ರಿಯುಮುಂ ಜಳನಿಧಿಯುಮಂ ಮನೊ
ಗೊಳಿಸುವವೋಲ್ (9.46)
ಅಭಿಘಾತಾ ಜ್ವರಮೌಷದ ವಿಭಿನ್ನಮುಂ ಉಪಶಮಿಸುವಂತೆ (10.25)

....ಇತ್ಯಾದಿ ಉಪಮೆಗಳನ್ನು ಪರಿಶೀಲಿಸಿದಾಗ ಅವುಗಳ ಬಳಕೆಯ್ಯ ಉದ್ದೇಶದ ಹಿನ್ನೆಲೆ ನಮಗೆ ಅರಿವಾಗುತ್ತದೆ. ಉಪಮೆಗಳನ್ನಷ್ಟೇ ಏನೆ ಲೋಕೋಕ್ತಿ ಜಾಣ್ಣುಡಿ, ಗಾದೆಗಳನ್ನೂ ಕವಿ ಸಂದರ್ಭೋಚಿತವಾಗಿ ಬಳಸಿ ಸಂದರ್ಭಕ್ಕೆ ಕಳೆಕಟ್ಟಿದ್ದಾನೆ. ತಾಂ ತಿರಿವ ಗೊರವಿ ಬೆನಕನುಮಂ ತಿರಿಪ್ಪ ಪಳ್ (8.130); ಕಿಱಿಕುಳನೊಳ್ ಪಡೆ [ದಗೆಲ್ಲದಿಂದಂ] ಪಿರಿಯನೊಳ್ಪು ಪಡೆವ ಸೋಲಮುತ್ತಮ (8.150); ನಡೆವ ಜಂತ್ರಮಲ್ತೆ ನರ ಶರೀರಮ (6.57); ರಾಜ್ಯಕ್ಕಂ ತ್ರಿಭುವನ ಸಾಮ್ರಾಜ್ಯಕ್ಕಂ ಬಗೆಯೆ ಹಸ್ತಿಮಕತ್ತ ಕಾಂತರಂ (5.5); ಅತಿರಕ್ತರನಾರ್ ಬಾರಿಸುವರ್ (6.40); ಕಯ್ಬಿರ ಯುಣ್ಬರಂ ರಸಮೆ ಬಾರಿಕು (6.41) ಇತ್ಯಾದಿ ಮಾತುಗಳನ್ನು ಓದಿದಾಗ ಕವಿ ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಜಾಣ್ಣುಡಿ, ಗಾದೆಗಳನ್ನು ಹೆಕ್ಕಿ ತೆಗೆದು ಸಂದರ್ಭಕ್ಕೆ ಅರ್ಥಪುಷ್ಟಿಯನ್ನೊದಗಿಸಲು ಅವನ್ನು ಬಳಸಿದಂತೆ ಭಾಸ ವಾಗುತ್ತದೆ.

ಪೊನ್ನ ನಿಸ್ಸಂಶಯವಾಗಿ ಪ್ರತಿಭಾವಂತ ಕವಿ. ಹಿಂದಿನ ಕವಿಗಳಂತೆ ಅವ ಪ್ರತಿಭೆ ಲೌಕಿಕ ಆಗಮಿಕಗಳ ಪರಂಪರೆಯ ಚೌಕಟ್ಟಿನಲ್ಲಿಯೇ 'ಹರಿದಿದೆ' ವ್ಯಕ್ತಿಗತವಾದ ಸ್ವಯಂ ಪ್ರತಿಭೆಯ ಹೊರಹೊಮ್ಮಿಸುವ ಸಾಧ್ಯತೆಯಿದ್ದರೂ ಕವಿ ಸಂಪ್ರದಾಯಾನುವರ್ತಿಯಾದುದರಿಂದ ತನ್ನೆಲ್ಲ ಪ್ರತಿಭೆಯನ್ನು ಅಲ್ಲೇ

ರಕಹೊಯ್ದಿದ್ದಾನೆ. 'ಪೆಱಗ ಅರ್ಥಮಂ, ಪೆಱರ್ ಮಾಡಿದ ದೇಸೆಯಂ, ಪೆಱರ ಬಿನ್ನಣಮಂ, ಪೆಱರೋಜೆಯಂ ಕಡಂ ಮಾಡುವ ಕಳ್ವ ಕೊಳ್ವ' ಕಬ್ಬಿಗಗಳ್ಳ ನಲ್ಲ ನಮ್ಮ ಪೊನ್ನ. ಆತ 'ಮಹಾಪ್ರಸಿದ್ಧತ್ವ'ವನ್ನು ಅಕ್ಕರಿಗರಿಂದ ಪಡೆದವನು. ಜೈನಮತ ಪ್ರಕ್ರಿಯೆಗಳಿಂದ ಹಾಗೂ ಜನ್ಮಾಂತರ ಕಥೆಗಳಿಂದ ಇಡಿಕಿರಿದಿರುವ ಶಾಂತಿಪುರಾಣವೊಂದನ್ನೇ ನಾವು ಒರೆಹಚ್ಚಿ ಪೊನ್ನನ ಯೋಗ್ಯತೆಗೆ ಬೆಲೆಕಟ್ಟ ಹೊರಟರೆ ತಪ್ಪಾಗುತ್ತದೆ. ಅವನ ಪ್ರತಿಭೆಯ 'ಗುಣ್ಪ'ನ್ನು ಅರಿಯುವಲ್ಲಿ ಅವನ ಮತ್ತೊಂದು ಮೇರು ಕೃತಿಯಾದ ಭುವನೈಕರಾಮಾಭ್ಯುದಯವೂ ಪ್ರಮುಖ ಪಾತ್ರವಹಿಸುತ್ತದೆ. ಆದ್ದರಿಂದ ಶಾಂತಿಪುರಾಣದ ಆಧಾರದ ಮೇಲೆ ಕವಿಯ ಸುಯೋಗ್ಯತೆಯನ್ನು ನಿರ್ಣಯಿಸಹೊರಟರೆ ಸತ್ಯಕ್ಕೆ ಅಪಚಾರಬಗೆದಂತಾಗುತ್ತದೆ.

ಪೊನ್ನ ಹತ್ತನೇಶತಮಾನದ ಪ್ರಮುಖ ಕವಿಗಳಲ್ಲೊಬ್ಬ. ಅವನ ಕೃತಿ ಮುಂದಿನವರಿಗೆ ಆದರ್ಶವಾಯಿತು. ಮುಂದಣ ಕವಿಗಳೆಲ್ಲರೂ ಪೊನ್ನನ ವ್ಯಕ್ತಿವಿಶಿಷ್ಟಗುಣವನ್ನು ಅವನ ಕಾವ್ಯಗಳಲ್ಲಿ ಗುರುತಿಸಿ ತುಂಬು ಭಕ್ತಿಯಿಂದ ನೆನೆಸೆದಿರುವರು. ಕವಿಗಳ ಸ್ತುತಿಪರವಾದ ನುಡಿಕಾಣಿಕೆಗಳನ್ನೇ ಒತ್ತಟ್ಟಿಗೆ ಪರಿಶೀಲಿಸಿದಾಗ ಕವಿಯ ಪ್ರಭಾವದ ಜೊತೆಗೆ ಕವಿಯ ವಿದ್ವತ್ತು, ಪಾಂಡಿತ್ಯ ಪ್ರತಿಭೆಗಳ ಬಾಹುಳ್ಯದ ಪರಿಚಯವೂ ನಮಗಾಗುತ್ತದೆ. ರನ್ನ ಶಾಂತಿ ಪುರಾಣವನ್ನು 'ಉಪಮಾತೀತ' ಪುರಾಣಗಳಲ್ಲಿ ಒಂದೆಂದೂ ಅದರ ಕವಿ 'ಜಿನ ಸಮಯದೀಪಕ'ನೆಂದೂ ಕರೆದು ಗೌರವಿಸಿರುವನು. 'ವರ್ಧಮಾನ ಪುರಾಣ'ದ ಕರ್ತೃ ನಾಗವರ್ಮನು 'ಶಾಂತೀಶ್ವರ ವರಕಥೆಯಂ ಪುರಾಣಚೂಡಾಮಣಿಯಂ ವಿರಚಿಸಿದ ಪೊನ್ನಮಯ್ಯನೆ ಚರಿತಾರ್ಥಂ' ಎಂದೂ ಅವನ ಕೃತಿ 'ಕವೀಂದ್ರ ಚೂಡಾರತ್ನಂ' ಎಂದೂ ಮನದುಂಬಿ ಹೊಗಳಿರುವನು (ವರ್ಧಪು 1.5) ನಾಗ ಚಂದ್ರನು 'ಮನ್ನಿಸುಗೆ ಕೃತಿಗೆ ಸೌಭಾಗ್ಯೋನ್ನತಿಯಂ' ಎಂದು ಹಾರೈಸಿರುವನು. ನಯಸೇನನು ಪೊನ್ನನ 'ಮಹೋನ್ನತಿವೆತ್ತ ಬೆಡಂಗ'ನ್ನು ಮೆಚ್ಚಿರುವನು. ರತ್ನತ್ರಯರ 'ಸನ್ನುತ ಕವಿತಾಗುಣಕ್ಕೆ ಸರಿದೊರೆ ಸಮನಪ್ಪನ್ನರ್ ಕಾವ್ಯಕಳಾ ಸಂಪನ್ನರ್ ಪೆಱರೊಳರೆ ಧರೆಯೊಳಿನ್ನುಂ ಮುನ್ನಂ' ಎಂದು ಪ್ರಾಂಜಲ ಮನ ದಿಂದ ಕರ್ಣಪಾರ್ಯನು ಗೌರವಿಸಿರುವನು. ರುದ್ರಭಟ್ಟನು ಪೊನ್ನಮಯ್ಯನ 'ಬೆಡಂಗ'ನ್ನು ನಯಸೇನನಂತೆ ಮೆಚ್ಚಿರುವನು. ಜನ್ನನು 'ಪೊನ್ನನಸಹಾಯ ಕವಿ' ಎಂದು ಹೊಗಳಿರುವನು. ಪಾರ್ಶ್ವಪಂಡಿತನು ಪೊನ್ನನ 'ಬಿನ್ನಣದೋಜೆ'

ಯನ್ನು ಮೆಚ್ಚಿದರೆ ಗುಣವರ್ಮನು ಪೊನ್ನನ ಪೊಸದೇಸೆಯನ್ನೂ ಮಲ್ಲಿ
ರ್ಜುನನು 'ಪೊನ್ನನೊಳ್ ಸನ್ನಿದಮಾದ ಜಾಣ್ನುಡಿ'ಯನ್ನೂ ಮೆಚ್ಚಿರುವರು

ಒಟ್ಟಿನಲ್ಲಿ, ರತ್ನತ್ರಯರಲ್ಲಿ ಒಬ್ಬನಾದ ಪೊನ್ನ ಕನ್ನಡ ಸಾಹಿತ್ಯ
ವಿಶಿಷ್ಟ, ಅಮೌಲ್ಯ ರತ್ನಗಳಲ್ಲಿ ಒಬ್ಬ. ಚೌಂಡರಸ ಹೇಳುವಂತೆ 'ಜಗ
ಪ್ರೀತಿಕರ ಪ್ರಸಿದ್ಧ ಕವಿತಾ ಸಂಪನ್ನನು'. ಅವನ ಶಾಂತಿಪುರಾಣವು ಕವಿ
ಪ್ರತಿಭೆ ವಿದ್ವತ್ತುಗಳ 'ಆಡುಂಬೊಲ'. 'ಸವಿ ತವದಂತೆ' 'ಲೇಸಪ್ಪಿ
ಶಾಂತಿನಾಥನ ಕಥೆಯನ್ನು ಹೇಳುವ 'ಪುರಾಣಚೂಡಾಮಣಿ'. ಕಾವ್ಯಧ
ಹಾಗೂ ಧರ್ಮಗಳ ಸುಂದರ ಸಮನ್ವಯದ ವಿಶಿಷ್ಟ ಕೃತಿ.

ಎಸ್. ವಿದ್ಯಾಶಂಕರ

## ೧. ಪುಟ್ಟಿದರಸಪರಾಜಿತನುಮನಂತವೀರ್ಯನುಂ

ರಮಶ್ರೀಸ್ನೇಹಗೇಹಾಯಿತ ಪದಕಮಲಂ ಚೇತನಾಚೇತನಾಂಗ
ರಿತಾಘೌಘಚ್ಛಿದಂ ಭಾಸುರ ಸುರನರಸದ್ಭವ್ಯ ಸೇವ್ಯಂ ವಚೋವಿ
ರ ತೃಪ್ತಿವ್ಯಾಪ್ತ ಲೋಕತ್ರಿತಯನಪಗತಾಶೇಷದೋಷಾಳಿ ಮುಕ್ತಿ
ರಸೌಖ್ಯಾಂಭ ಸ್ವಯಂಭೂರಮಣಜಲಧಿ ರಕ್ಷಿಕ್ಕೆ ಶಾಂತೀಶನೆಮ್ಮಂ ॥ ೧ ॥

ತಿಗಂಭೀರ ಮೃದೂಕ್ತಿ ವಕ್ತ್ರದೊಳೊಡಂಬಟ್ಟೊಪ್ಪೆ ಕೇಳ್ದಂ ಬಹು
ತನಲ್ಪಶ್ರುತನೆನ್ನದಾರ ಕಿವಿಗಂ ನುಣ್ಪಂಪಿನೊಳ್ ಕೂಡೆ ಪಂ
ತರುಂ ಮೂರ್ಖರುಮೆಕ್ಕೆಯಿಂ ಪೊಗೞ್ದಿಪೇೞಿಲ್ ಬಾಜಿಸಲ್ಕಂ ಸರ
ತಿಯಂ ಸಾಧಿಸೆ ಸಂದ ಸಯ್ಪು ಸವಣಂಗಕ್ಕುಂ ಪೆಱಂಗಕ್ಕುಮೇ ॥ ೨ ॥

ಭುವನದ ಕನ್ನಡ ಸಕ್ಕದ
ಗವಿಗಳ್ ಸಲೆ ಸಾಲೆಸೋಲೆ ಸವಣಂಗಿತ್ತಂ
ಸವಿವೇಕಮುಭಯ ಕವಿಚ
ಕ್ರವರ್ತಿವೆಸರಂ ನಿಜಾಹಿತೋಷ್ಣಂ ಕೃಷ್ಣಂ ॥ ೩ ॥

ದೊರೆಯಿಲ್ಲೆನೆ ಪೊರೆಯಿಲ್ಲೆನೆ
ನೆರಮಿಲ್ಲೆನೆ ಸಮುಜು ಸಕ್ಕದಂ ಕನ್ನಡಮೆಂ
ಬೆರಡುಂ ಕವಿತೆಯನಮಳ್ಪೆ
ತ್ತರಂತಿರೊಡನಡಪಿದಂ ಕುರುಳ್ಗಳಸವಣಂ ॥ ೪ ॥

ಕನ್ನಡಗವಿತೆಯೊಳಸಗಂ
ಗನ್ನೃರ್ಮಡಿರೇೞೆಗಗ್ಗಳಂ ಸಕ್ಕದದೊಳ್
ಮುನ್ನುಳ್ಳ ಕಾಳಿದಾಸಂ
ಗನ್ನಾಲ್ವಡಿ ರಚನೆಯೊಳ್ ಕುರುಳ್ಗಳ ಸವಣಂ ॥ ೫ ॥

ಶಾಂತಿಜಿನ ಜನ್ಮಜಲಧಿಗೆ
ಶಾಂತಿಪುರಾಣಮೆ ಪರಾರ್ಥ್ಯರತ್ನಮಿದಂ ಪೇ
ಳ್ವಿಂತು ಕವಿಚಕ್ರವರ್ತಿಯೆ
ನೋಂತಂ ಪೆಸರಿಂ ಪುರಾಣಚೂಡಾಮಣಿಯಂ ॥ ೬ ॥

ಜಿನಮದನರೊಳಗೆ ಪದಿನಾ
ಱನೆಯಂ ತತ್ಸಕಳ ಚಕ್ರವರ್ತಿಗಳೊಳಗ
ಯ್ದನೆಯನೆನೆ ಪುಣ್ಯಪುಂಜಾ
ರ್ಜನಕ್ಕೆ ಶಾಂತೀಶನಂತು ನೋಂತರುಮೊಳರೇ ॥ ೭ ॥

ಆ ತೀರ್ಥಕರನ ಪೆಂಪುಪ
ಮಾತೀತಮದರ್ಕೆ ಬಯಸಿ ಕಣ್ಣುಂ ಕಾಲುಂ
ಬಾತೊಡೆ ಬರ್ಪುಮೆ ಪುಣ್ಯಮ
ನಾತನ ನೆರಪಿದುದನೆಯ್ದೆ ನೆರಪದೆ ಮೊದಲೊಳ್ ॥ ೮ ॥

ಜಿನತತ್ವಂ ಸ್ಮರತತ್ವಮೆಂಬಿವೆರಡುಂ ದೂರಸ್ಥಮೆಂತೆನ್ನಲಾ
ಜಿನತತ್ವಂ ಗತರಾಗಮಾಮದನತತ್ವಂ ರಾಗಸಂಪೂರ್ಣಮ
ಯ್ದನೆಯಂ ತಜ್ಜಿನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮಚ
ಕ್ರನಿಯುಕ್ತಂ ಭರತೋರ್ವಿಗಿಂತು ಸಲೆ ನೋಂತಂ ಶಾಂತಿತೀರ್ಥೇಶ್ವರಂ ॥ ೯ ॥

ಮುನಿಪ ಸಹಸ್ರ ಭೋಜನಕರಂ ಬುಧ ಭವ್ಯಜನೌಘಸೇವ್ಯನ
ತ್ಯನುಪಮಚಕ್ರವರ್ತಿ ಯತಿರಾಜ ಗಣಾಗ್ರಣಿದತ್ತವಿತ್ತ ಭಾ
ಜನ ಕವಿವಾದಿವಾಗ್ಮಿಗಮಕಂ ವಸುಧೈಕ ಕುಟುಂಬಕಂ ಸಭಾ
ಜನ ಸುಜನೈಕ ಭಾಜನಮುಖಂ ಜಿನಚಂದ್ರಮುನೀಂದ್ರನುರ್ವಿಯೊಳ್ ॥ ೧೦ ॥

ಈಡಿತ ಜಿನವರ ಶಾಸನ
ಚೂಡಾಮಣಿ ಬುಧರ್ಗನಲ್ಪ ಕಲ್ಪಕುಜಂ ಕೆ
ಯ್ನೀಡಿದ ಬೇಟ್ಪರ ನೆರವಿಗೆ
ನೀಡಿಲ್ಲದೆ ಕುಡುವುದಾತ್ತನಾಜಿನಚಂದ್ರಂ ॥ ೧೧ ॥

ಎನಗೆ ಜಿನೇಂದ್ರಧರ್ಮಮೆ ಶರಣ್ ಮೊನೆಗೊಡ್ಡಿದ ಭೂರಿವೈರಿಸಾ
ಧನಹರಣಂ ದಲೆಂದೆ ಜಿನಚಂದ್ರ ಮುನೀಂದ್ರರ ಪಾದಮೂಲದೊ
ಳ್ವಿನಮಿತರಾಗಿ ಕೊಂಡುಕೊನೆವರ್ ಸಲೆ ವಾಣಿಯವಾಡಿಯೊಳ್ ಮಹಾ
ಜನಿಪರದೇನಗಣ್ಯ ಕೃತಪುಣ್ಯಮೊ ಭಾವಿಸೆ ತನ್ಮುನೀಂದ್ರನಾ ॥ ೧೨ ॥

ಆ ಜಿನಚಂದ್ರನನಯ ನಯ
ಭಾಜನನಂ ಸಲೆ ಪುರಾಣಚೂಡಾಮಣಿಗೀ
ಭ್ರಾಜಿತ ಶಾಂತೀಶ್ವರ ಕಥೆ
ಗೀ ಜಗದೊಳ್ ಪತಿಯೆನಲ್ಕೆ ಪೇೞ್ವೆಂ ಕೃತಿಯಂ ॥ ೧೩ ॥

ಕವಿ ಕವಿಚಕ್ರವರ್ತಿ ಕೃತಿನಾಯಕನಾ ಜಿನಚಂದ್ರದೇವನು
ತ್ಸವನಿಧಿ ಮಲ್ಲಪಾರ್ಯನುಮುದಾತ್ತ ಯಶೋನಿಧಿ ಪುನ್ನಮಾರ್ಯನುಂ
ಸವಿತವದಂತು ಪೇೞಿಸಿದರೆಂದೊಡೆ ಶಾಂತಿಪುರಾಣಮೇಂಕರಂ
ನವರಸಮೇಂಸಮರ್ಥಯುತಮೇಂಮೃದುಬಂಧನಮೇಂಪ್ರಸನ್ನಮೋ ॥ ೧೪ ॥

ಉಪಮಾತೀತಂ ಕೃತಿ ಶಾಂ
ತಿಪುರಾಣಂ ಸಲೆ ಪುರಾಣಚೂಡಾಮಣಿಯೆಂ
ದುಪಶಮದಿಂ ಬರೆಯಿಸಿ ಮ
ಲ್ಲಪಯ್ಯನುಂ ಪುನ್ನಮಯ್ಯನುಂ ಪರೆಯಿಸಿದರ್ ॥ ೧೫ ॥

ಭೂಮಿಗೆ ಕಾವ್ಯರತ್ನಮಿದೆ ಸಾರಮೆನಲ್ ನೆಗೞ್ದೀ ಪುರಾಣಚೂ
ಡಾಮಣಿಗೞ್ತಿಯಿಂ ಕಳಸಮಿಟ್ಟು ಗುರುಸ್ಥಿರಭಕ್ತಿಪೂರ್ವಕಂ
ಪ್ರೇಮದೆ ಮಲ್ಲಪಯ್ಯನುಮುದಾತ್ತಯಶೋನಿಧಿ ಪುನ್ನಮಯ್ಯನುಂ
ತಾಮುಪಕಾರಮಂ ನೆರಪಿದರ್ ಜಗದೊಳ್ ಜಿನಚಂದ್ರದೇವರಾ ॥ ೧೬ ॥

ತವದ ಪಿರಿದೞ್ತಿಯಿಂದಿದ
ನವರಿರ್ವರುಮಱಿಯೆ ನೆಱೆಯೆ ಪೇೞಿಸಿ ಜಿನಚಂ
ದ್ರವರಮುನೀಂದ್ರರ ಪೆಸರೊಳ್
ಸವೆಯಿಸಿದರ್ ನೆಗೞ್ದಖಂಡ ಭೂಮಂಡಳದೊಳ್ ॥ ೧೭ ॥

ಆ ಕಥೆ ಮತ್ತೆಂತೆಂದೊಡೆ
ಭೀಕರ ಕರಿಮಕರ ನಿಕರ ಭಿನ್ನ ತರಂಗಾ
ನೀಕ ಲವಣಾಂಬುರಾಶಿವೃ
ತಾಕೃತಿ ಕಮನೀಯಮುಂಟು ಜಂಬೂದ್ವೀಪಂ ॥ ೧೮ ॥

ತನ್ಮಧ್ಯದೊಳಿರ್ಪುದು ರುಚಿ
ವನ್ಮೇರುನಗೇಂದ್ರಮದಱ ಮೂಡಣ ದೆಸೆಯೊಳ್
ಮನ್ಮಥನೃಪಾಭಿನವ ರಾ
ಜ್ಯೋನ್ಮದ ಮಹಿದೇಹಮುಂಟು ಪೂರ್ವವಿದೇಹಂ ॥ ೧೯ ॥

ಇಂತಿನಿವಿರಿದಗ್ಗಳದದ
ಗುಂತಿಯನೊಳಕೊಂಡು ವಿಷಯವರವನಿತೆಯ ಸೀ
ಮಂತದ ಮಣಿಕಾಂತಿಗೆ ಮು
ಯ್ವಾಂತುದು ಚೆಲ್ವಿಂ ಪ್ರಭಾಕರೀ ನಾಮಪುರಂ ॥ ೨೦ ॥

ಆ ಪೊಟಿಲನಾಳ್ದನಖಿಳಮ
ಹೀಪತಿ ಮದದಂತಿದಂತಖಂಡನೆಗೆ ಸಮಾ
ರೋಪಿತ ಕೃಪಾಣ ಧಾರಾ
ವ್ಯಾಪಾರಂ ಸ್ತಿಮಿತಸಾಗರಂ ಮಂಡಳಿಕಂ ॥ ೨೧ ॥

ಚಾಗದ ತೋರ್ಕೆಗಂ ನೆಗಟ್ದ ಬೀರದಳುರ್ಕೆಗಮೊಳ್ಪನಪ್ಪಿದು
ದ್ಯೋಗದಮರ್ಕೆಗಂ ಸಿರಿಯಸಾರ್ಕೆಗಮಾಯತಿಯಿರ್ಕೆಗಂ ಪೆಱರ್
ಮೇಗೆನಲಿಲ್ಲದಂತು ನೆಗಟ್ದುರ್ದದಱಿಂ ಮನುಜೇಂದ್ರಕೋಟಿ ಕೋ
ಟೀಗುಣಕೋಟಿಗಾ ಸ್ತಿಮಿತಸಾಗರನಾಗರಮಾಗದಿರ್ಕುಮೇ ॥ ೨೨ ॥

ಪರಿಜನಮನಳವಿಯಱಿದಾ
ಳರಸೆಂಬುದನಱಿಯಲಾಗದಂತಿರೆ ಪೊರೆದಾ
ನರಪತಿಯ ಗುಣಾಗುಣದಂ
ತರಮಱಿವುದನಾಳ ಸಿರಿಯ ಲೀಲೆಯೆ ತೋರ್ಕುಂ ॥ ೨೩ ॥

ಆ ಸ್ತಿಮಿತಸಾಗರ ಮಹೀವಲ್ಲಭಂಗೆ—

ನಿರತಿಶಯ ರೂಪ ಯೌವನ
ವಿರಾಜಿತಾಂಗಿಯರನಂಗ ಜಂಗಮಲತಿಕೋ
ತ್ತರ ತನುಗಳ್ ನೆಗಟ್ದಿ ವಸುಂ
ಧರೆಯುಂ ವಸುಮತಿಯುಮೆಂಬರರಸಿಯರಾದರ್ ॥ ೨೪ ॥

ಅಗ್ರಮಹಿಷೀಪದಕ್ಕಮ
ದಗ್ರ ಪ್ರೇಮಾಸ್ಪದಕ್ಕಮವರಿರೆ ನೃಪನ-
ವ್ಯಗ್ರತೆಯಿನಿತರ ವನಿತೆಯ
ರಾಗ್ರಹಮಂ ಬಿಟ್ಟನೇನವರ್ ಸೊಬಗಿಯರೋ ॥ ೨೫ ॥

ಅನಂತ ಸುಖಪರಂಪರೆಯಿಂ ಪಲಕಾಲಂ ಸಲೆ —

ಆ ಜಾಯಾದ್ವಯಕಂ ಕ್ಷಿತಿ
ರಾಜಂಗಮಪೂರ್ವ ತುಂಗಜಂಗಮ ದಿವಿಜೋ
ರ್ವೀಜಮಿವೆನೆ ಪುಟ್ಟಿದರಪ
ರಾಜಿತನುಮನಂತವೀರ್ಯನುಂ ಪ್ರಿಯತನಯರ್ ॥ ೨೬ ॥

ಇಂತು ವಸುಂಧರೆಗಪರಾಜಿತಂ ವಸುಮತಿಗನಂತವೀರ್ಯಂ ಪುಟ್ಟುವುದುಂ —

ಜಯಮೊಡವುಟ್ಟಿದುದು ನಯೋ
ದಯಮೊಡವಳೆದುದು ವಿಳಾಸಮೊಡನಾಡಿದುದ
ನ್ವಯದೊದವು ತಾಯುಮಂ ತಂ
ದೆಯುಮಂ ತಣ್ಪಿದುದಪಾರ ರಾಗಾಮೃತದಿಂ ॥ ೨೭ ॥

ಇಂತು ಬಳೆಯೆವಳೆಯೆ —

ಬಲದೇವ ವಾಸುದೇವರೊ
ಳಲಂಘ್ಯಬಲನೊರ್ವನುಗ್ರಬಲನೊರ್ವನವರ್
ಕೆಲದೊಳಿರೆ ಚಂದ್ರ ರವಿಮಂ
ಡಲ ಮಧ್ಯದ ಕನಕಗಿರಿಗೆ ನೃಪನೆಣೆಯಾದಂ ॥ ೨೮ ॥

ಅಂತು ಬಲದೇವ ವಾಸುದೇವರ್ ಮಾತಾಪಿತೃಗಳನುರಾಗದೊಡನೊ
ಪ್ರಮೋದಪ್ರವರ್ಧನವಾಗೆ ಸುಖಮಿರ್ಪನ್ನೆಗಂ

ನಭದೊಳ್ ಪೂಮಟೆ ಭುವಿಯೊಳ್ ಮರುತಕಂ ದಿಗ್ಭಿತ್ತಿಯೊಳ್ ದೇವದುಂ
ದುಭಿನಾದಂ ಭುವನತ್ರಯಂಗಳೊಳನೂನಂ ವಂದನಾನಂದಕಂ
ಸಭೆಯೊಳ್ ದೇವನಿಕಾಯಮೊಪ್ಪುತಿರೆ ಬಂದಂ ಲೋಕನಾಥಂ ಸ್ವಯಂ
ಪ್ರಭತೀರ್ಥೇಶ್ವರನಾ ನೃಪೇಶ್ವರನ ರಾಜ್ಯಂ ಪೂಜ್ಯಮಪ್ಪನ್ನೆಗಂ ॥ ೨೯ ॥

[ಘನದುರಿತಾಂತಕನೆಟ್ಟಿರವನಱಿಪೆ ವನಪಾಲಕನ್, ಪಡೆಯಂ ಸ
ಲ್ವೀಟಾಗಡೆ ಪುತ್ರ ಕಳತ್ರ ಮಿತ್ರಸಹಿತಂ ಮಹಿಪಂ ನದೀಪ್ರವಾಹಂ
ವಂತಿರೆ ಸಮವಸರಣ ವಾರಾ ಶಿವರಂ ನಡೆದಂ. ಅಂತು ಬಂದು ದೂರಾಂ
ದೊಳ್ ಮಾನಸ್ತಂಭ ನಿರೀಕ್ಷಣ ಕ್ಷಣದೊಳ್ ತನ್ನೇಱಿದ ಯಾನಗಜರಾ
ನಿೞಿದಾ ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಭಗವದಭಿಮುಖನಾಗಿ ನಿಂ
ನಿಟಲತಟಘಟಿತ ಕರಪುಟ ಕಮಳಮುಕುಳಂ ಸ್ವಯಂಪ್ರಭ ಜಿನೇಂದ್ರನಂ ಸ್ತು
ಯಿಸಿ ಬೞಿಯಂ ಗಣನಾಥನಂ ಗುರುಭಕ್ತಿಪೂರ್ವಕಂ ಬಂದಿಸಿ ಧರ್ಮಮ
ಕೇಳ್ದು ಸಮುಪಜಾತ ನಿರ್ವೇಗಪರಂ ಪರಮೇಶ್ವರದೀಕ್ಷೆಯಂ ಸ್ತಿಮಿತ ಸಾಗ
ಕೆಯ್ಕೊಂಡಂ]

ಕ್ಷಿತಿಪ ತಪೋಗ್ರಹಣದ ಮನ
ಕತಮುಂ ಜಿನತತ್ವದೇಶಮುಂ ಪೊರ್ದೆ ವಿಷಾ
ಮೃತದವೊಲಿರ್ದೆಯೊಳ್ ನಿಲೆ ತ
ಮ್ಮುತಿರ್ವರುಂ 'ಸಮವಸರಣದಿಂ ಪೊಱಮಟ್ಟರ್ ॥ ೩೦ ॥

ಅಂತು ಪೊಱಮಟ್ಟು ತಂತಮ್ಮ ವಾಹನಂಗಳನೇಱಿ ಪರಿಜನಂ ಬೆರ
ಯೂಥಪತಿ ಪೊಱಗಾದ ಕರಿಕಲಭಸ್ಥಿತಿಯಿಂದಂ, ಮೃಗಪತಿ ಪೊಱಗಾ
ಕಿಶೋರ ಕೇಸರಿ ವಿಧಿಯಿಂದಂ, ರಾಜಹಂಸಂ ಪೊಱಗಾದ ಯುವರಾಜಹಂ
ಪ್ರಕಾರದಿಂದಂ ಬಂದು ಪತಿವಿಯೋಗದಿಂ ನಿಜಜನಸಿಯರನೆ ಪೋಲ್ತು ಪ್ರಸಾ
ವಿರಹಿತೆಯುಂ, ನಿರಾನಂದ ಜನೋಪೇತೆಯುಮನಾನಿತ ಹರ್ಷೋತ್ಕರ್ಷೆಯ
ಮಾಗಿರ್ದ ತನ್ನನ್ವಯ ರಾಜಧಾನಿಯನನುಜ ಸಮೇತನಪರಾಜಿತನೆಯ
ವಂದು

ಕೃಶರಾಗಂ ವಿಗತ ಮನಃ
ಪ್ರಸರತೆಯಿಂ ಕಣ್ಣನೀರ್ಗಳಂ ತೀವಿ ನಿರಂ
ಕುಶಶೋಕಪರವಶಂ ಚಿ
ತ್ರಶೇಷ ನಿಜಜನಕನಿಳಯಮಂ ವಿಭು ಪೊಕ್ಕಂ ‖ ೩೧ ‖

ಅಲ್ಲಿ ತನ್ನಂ ಕಾಣಲೊಡನಿಮ್ಮಡಿಸಿದ ಶೋಕದಾವಾನಲನೆರ್ದೆಯೊಳ್
ಪ್ರೋಟ್ಕ್ರಿರದ ಕಿಚ್ಚಿರ್ನನಂತಳುರೆ ತಳವಳಗಾಗಿ ಸೈರಣೆಗೆಟ್ಟು ಬಾಯಟೊದಟಿತುಂ
ಪಳಯಿಸುವ ಮಾತೃವರ್ಗಕ್ಕೆಱಗಿ ಪೊಡವಟ್ಟು ಕುಳ್ಳಿರ್ದು ಸಂತೈಸಿ—

ಪರಮಾರ್ಥಂ ಪರಿಪಾಲನ
ಕರದಿಂದಪರಾಜಿತಾಬ್ಜಮಿತ್ರಂ ಕಳೆದಂ
ನರಪತಿ ವಿಗಮುದೊಳೊಡನೊಗೆ
ದರಸಿಯರ ಮುಖಾಬ್ಜ ಶೋಕಹಿಮಜಲ ಲವಮಂ ‖ ೩೨ ‖

ತದನಂತರಂ ನೈಮಿತ್ತಿಕ ನಿರೂಪಿತ ಶುಭದಿನ ಮುಹೂರ್ತದೊಳ್

ಕಮಳಾಳಂಕರಣೈಕಕಾರಣನುದನ್ವದ್ವೇಷ್ಟಿತೋರ್ವೀಭರ
ಕ್ಷಮನೆಂದನ್ವಿತ ಮಂತ್ರಿವರ್ಗಮೊಡನೆಟ್ಟಾಳೋಚದಿಂದೀಯೆ ರಾ
ಜ್ಯಮನಿಂದ್ರಾಕೃತಿ ಸೀರಪಾಣಿ ಮಹಿಮಾವಷ್ಟಂಭದಿಂ ಸಿಂಹಪೀ
ಠಮನಂದೇಱಿದನುತ್ಸವೋದಯಕರಂ ಸೌಜನ್ಯಕಂದಾಂಕುರಂ ‖ ೩೩ ‖

## ೨. ಲಕ್ಷ್ಮೀಸದನಂಗಾ ಕನ್ನೆಯುಂ ಮುಂ ಕೊಡಿಸು:

ಶ್ರೀರಮಣೀ ರಮಣೀಯಂ
ಸೀರಾಸ್ತ್ರಂ ನಿಂದನಾಧಿರಾಜ್ಯದೊಳಂ ನಿ
ರ್ದಾರಣನನಂತವೀರ್ಯನ
ಪಾರ ಬಲಂ ಯೌವರಾಜ್ಯಪದದೊಳ್ ನಿಂದಂ ॥ ೧ ॥

ವಿಳಸಿತ ಗುಣಗಣದಿಂ ನಿ
ರ್ಮಳ ತನುವಿಂ ಗೆಲ್ದು ಬೀಜದಿಂ ಬೆಳಸೆಂತ
ಗ್ಗಳಮಕ್ಕುಮಂತೆ ಗುರುಗ
ಗ್ಗಳಮಾದನಿದೇಂ ಸುಪುತ್ರನೋ ಬಲದೇವಂ ॥ ೨ ॥

ಪ್ರವಿಮಲಮತಿಗನಿತುಂ ರಾ
ಜವಿದ್ಯೆಗಳ್ ನೆಱೆಯುವಮಲ ಕೀರ್ತಿಗೆ ದಶದಿ
ಗ್ವಿವರಂ ನೆಱೆಯವು ಹಲಧರ
ನವೊಲಜಾವಿನ ಜಸದ ಪವಣನೆಯ್ದಿದರೊಳರೇ ॥ ೩ ॥

ಬಲದೇವನಖಿಳ ರಿಪುಕುಲ
ವಿಲಯಾನಲನಾತ್ಮಕುಲ ಸಮುಜ್ಜ್ವಲ ಗಗನ
ಸ್ಥಲ ಖರಕರಂ ಸುಪುತ್ರಃ
ಕುಲದೀಪಕ ಎನಿಸಿ ನೆಗಟ್ದನಖಿಲಾವನಿಯೊಳ್ ॥ ೪ ॥

ಅನುಜಂ ನಾಮಾಕ್ಷರದಿಂ
ದನಂತವೀರ್ಯಂ ಪರಾಕ್ರಮ ಕ್ರಮದಿಂ ತ
ನ್ನನೆ ತಾನೆ ಪೋಲ್ಗುಮೆಂಬಿನ
ಮನಂತವೀರ್ಯಂಗನಂತವೀರ್ಯತೆ ಸಾರ್ಥಂ ॥ ೫ ॥

ಮತ್ತಂ –

ಪೊಱಗಣರಿವರ್ಗಮಂ ತ
ಳ್ತಿಱಿದು ಗೆಲಲ್ಬರ್ಕುಮೊಳಗಣರಿಷಡ್ವರ್ಗಂ
ನೆಱೆದಿರೆ ಬಾರದು ಗೆಲಲದ
ನಱಿದೀ ಬಲದೇವನಂತು ಗೆಲ್ದರುಮೊಳರೇ ॥ ೬ ॥

ಅಂತವರಿರ್ವರೊಳಂ ಭವ
ಸಂತತಿಯಿಂದೊಡನೆ ನಡೆವ ಮೋಹಂ ಮೊದಲಿಂ
ದಂ ತುದಿಯನೆಯ್ದೆ ಜಲರುಹ
ತಂತುವೊಲೆಡೆವಱಿಯದೊಲ್ದು ಸಲೆ ಪಲಕಾಲಂ ॥ ೭ ॥

ಒಂದು ದೆವಸಮೋಲಗದೊಳೊರ್ವನಪೂರ್ವ ಖೇಚರಂ ಬಂದು ದೌವಾರಿಕ ನಿವೇದಿತ ವೃತ್ತಾಂತನಾಗಿ ಕಂಡಪರಾಜಿತಾನಂತವೀರ್ಯರ್ಕಳ್ಗೆಱಗಿ ಪೊಡವಟ್ಟುಚಿತ ಪ್ರದೇಶನ್ಯಸ್ತ ಭದ್ರಾಸನದೊಳ್ ಕುಳ್ಳಿರೆ ಲಾಂಗಲಹಸ್ತಂ ವಿದ್ಯಾಧರರಾಜದೂತನ ಮೊಗಮಂ ನೋಡಿ –

ಬಂದ ಬರವಾವುದೆಲ್ಲಿಂ
ಬಂದಿರ್ ಭವದೀಯ ನಾಮಮೇನೆಂಬುದಿದೆಂ
ತೆಂದೆಮಗೆ ಪೇಟ್ವುದವಿತಥ
ಮೆಂದೊಡೆ ಖಚರೇಂದ್ರದೂತನಿರ್ದು ವಿನೀತಂ ॥ ೮ ॥

ವಿರಚಿತಾಂಜಲಿಪುಟ ಘಟಿತಕರನಿಂತೆಂದು ಬಿನ್ನಪಂಗೈದಂ –

ಪದನಮಿತಾಖಿಲಾರಿ ದಮಿತಾರಿ ಮದೀಶ್ವರನೆನ್ನನಿಲ್ಲಿಗ
ಟ್ಟಿದನಿದನೊಪ್ಪುಗೊಳ್ವುದು ಪ್ರಸಾಯಮನಾ ಮಹಿಪಂ ಪುರಲ್ದು ಬೇ
ಡಿದುದನದಾಗದೆನ್ನದಿರದಟ್ಟುವುದಿನ್ನದನಾನದಾವುದೆಂ
ಬುದನಱಿವಂತು ಪೇಟ್ವೆನವಧಾರಿಸಿಮಿರ್ವರುಮೇಕಚಿತ್ತದಿಂ ॥ ೯ ॥

ದಮಿತಾರಿ ಮಹಾರಾಜಂ ಮೃಗರಾಜಾಸನಾಸೀನನೊಡ್ಡೋಲಗ
ಗೊಟ್ಟಿರೆ ವೈಣ ಶಾರೀರ ಗೀತವಿಶಾರದಂ ನಾರದನಭ್ರಪಥದಿನವನಿಗವತ
ಕಂಡು ಪವಮಾನ ಮಾರ್ಗದಿನವನಿತಳದೊಳಡಿಯಿಡದಲ್ಲಿಂ ಮುನ್ನಮಿದಿರೆ
ಭಕ್ತಿಪುರಸ್ಸರಂ ಮನದೆಱಕದಿನೆಱಗಿದ ಗಗನಚರಾಧೀಶನಂ ಯತಿ ಪ
ಯಥೋದ್ದಿಷ್ಟ ವಿಷ್ಟರದೊಳ್ ಕುಳ್ಳಿರ್ದು ಸ್ವಾಗತ ಕುಶಲ ಸಂಭಾಷಣ
ನಂತರಂ ಪಡೆಮಾತು ಮಾತುಗಳ್ ತಗುಳೆ ಮಾತು ಮಾತಾಗೆ ನಾ
ನಿಂತೆಂದಂ, ಎಮ್ಮ ಕಂಡುಂ ಕೇಳ್ದುಮಱಿಯದ ವಸ್ತುಗಳಿಲ್ಲ, ಗಾಂಧ
ಮೆಂಬುದೆಮ್ಮ ಬಾಳನಿದ್ಯೆಯದಱೊಳೆಮ್ಮಂ ರಂಜಿಸುವನ್ನರ್ ಪೌಥರ
ವೊಂದು ಚೋದ್ಯಮಂ ಕಂಡೆವಾವುದೆನೆ ವತ್ಸಕಾವತೀವಿಷಯದ ಪ್ರಭಾಕ
ಪುರಮನಾಳ್ವನಪರಾಜಿತನೆಂಬೊಂ, ತನ್ನ ತಮ್ಮನಂ ಯುವರಾಜನನಂತವಿ
ರ್ಯನಂ ರಾಜ್ಯಭಾರದೊಳ್ ನಿಯೋಜಿಸಿ ಸಮಸ್ತ ವಿಷಯ ಸುಖಮನ
ಭವಿಸುತಿರ್ಪನಾಮುವೊಂದು ದಿವಸಮಾತನಂ ಪರಸಲ್ ಪೋಗಿ ಗೊಟ್ಟ
ಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ, ಒಂದೆ ಕೊರಲೊಳ್ ತೊಳೆಪಾಡು
ಬರ್ಬರ ಕಿರಾತೆಯರಿಂಗೊರಲೊಳೊದವಿ ಬಂದಿರ್ದೆಯನಳ್ಳಿವಿಳ್ಳಿಯಾಗಿ ಪಿ
ಲುಗುವಂತಲುಗೆ ತೊಳ್ತುಱಿಯುಮುಗಿಯುಂ ಬಗಿಯುಂ ಮಾಡಿ ಮನಮನು
ಸೆಱೆವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮಱುಗಾಡುತ್ತು
ನಿಮೀಳಿತನೇತ್ರನುಂ ರೋಮಾಂಚ ಕಂಚುಕಿತಗಾತ್ರನುಮಾಗಿರ್ದಪರಾಜಿ
ನೆಮ್ಮ ಬಂದುದನಿರ್ದುದುಮನಱಿಯದಿರೆಯುಂ, ಕಿಱಿದು ಲೋಕಜ್ಞ
ಯೊಂದಿರ್ಪುದಱಿಂ ರಸಭಂಗಮಾಡದೆ ಗಜೋನ್ಮೀಲನಂಗೆಯ್ದು ವಿಷಯಾಸಕ್
ಪುರುಷೇಂದ್ರಿಯ ಪಂಚಕಂ ಚಿತ್ರಗತರೂಪೇಂದ್ರಿಯ ಪಂಚಕಪ್ರಪಂಚ ಸಮಾ
ಮಕ್ಕುಮೆಂದು ಬಗೆದೆಟ್ಟಿ ಬಂದೆವದಱಿಂದಮಾ ಗಾಯಿಕಾರತ್ನದ್ವಯಂ ಸ
ರತ್ನ ಭಾಜನನುಂ ಚಕ್ರವರ್ತಿಯುಮಪ್ಪ ನಿನಗಲ್ಲದೆ ಯೋಗ್ಯಮಲ್ಲೆಮ್ಮ
ವುದುಮನಿತೆ, ಮತ್ತುಱಿದುದನೆಮಗೇನೆಂದಱಿಯಲ್ಬಾರದು, ಎಂದು ನುಡಿದ
ಖಚರೇಂದ್ರನ ಮನಮನಾವರ್ಜಿಸಿಯುಂ ತನ್ನ ವಿಸರ್ಜಿಸಿಯುಂ ನಾರದ
ಪೋದನಿತ್ತೆಮ್ಮರಸಂ ಬರ್ಬರೆಯುಂ ಕಿರಾತೆಯುಮೆಂಬಿರ್ವಗಾಣತಿಯರುಮ
ಬೇಡಿಯಟ್ಟಿದನೆನ್ನ ಪೆಸರಮಿತಸೆಂಬುದೆಂದು ತನ್ನ ಬಂದಬರವನಱಿಯೆ ಬಿನ್ನ
ಪಂಗೆಯ್ದು ತನ್ನ ತಂದ ಪಾಗುಡಮನಾಸನ್ನವರ್ತಿಯುಮಭಿರಾಮಮೂರ್ತಿ

ಯುಮುಪ್ಪವಾತ್ಯೋತ್ತಮನ ಕೆಯ್ಯೊಳ್ ಕುಡುವುದುಮಪರಾಜಿತಂ ಯಥೋಕ್ತ ಪ್ರತಿಪತ್ತಿಯಿಂ ದೂತನಂ ಬೀಡಿಂಗೆ ಪೋಗಲ್ವೇೞ್ದುಮರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪಪಾಯನದ ಮುದ್ರೆಯಂ ಕಳೆದು ಸುತ್ತನೆಱೆದು ಬಿತ್ತರಿಸಿ ತೋಱುವುದುಂ

ನಯನಾನಂದಮಾಗಿಯುಂ ತನುಮನಸ್ಸಂತೋಷ ಸಂಪಾದಿಯಾ
ಗಿಯುಮಾಶಾರುಚಿಯಾಗಿಯುಂ ವಿಶದರುಕ್ಛ್ರೀಚಂದ್ರಿಕಾಸಾಂದ್ರಿಯಾ
ಗಿಯುಮಿಂದುದ್ಯುತಿಪದ್ಮಮಂ ಕೊರಗಿಪಂತೊಡ್ಡೋಲಗಕ್ಕೆಯ್ದೆ ವಿ
ಸ್ಮಯಮಪ್ಪಂತಿರೆ ಹಾರರೋಚಿ ಹಳಿಯಂ ಮೂರ್ಛಾಸ್ಪದಂ
ಮಾಟ್ಪುದುಂ ॥ ೧೦ ॥

ಒಱಲ್ದು ಮೃಗೇಂದ್ರಾಸನದ ಕೆಲದ ಮತ್ತವಾರಣಮಂ ನೆಮ್ಮಿ ನಿಶ್ಚೇತನನಪರಾಜಿತ ಮಹಾಮಹೀಶನಿರೆ

ತುರಿತದಿನನಂತವೀರ್ಯಂ
ಬೆರಸು ನೃಪಾಸನ್ನವರ್ತಿಗಳ್ ಕರ್ಪೂರಾ
ಗುರು ಮಳಯರುಹವಿಮಿಶ್ರಿತ
ಕರಕಾಂಭಸ್ಸೇಕಪೂರ್ವಕಂ ಬೀಸುವುದುಂ ॥ ೧೧ ॥

ಸುತ್ತಿರ್ದುತ್ತಮ ರಾಜಯೂಥದ ಮನಕ್ಕಾನಂದಮಪ್ಪಂತು ಯೋ
ಷಿತ್ಸಾಮ್ಯತ್ಕರಿಣೀಗಣಕ್ಕೆ ಪಿರಿದೊಂದೌತ್ಸುಕ್ಯಮಪ್ಪಂತು ಮಾ
ಡುತ್ತುಂ ಚೇತನೆ ಪುಟ್ಟೆ ಮೂರ್ಛೆ ತಿಳಿದೆೞ್ದಂತಾನುಮೆಂತಾನುಮೆ
ೞ್ಚತ್ತಿರ್ದಂ ಮದದಂತಿ ಸೆಜ್ಜರದಿನೆೞ್ಚತ್ತಿರ್ದವೋಲ್ ಭೂಭುಜಂ ॥ ೧೨ ॥

ಅಂತು ಮೂರ್ಛೆಯಿಂದೆಂತಾನುಮೆೞ್ಚತ್ತು ಕದಡಿ ತಿಳಿದ ಮಾನಸ ಸರೋವರದಂತೆ ಸುಪ್ರಸನ್ನನುಮಾಗಿರ್ದ ಹಲಧರನಂ ಶಾರ್ಙ್ಗಧರನುಮಾ ಮಂತ್ರಿವರ್ಗಮುಂ ನೋಡಿ ರಾಗಿಸಿ ಕರ್ಣಜಪದೊಳ್ ಮೂರ್ಛಾವ್ಯಾಸಂಗಮಂ ಬೆಸಗೊಳೆ ನೆಱೆದೋಲಗಿಸುವ ಮಕುಟಬದ್ಧರನುಚಿತ ಪ್ರತಿಪತ್ತಿಗಳಿಂ ವಿಸರ್ಜಿಸಿ ತತ್ಪ್ರಪಂಚಮುಂ ಸಪ್ರಪಂಚಮಪರಾಜಿತನಿಂತೆಂದು ಪೇೞಲ್ತಗುಳ್ದಂ—

ಹಾರಮಿದನ್ಯ ಭವಾಲಂ
ಕಾರಮನನುಕರಿಸಿ ಮದ್ವಿತೀಯನ ಗತಿಸಂ
ಸ್ಕಾರಮನಱಿಪಿದೊಡೆನ್ನ ಶ
ರೀರಕ್ಕಿನಿತಾಯ್ತು ವೈಪರೀತ್ಯಂ ಸಭೆಯೊಳ್ ॥ ೧೩ ॥

ಈ ಖೇಚರನ ಹಾರಮಪಥ್ಯಾಹಾರದಂತೆಯುಮಪರಿಣಾಮವಿಹಾರದ್ಸ...
ಯುಮೆನಗನಿತು ಬೇಗಂ ಪ್ರಮೋದಸಂಹಾರಮಂ ಮಾಡಿದ ಕಾರಣಂ ಭ...
ಮೊದಲಾಗೀ ಭವಕ್ಕೆ ಮೂಱನೆಯ ಭವದೊಳಮಿತತೇಜನೆಂಬ ವಿದ್ಯಾಧ...
ರಾಜನಾಗಿ ಪುಟ್ಟಿದೆನನಂತವೀರ್ಯನುಮೆನ್ನ ಮುನ್ನಿನ ತಂದೆಗೆ ಸೋದ...
ಳಿಯಂ ಶ್ರೀವಿಜಯನೆಂಬೊನಾದನೆಂದತೀತ ಭವವ್ಯಾಪಾರಮಂ ಪೇಱ...
ಮಿರೆಯಿರೆ–

ವಿದ್ಯಾಭೃತ್ಕುಲಜಾತಿಸಾಧಿತ ನಿಸರ್ಗೋದಗ್ರ ಸಾಮಗ್ರಿಯಿಂ
ವಿದ್ಯಾದೇವತೆಗಳ್ ನರರ್ಗೆ ನಯದಿಂ ಶ್ರೀಸಾರ್ವಮೊಲ್ ಬಂದದೇಂ
ಚೋದ್ಯಂ ಸಾರ್ದುವೊ ತಮ್ಮ ಕೀರ್ವರುಮನಾಗಳ್ ಸಪ್ತಭಿರ್ಜಾಯತೇ
ವಿದ್ಯಾಯೆಂಬುದು ತಪ್ಪದಾಯ್ತೆನೆ ತಗುಳ್ದಿಂತೀ ಮಹೀಮಂಡಲಂ ॥ ೧...

ಅಂತು ಮುನ್ನಿನ ತಮ್ಮ ವಿದ್ಯಾಧರರಾದಂದಿನ ಮಹಾವಿದ್ಯೆಗ...
ಮುಂ ನೆರಪಿದಗಣ್ಯಪುಣ್ಯಮುಂ ತನ್ನಂ ಪೊರ್ದುವಂತಾನುಂ ಮುಂ ಪ...
ನಿಧಾನಂ ಸುಕೃತಮನಂಗೆ ಕೊಳಿಸಂತಾನುಂ ಸಮನಿಸೆ ವಜ್ರಮಂ ಮಸೆದ...
ತಣ್ಪು ಮನೆದೊಳ್ ಪೊಂಪುಱಿವೋಗೆ ವಾಸುದೇವಂಬೆರಸು [ಸೌಜನ್ಯಕಂದ...
ಕುರಂ ಮಂತ್ರಗೃಹಮಂ ಪೊಕ್ಕು] ವಿಯಚ್ಚರರಾಜನಾದಂದಿನ ವಿದ...
ದೇವತೆಗಳ್ ಬಯ್ತಿಟ್ಟಂಗೆ ಪುಟ್ಟಿಕೊಳಿಪ ನಿಧಿಗಳಂತೀ ಭವದೊಳ್ ಎ...
ಬೆಸಕ್ಕೆ ನೀರ್ದೊಱಿಗಳಾಗಿ ಬಂದುನಿಂದುವನಂತವೀರ್ಯಂಗಂ ತಜ್ಜ...
ವಿದ್ಯಾದೇವತೆಗಳ್ ಮೊಗಿನ ಬಳಿಯ ಮಿಂಚಿನಂತೆ ಬೞಿವೞಿಯನೆ ಬ...
ವದುಕಾರಣದಿಂದಾನುಮಿಾತನುಂ–

ಉಪಮಾತೀತಮೆನಿಪ್ಪಗಾಣತಿಯರೊಂದಾಕಾರಮುಂ ತಾಳ್ದಿ ರೂ
ಪ ಪರಾವರ್ತನಮೆಂಬ ವಿದ್ಯೆಯಿನಭಿಪ್ರಾಯಮುಂ ವಿಯದ್ಗಾಮಿ ಭೂ
ಮಿಪನೊಳ್ ಕೊಟ್ಟುದನಿಂತುಟೆಂಬಿದನಿತನಾರಯ್ದಿನ್ನ ಬರ್ಪನ್ನಮಾ
ಜ್ಞೆ ಪುರಂ ಮಂಡಲಮೆಂಬಿವರ್ಕೆ ನಿಮುತಲ್ತೆ ಶಿಕ್ಷೆಯುಂ ರಕ್ಷೆಯುಂ ॥ ೧೫ ॥

ಪೋದೆಡೆಯೊಳಸ್ಮದೀಯ ಕುಶಲವಾರ್ತೆಗೆ ತಲ್ಲಣಿಸಲ್ವೇಡೆಂದು ತನ್ನ ಮನೋಹಿತ ಕಾರ್ಯನಿಶ್ಚಯಮನಱಿಯೆ ನುಡಿದು ಮಂತ್ರಿಗಣದ ಮಂತ್ರಮಂ ಘೂಣಿಸಿ ಬಲದೇವಂ ನಿಜಾನುಜ ಸಮೇತಂ ಗಮನೋದ್ಯುಕ್ತನಾಗಿರೆ ತ್ವದೀಯ ಪ್ರಾಜ್ಯ ಸಾಮ್ರಾಜ್ಯನೌಕರ್ಣಧಾರಾಯಮಾಣನುಂ ಮಂತ್ರಿ ಸಂದೋಹ ವಿಶ್ರುತನುಮಪ್ಪ ಬಹುಶ್ರುತನೆಂಬ ಮಂತ್ರಿಯಿಂತೆಂದಂ-

ಮೊದಲೊಳೆ ದೈವಜ್ಞರಿನಾ
ನಿದನಱಿದೆನಶೇಷ ಖಚರನಿಕರಂ ನಿನ್ನ
ಭ್ಯುದಯದಿನೞಗುಂ ಚಂದ್ರಮ
ನುದಯದಿನಳುರುವವೊಲತುಳ ತಿಮಿರಪ್ರಸರಂ ॥ ೧೬ ॥

ಜನಪತಿ ಬರವೇೞ್ಪುದೊ
ತನ ಮನಮಂ ಕೊಂಡು ದಾನಸನ್ಮಾನದಿನಿಂ
ದಿನ ದಿವಸಮೆ ಬೇಡುವುದಿರ
ದನಂತವೀರ್ಯಂಗೆ ಗಗನಚರಪತಿಸುತೆಯುಂ ॥ ೧೭ ॥

ಇದೞ ತದನಂತರಂ ಮಾ
ಣದೆ ಬಿಜಯಂಗೆಯ್ವುದಿರ್ವರುಂ ತರ್ಪ ಮನಂ
ಚದುರುಳ್ಳೊಡೊರ್ವನಿಂದೞ
ವುದು ಮಾರ್ಬಲಮಿರ್ಬರಿಂದಮಾಗದುದುಂಟೇ ॥ ೧೮ ॥

ಎಂದಪರಾಜಿತಾನಂತವೀರ್ಯರ ಮಾತನೊಡಂಬಡಿಸಿಟ್ಟು, ರಹಸ್ಯದೊಳ್ ನಿಶ್ಚಯಿಸಿದ ಬಹುಶ್ರುತನ ಮಂತ್ರನಿಶ್ಚಯಮುಮಂ, ದೂರದರ್ಶಿತ್ವಮುಮಂ, ಪ್ರತಿಭಾಗುಣಮುಮಂ, ಪ್ರಜ್ಞರುಂ ನಿರ್ಮತ್ಸರರುಂ ಗುಣಗ್ರಾಹಿಗಳುಮಪ್ಪ

ದಱಿಂ ಸಚಿವಸಮೂಹಂ ಮೆಚ್ಚಿ ಸಮಾಲೋಚನ ಗೋಚರಚರಾಚ
ಪರೋಕ್ಷಮೆ ಪ್ರತ್ಯಕ್ಷಮುಲ್ತೆಯೆಂದು ಪರಮಾನಂದದಿಂದಭಿವಂದಿಸಿ ನಿಜ
ಮಂತ್ರರಾದ ಮಂತ್ರಿಗಣಮಂ ಸನ್ಮಾನಪುರಸ್ಸರಂ ಕ್ರಮಂದಪ್ಪದೆ ವಿಸ
ಮಂತ್ರಶಾಲೆಯಂ ಪೋಱಮಟ್ಟು ಬಂದು ಸಭಾಭವನಮಂ ಪೊಕ್ಕು ಸಿ
ವಿಷ್ಟರಾರೂಢನಾಗಿ ಕೋಶಾಧ್ಯಕ್ಷನಂ ಬರಿಸಿ ಕಿವಿಯೊಳ್ಪೇೞ್ವುದುಮಾತ
ಗತಾದೇಶನಾಗಿ ಖೇಚರದೂತ ನಿವೇಶಮಂ ಪುಗೆ ದೂತನಾತಂಗಿದಿ
ನಿಜಾಸನಾರ್ಧದೊಳ್ಕುಳ್ಳಿರಿಸಿ ಕರ್ಪೂರವಾರಿ ಪರಿಮಿಶ್ರಿತ ತಾಂಬೂಲ
ಸಮೇತಂ ಸಂಭಾಷಿಸುತ್ತಮಿರೆ ತನ್ನ ತಂದ ದುಕೂಲಾಂಬರ ವಿಲೇ
ಮಾಲ್ಯಪೂರ್ವಕಂ

> ತ್ರಿಜಗದ್ಭೂಷಣಮೆಂಬುದಿ
> ದಜಾತ ಪೂರ್ವಾಂಶುಮಾಲಿ ಕಂಠಾಭರಣಂ
> ವಿಜಿತ ಶಶಿ ತಪನ ರೋಚಿ
> ರ್ವ್ರಜಂ ಪ್ರಭಾಸ್ಫುರಿತ ಗಗನದಿಗವನೀವಳಯಂ ॥ ೧೯ ॥

ಎಂದು ಪಟಳನಿಹಿತ ಪರಾರ್ಥ್ಯರತ್ನಾಭರಣಮಂ ಮುಂದಿಟ್ಟದಪ್ಪ
ಮ್ಮರಸನನ್ವಯಾಗತಂ ಕುಲಧನಮಾರ್ಗಮದೇಯುಮುಮದ್ವಿತೀಯಮುಮಿ
ನಿನ್ನ ಬರವಿಂಗಂ ಚಕ್ರವರ್ತಿಯನುರಾಗಕ್ಕಂ ತಕ್ಕುದೆಂದು ಮದೀಯ ಸ
ನಟ್ಟಿದನದಱಿಂದಂ ಪ್ರಭುಗೆ ಪ್ರೀತಿಭಂಗಂ ಮಾಡದೆ ಕೊಳ್ವುದೆಂದು
ಕರಪಲ್ಲವದಿಂ ದೂತನ ಹಸ್ತಕಿಸಲಯಕ್ಕೆ ನೀಡುವುದುಮಾತನದಂ ಕೆಯ್ಯೊ
ನೀಡುಂ ಭಾವಿಸಿ ನೋಡಿ–

> ಮನದೊಳ್ ಸಂತಸಮುಣ್ಮೆ ಪೊಣ್ಮೆ ಮೊಗದೊಳ್ ಕೈಗಣ್ಮೆ ರಾಗಂ ವಿಲೋ
> ಚನಮಾನಂದಜಲಾದ್ರ್ರಮಾಗೆ ವಿಭು ಮುನ್ನಾವಂಗಿದಂ ಕೊಟ್ಟನಾ
> ವನುದಾರಂ ಪೆಱನೀ ಧರಾಧಿಪತಿಯಿಂ ಮತ್ತೊರ್ವನಿಲ್ಲೆಂದಚೇ
> ತನಭೂತಂ ಬೆರಗಾಗಿ ತೂಗಿತಲೆಯುಂ ಚೋದ್ಯಂಬಡುತ್ತಿರ್ಪಿನಂ ॥ ೨೦

ಕೊರಳೊಳಮರ್ದಿಕ್ಕೆ ಕಂಠಾ
ಭರಣಂ ಮದಧೀಶ ಗುಣವಿಭೂಷಣವೆರ್ದೆಯೊಳ್
ಸ್ಥಿರಮಿರ್ಕೆಂದಧ್ಯಕ್ಷದ
ಕರಣಂ ಬರೆ ದೂತನೊಡನೆ ಬಂದೋಲಗದೊಳ್ ॥ ೨೧ ॥

ವಿನಯಭರದಿಂದಮೆಱಗಿದ
ನೆನೆ ನರಪತಿಗೆಱಗೆ ವಿಭು ನಿಸ್ಸೃಷ್ಟಾರ್ಥನನಾ
ಸನದೊಳ್ ಕುಳ್ಳಿರಿಮೆನೆ ದೂ
ತನುಮೊಸೆದು ಮಹಾಪ್ರಸಾದಮೆಂದಭಿಜಾತಂ ॥ ೨೨ ॥

ಕುಳ್ಳಿರ್ದು ಕಿಱಿದುಬೇಗದಿಂ ಭಕ್ತಿಭರಾನತೋತ್ತಮಾಂಗನಿಂತೆಂದು ಬಿನ್ನವಿಸಿದನಿನಿವಿರಿದು ಸತ್ಕಾರಮಂ ಪೆರ್ಗಡೆತನಂ ಬಂದನಾವನುಂ ದೇವರ ದೊರೆಯ ರಾಜಾಧಿರಾಜನೊಳ್ ಪಡೆಯನೌದಾರ್ಯಮಸಾಧಾರಣಮಿದೆಲ್ಲಂ ಚಕ್ರವರ್ತಿಯೊಳಪ್ಪ ನಿಮ್ಮ ನಿರತಿಶಯ ನಿರ್ಭರಾನುರಾಗಮೆಂತೆನೆ ತಂದೆಗೆ ಪುತ್ರಮೋಹಂ ಕಳತ್ರಸ್ನೇಹಮಂ ಪ್ರಕಟಿಸುವವೊಲೆಮ್ಮೊಳಪ್ಪ ಪರಮಾದರಮೆ ಪೇೞ್ಗುಂ. ನಿಮಗೆ ದಮಿತಾರಿಯೊಳವ್ಯವಚ್ಛಿನ್ನ ಪ್ರೀತಿಯಿಂ ದಮಿತಾರಿಗಂ ನಿಮಗಮಿನ್ನಱ ಮಾಂಸ ಪ್ರೀತಿಯುಮಂ ನೀರಕ್ಷೀರ ನ್ಯಾಯಮುಮಂ ಮಾಡಿ ತಡೆಯದೆನ್ನ ಬರ್ಪುದನುಕ್ತ ಸಿದ್ಧಮೆಂದು ಬೀೞ್ಕೊಳ್ವುದುಂ ಬಹುಶ್ರುತನಿಂತೆಂದಂ ಅಪರಾಜಿತಂಗೆ ಕಂಡಱಿಪರೊಳಂ ಆಱಿಯದರೊಳಂ ಗುಣಸ್ವೀಕಾರ ಪರಿತ್ಯಾಗದೊಳ್ಳೈಕರೂಪ್ಯಮಲ್ಲದನ್ಯೈಕರೂಪ್ಯಮಿಲ್ಲಮಾತ್ಮಸ್ವಾಮಿ ಗುಣವರ್ಣನಮೆಮ್ಮಂದಿಗರ್ಗೆ ಪ್ರತ್ಯಕ್ಷದೊಳ್ ತಕ್ಕುದಲ್ತದಱೊಳ್ ಎಲ್ಲಮೇನಸ್ಮನ್ಮಹೀಪಾಲಾನ್ವಯಕ್ಕಂ ದಮಿತಾರಿ ಮಹಾರಾಜಾಧಿರಾಜ ವಂಶಕ್ಕಮನಂತವೀರ್ಯಸಂಬಂಧಮುಂಟೆದನಱಿದು ತದೀಯ ಕುಲವೃದ್ಧರ್ ನಿಮಿರ್ಚಲುಂ ನಿರ್ವಹಿಸಲುಂ ಪೇೞ್ವುದುಭಯ ಕುಲಸಹಾಯತ್ವಮಿತರೇತರೋಪಕಾರದಿಂ ಸಂಗತದೊಳಾದುದುಮನಲ್ಲಿಯವಯೋಧಿಕರೀಗಳುಮಾಗಳುಮಱಿವರಾದೊಡಮಿನಿಸೆಡೆಯಾಗಿರ್ದ ಸಂಬಂಧಮಂ ನೀನಿರ್ದು ಪೊಸಯಿಸುವುದು. ಅನಂತವೀರ್ಯಕುಮಾರಂಗೆ ಚಕ್ರವರ್ತಿ ಸುತಾಪರೂಂಪರೆಯೊಳೊರ್ವಳನಪೂರ್ವ ಸರ್ವಾಂಗೀಣ ವಸ್ತುತ್ವಭಾಜನೆಯಂ ಕುಡಿಸುವುದುಂ ಚಕ್ರ

ಯುದ್ಧಕ್ಕೆ ದುಸ್ಸಾಧ್ಯಮಪ್ಪುದೊಂದು ಮಂಡಳಮುಳ್ಳೊಡವಿಾಯ್ಮ
ರಿಂದಮೆ ಸಾಧ್ಯಮಕ್ಕುಮದಱಿಂ ಖೇಚರರಾಜಂಗೆ ಕೃಛ್ರಾಸಾಧ್ಯಕ್ಕಮಿ
ರ್ವರೆ ಅಪಾರ ಭುಜಾಯುಮಾನರೆಂಬುದನೆ ನಂಬುವುದಿಲ್ಲಿಂದಿತ್ತಿವರ ಯ
ಕ್ಷೇಮ ಚಿಂತಾಂತರವಂ ನೀನಱಿವೆಯೆಂದು ಬಹುಶ್ರುತನುಸಿರದಿರ್ಪುದು
ದೆಲ್ಲಮನವಧಾರಿಸಿ ದೂತನಿಂತೆಂದಂ–

ಆವಂ ಕುಡುವೊಂ ಕುಡಿಸುವ
ನಾವೊಂ ಉಡೆ ಪಡೆವನಾವೊನಿರ್ವರುಮೇಕೀ
ಭಾವದಿನಿರೆ ನಿಮ್ಮೊಳಗಿನಿ
ತಾವುದು ಭೇದಕ್ಕೆ ಪಕ್ಕು ಪೆಱತೇಂ ನೃಪತೀ ‖ ೨೩ ‖

ಮೊದಲೊಳ್ ಪೂಣ್ದೊಂದು ಕಜ್ಜ ಕ್ಕಧಿಪನ ಬೆಸದಿಂ ಬಂದು
ಬೇೞ್ಕೊಂದು
ಕ್ಕಿದನೀಗಳ್ಗೊಟ್ಟಗೆಯ್ವಂದನುಚಿತಮೆನಗಿನ್ನೀ ಕುಮಾರಂಗೆ ಲಕ್ಷ್ಮೀ
ಸದನಂಗಾಕನ್ನೆಯಂ ಮುಂ ಕೊಡಿಸುವೆನದನಿಲ್ಲಿರ್ದು ಪೂಣ್ದೆಂ ನೃಪಂ ತ
ಕ್ಕುದನೇ ನಾಂ ಪೇೞ್ದೆ ಮಾರ್ಕೊಂಡಪನೆ ಶಿಶುಗಳುಂ
ಪೇೞ್ದ ಮಾರ್ಕೊಳ್ಳದಾತಂ ‖ ೨೪

ಎಂದು ಮಾರ್ಕೊಂಡನಂ ವಿಸರ್ಜಿಸಿ ಕಿಱಿದಾನುಂ ಬೇಗದಿಂ,

ಬಳದೇವ ವಾಸುದೇವರೆ
ವಿಳಾಸಿನೀ ಯುಗದ ರೂಪಮಂ ನಿಜವಿದ್ಯಾ
ಬಳದಿಂ ಕೆಯ್ಕೊಳೆ ಪರಿ ಜಿ
ರ್ಕೞಗೊಂಡುದು ನೋೞ್ಪ ನೋಟಕರ್ಕಳ ಮನಮಂ ‖ ೨೫

ತದನಂತರಮೆ ಬಹುಶ್ರುತಮಂತ್ರಿ ಮಂತ್ರರೂಪ ನಿಷ್ಪಾದಿತ ಮಾಯ
ಗಾಣತಿಯರನಮಿತಂಗೆ ತರಿಸಿಕೊಟ್ಟು ಇವರಪ್ಪೊಡೆ ವಿದ್ಯಾದೇವತಾಸ್ತ್ರಿ
ಯರ್, ಶ್ರವಣೀಯೆಯರಲ್ಲದನುಭವನೀಯೆಯರಲ್ಲರ್, ಅತ್ಯಂತ ಶುಚಿಗ
ಕಾಂತ ನಿವಾಸನಿರತೆಯರ್ ನಿರತಿಶಯ ಚರ್ಯಾನುಪೂರ್ವಕಮನುಗ್ರಾ

ಸುರಾರ್ಗಮೆಱಗುವವರಲ್ಲರೀ ಸ್ಥಿತಿಯೊಳ್ ಮದೀಯ ಧರಣೀಯವಲ್ಲಭನುಂ ಪ್ರತಿಪಾಲಿಸುವನದಱಿಂ ಯಥೋಚಿತವಿಧಿಯಿಂದಮೆ ಕೈಕೊಳ್ವುದೆಂದಪ್ಪೈಸಿ ಕಳಿಪಿ ಮುಗುಳ್ದು ಬಂದು ನಿಜ ನೃಪರಾಜ್ಯದೊಳಿರ್ದಂ. ದಮಿತಾರಿದೂತನುಂ ಗಾಯಿಕಾಚ್ಛದ್ಮರ್ ಬಲದೇವ ವಾಸುದೇವರ್ ಬರೆವರೆ–

ಅಮರಮೃದಂಗಂ ತನ್ನಿಂ
ದಮೆ ತಾನುಲಿದತ್ತು ಸುರರ ಸುರಿಯದೆ ಸುರಿಯಿ
ತ್ತಮೃತದ ಸಱಿ ಸಂತಾನಕ
ನಮೇರು ಮಂದಾರ ಪಾರಿಜಾತ ಸಮೇತಂ ॥ ೨೬ ॥

ಎಸೆದುವು ದಶದಿಸೆ ಪವನಂ
ಕಸವಂ ಕಸಗಳೆದು ಮೆಲ್ಲಮೆಲ್ಲನೆ ತೀಡಿ
ತ್ತೊಸಗೆಯುಮುತ್ಸವಮುಂ ಸಂ
ತಸಮುಂ ಸಚರಾಚರಕ್ಕೆ ಪಿರಿದಾಯ್ತಾಗಳ್ ॥ ೨೭ ॥

ಅಂತು ಬಂದು ಶಿವಮಂದಿರಪುರಮನೆಯ್ದಿ ಗಗನತಲಗಮನದಿಂ ಭುವನತಲಕ್ಕವತರಿಸಿ–

ಗಾಯಿಕೆಯರನಿರಿಸಿ ನೃಪಾ
ಸ್ಥಾಯಿಕೆಯಿಂ ಪೊಱಗೆ ದೂತನೊಳಪುಗೆ ವರ ವೇ
ತ್ರಾಯತಕರರ್ ಸಸಂಭ್ರಮ
ಮಾಯೆಡೆಯೊಳ್ ತಂದು ನಿಲಿಸಿಯೆಡೆವಿಡಿಸುವುದುಂ ॥ ೨೮ ॥

ಬಳೆವಾ ನೃಪ ತೇಜೋಮಂ
ಡಳಕ್ಕೆ ಕಣ್ಣಳ್ಕಿ ವಿನಯ ವಿನಮಿತನವನೀ
ತಳದೊಳೆ ಮೆಯ್ಯಿಕ್ಕಿ ನೊಸಲ್
ನೆಲನಂ ಮುಟ್ಟುವಿನಮೆಱಗಿ ಪೊಡಮಟ್ಟಮಿತಂ ॥ ೨೯ ॥

ಮುಕುಳಿತ ಕರಕಮಳಂ ದೌವಾರಿಕ ನಿರ್ದಿಷ್ಟಪ್ರವೇಶದಾಸನದೊಳ್ ಕುಳ್ಳಿರ್ದು ಗಗನೇಚರಾಧಿನಾಥನಾತನ ಮೊಗಮಂ ನೋಡಿ ಬೆಸಗೊಳೆ

ನಿಜಾನೀತ ಗಾಯಿಕಾ ಯುಗಾಗಮನಮನಱಯೆ ಬಿನ್ನಪಂಗೆಯ್ಯ
ತಡೆಯುದೆ ತಂದು ತೋಱನೆ ಬೇಗಂ ಪೋಗಿ ಮುಂದಿಟ್ಟು ತಂದು
ವುದುಂ, ಅಪರಾಜಿತಾನಂತವೀರ್ಯರಂಬರಚರ ಚಕ್ರವರ್ತಿಯಂ ನೋ

ಪದೆದೆಱಗದ ತಲೆಗಂ ಮುಗಿ
ಯದ ಕೆಯ್ಗಂ ಜೀಯ ದೇವ ಬೆಸನೇನೆನಗೆ
ನ್ನದ ನಾಲಗೆಗಂ ಸ್ವೈರಿಸ
ದುದಗ್ರರಿದನಾತನೊಳ್ ಪ್ರಯೋಗಿಸಿದಪರೇ ॥ ೩೦ ॥

ಅವನೀಸ್ವಾಮಿಗೆ ಚಕ್ರವರ್ತಿಗೆ ಬೞಕ್ಕಾದೂತನಿಂತೆಂದು ಬಿ
ನ್ನವಿಕುಂ ದೇವ ಭವತ್ಪ್ರಸಾದ ಸುಮನೋಮಾಲಾ ಪರೀತೋತ್ತಮಾಂ
ಗ ವಲಂ ತಾನಪರಾಜಿತಂ ಜಿತಮುದಂ ಕೊಟ್ಟಟ್ಟಿದಂ ಗಾಯಿಕಾ
ನವರತ್ನಂಗಳನಿತ್ತ ನೋಟ್ಪುದೆನೆ ಲೀಲಾಲೋಕನಂ ಖೇಚರಂ ॥ ೩೧

ಅವಲೋಕಿಪುದುಂ ನವವನ-
ಜವಲ್ಲಿಗೆಱಗುವ ಝುಷದ್ವಯಂಗಳಿವೆನೆ ಪಾ
ರ್ಥಿವನ ನಯನಂಗಳೆಱಗಿದು
ವಪಯುವದಿಂ ನಿಂದ ಗಾಯಿಕಾ ಯುವತಿಯರೊಳ್ ॥ ೩೨

ಅಂತು ನೋಡಿ ವಿಸ್ಮಯಾಕ್ರಾಂತಚಿತ್ತನತ್ಯಂತ ಹೃಷ್ಟೋ
ಸಂತುಷ್ಟಾಂತರಂಗನವರ ನವಯೌವನಕ್ಕೆ ನೆಱಮಾದ ರೂಪಾತಿಶಯ
ಅವಯವ ಶೋಭೆಗೆ ಬೆಂಬಲವಾದ ಸಮುದಾಯ ಶೋಭೆಗಂ, ಲಕ್ಷ
ಮನುರೂಪಮಾದ ವ್ಯಂಜನಕ್ಕಂ, ಹಾವಕ್ಕನುರೂಪಮಾದ ಪೆಣ್ಬಾವ
ವಿಭ್ರಮಕ್ಕಾಯತ್ತಮಾದ ವಿಲಾಸಕ್ಕಂ, ಲೀಲೆಗಾಲಯಮಾದ ಮುದ
ಯ್ತಕ್ಕಂ, ಗಾಡಿಗೆ ಪಾಡಾದ ಪಸದನಕ್ಕಂ, ತೇಜಕ್ಕೋಜಾದ ಕಾಂತಿ
ಬೆಡಂಗಿಂಗೆ ಪಾಂಗಾದ ದೇಸಿಗಂ, ಮಾಸರಿಗೆಕ್ಕಲಾವಣಮಾದ ಸೌಷ್ಠವ
ಕಣ್ಬೇಟಕ್ಕಿದಿರಾದ ದೊಡ್ಡಿಂಗಂ, ಸೌಂದರ್ಯಕ್ಕೆ ನೆಲೆಯಾದ್ಧಂದಕ್ಕಂ,
ಸಂಬಟ್ಟಾಸ್ಥಾಯಿಕಾ ಜನಕ್ಕೆ ಲಕ್ಕೆಶೆಱದಿಂ ಪೊಗಟ್ಟು ಸಾರೆ ಕರೆದೇಱ
ಲ್ವೇಟ್ಟು ಕುಳ್ಳಿರಿಸಿ ದೇವತಾತ್ಮೀಯರಲ್ಲದೆ ಮಾನವಕನ್ಯೆಯರಲ್ಲವೆಂದು

ಚ್ಛೇದಿಸಿ ತದೀಯಾಮಾನುಷ ವೃತ್ತಿಗೆ ಸಭೆಯುಂ ತಾನುಂ ಚೋದ್ಯಂಬಟ್ಟು ಮುತ್ತ್ರಮುತ್ತರೋತ್ತ್ರರ ಪ್ರತಿಪತ್ತಿವಿಧಾನಾನಂತರಮದ್ಭುತಮುಂ ಕುತೂಹಲ ಮುಮುಮಳ್ಪಳಿವಂತೊಡನೊಡನೆ ಮನದೊಳ್ ಬಳೆಯೆ ಪರಿತೋಷದ ಪರಮ ಕೋಟಿಯನೆಯ್ದಿ ತನ್ನ ದೂತಂಗೆ ಪ್ರಮೋದ ಪುಳಕಿತಾಂಗನಂಗಚಿತ್ತಂ ಗೊಟ್ಟು –

ವಿಭು ಸಂಭಾಷಿಸಿ ಗಾಯಿಕಾಯುಗಳದೊಳ್ ದೂತಂಗೆ ಜಂಭಾರಿಸ
ನ್ನಿಭನೆಂಗು ಸಖಿಯರ್ಕಳಕ್ಕೆ ಕನಕಶ್ರೀಗಿಂತಿವರ್ ಗೋಮಿನೀ
ನಿಭೆಯರ್ ಮಾಣದೆ ದೂತ ಬೇಗಮೊಡಗೊಂಡುಯ್ ಕನ್ನೆ ಮಾಡಕ್ಕೆ ಕೇ
ಳ್ದಭಿಯೋಗಂ ನಮಗಾದೊಡಲ್ಲಿ ಕಳಗೀತಾಳಾಪಮಂ ಕೇಳಮೇ ॥ ೩೩ ॥

ಎಂದು ತನ್ನ ಕೊಂಡಾಟದ ಮಗಳಲ್ಲಿಗಟ್ಟುವುದುಂ ಅಮಿತಂ ಪ್ರಮಿ ತಾಂತಃಪುರೋಚಿತ ಜನಂ ಗಾಣತಿಯರಂ ಮುಂದಿಟ್ಟು ರಾಣಿವಾಸದ ಮೊದಲ ಚೆಂಬೊನ್ನ ಕನ್ನೆವಾಡಕ್ಕೆ ವಂದು ಕನಕಶ್ರೀಗವನತೋತ್ತ್ರಮಾಂಗ ನಾಗಿ ಕಂಡಕ್ಕ ನಿಮ್ಮಮ್ಮಂ –

ಸ್ತ್ರೀರತ್ನಂ ಸ್ತ್ರೀರತ್ನದೊ
ಳೋರಂತೊಡಗೂಡಿ ಕೂರ್ತು ಸುಖಮಿರ್ಕೆಂದಂ
ಭೋರುಹನಯನೇ ನಿನಗನು
ಸಾರಿಯನಟ್ಟಿದನಪೂರ್ವ ಕನ್ಯಾದ್ವಯಮಂ ॥ ೩೪ ॥

ಸರ್ಬಕಳಾಕುಶಳೆಯರೀ
ಬರ್ಬರೆಯ ಕಿರಾತೆಯನ್ನರಾರಿವರೆ ಸಮ
ಸ್ತೋರ್ಬಿಯ ಗೀತ ರಸಾಮೃತ
ಸರ್ಬಸ್ವ ನಿಸರ್ಗಸದನರಂಬುಜವದನೇ ॥ ೩೫ ॥

ಎನೆ ಎನೆ ಮನೋನುರಾಗಮೆ
ತನುವಿಂ ಪೊಱಪೊಣ್ಮುವಂತೆ ಪುಳಕಕುಳಂ ಭೋಂ
ಕೆನೆ ನೆಗೆಯ ಖಚರನೃಪನಂ
ದನೆ ವಿನಯದಿನಾಸನಾದಿ ಪೂಜಾಸಹಿತಂ ॥ ೩೬ ॥

ಸ್ವಾಗತಸಂಭಾಷಣಪೂರ್ವಕಂ ಅಮಿತಂಗಿಂತೆಂದಳ್ -

ಅಱಿಯದ ಕಳಾಕಳಾಪಮ
ನಱಿಪುವರಿವರೆನ್ನನೆನ್ನ ಪುಣ್ಯೋದಯದಿಂ
ದೆಱವೆಸನಾಗಿಯುಮಿಂತಿದು
ಕಿಱುವೆಸನೆನಗೆಂದು ನಿಶ್ಚಯಂ ಬಿನ್ನವಿಸಿಂ ॥ ೩೭ ॥

ಎಂದು ಕನ್ನೆ ವಿನಯಪುರಸ್ಸರಮಮಿತನಂ ವಿಸರ್ಜಿಸಿ ತದ್ಗಾಯಿ
ನಾಯಿಕೆಯರ ಹೇಳಾಸ್ಥಾಯಿಕಾ ಸಮುಚಿತ ಕಥಾಕಥನ ವಿನೋದದಿನಿರ್ದ
ಮನಮನಱಿದು ನುಡಿವ ನುಡಿಗಂ, ಕಣ್ಣರಿದು ಗೊಟ್ಟಗೆಯ್ವ ಗೊಟ್ಟ
ಬಗೆಯಱಿದು ನಗುವ ನಗೆಗಂ, ಮೆಚ್ಚಱಿದೋದುವೋದಿಂಗಂ, ಇಚ್ಛೆಯಱಿ
ತೆಗಟ್ವಿ ತೆಗಟಿಕ್ಕೆಗಂ, ಪದನಱಿದು ಪತ್ತುವ ಪತ್ತುಗೆಗಂ, ಇಂಬಱಿದು ಸೆ
ಸುವ ಸೇವೆಗಂ, ನೆಱನಱಿದು ಪಾಡುವ ಪಾಟಕ್ಕಂ, ಪೊೞ್ತಱಿದು ಸಾ
ಸಾರ್ಕೆಗಂ, ಮನಂಬೆಚ್ಚು ಪತ್ತಿ ಪೊಯ್ಪಂತಾಗಿರೆ ಮತ್ತೊಂದು ದೆವಸಂ-

ವರ್ಗತ್ರಯನಿಧಿಯರಿನೃಪ
ಮಾರ್ಗಪರಂ ಸಭೆಯೊಳಿರೆ ಭಯೋತ್ಕಂಪಿತ ಸಂ
ಸರ್ಗಂ ರಾಣೀವಾಸದ
ಪೆರ್ಗಡೆ ತನ್ನಿಜ ನಿಯೋಗಮಂ ಬಿನ್ನವಿಕುಂ ॥ ೩೮ ॥

ದೇವ ! ಸಕಲಭುವನ ಕಳಾವಷ್ಟಂಭ ಸ್ತಂಭಾಯಮಾನ ಭುಜಸ್ತ
ಪರಿಪಾಲಿತ ತ್ರಿಖಂಡಾವನೀಮಂಡಲದೊಳ್ ನೆಲದೊಂದು ಸೆರಗಿನೊಳಪ್ಪೊ
ಕೇಳಲಾಗದಪವಾದಮಿಂದು ನಮ್ಮ ಕನ್ಯಾಂತಃಪುರದೊಳ್ ಕಾಣಲಾ
ದದಂ ಬಿನ್ನಪಂಗೆಯ್ವೆನ್ನ ಮೆಯ್ ಮತ್ತಹಸ್ತಿಗೆ ಪಕ್ಕಾದ ಗುಬ್ಬಿಯ ಮೆಯ
ತಗುರ್ಬಿಸಿದಪ್ಪುದು. ಅಂತುಮೆನ್ನ ಕರ್ಮಗತಿಯಿಂ ಬಿನ್ನಪಂ ಗೆಯ್ಯಲ್ವೇಟಿ
ಅಪರಾಜಿತಂ ತಾನೀಸೂಱಿನ ಬಂದ ಗಾಯಿಕಾ ರೂಪಮಂ ಕಯ್ಕೊಂಡು ತ
ತಮ್ಮನನಂತವೀರ್ಯಂಗೆಂದೊಡಂಬಡಿಸಿ ಕನಕಶ್ರೀಯಂ ಗಗನಗಾಮಿ
ವಿದ್ಯೆಯಿನೊಯ್ದು ಗಗನತಲದೊಳ್ -

ವಿನುತ ವಿಮಾನಮಂ ಸುರವಿಮಾನಮನಾಗಳುಮೇಱಿವೇೞ್ದು ತ
ನ್ನನುಜನುಮಂ ಭವತ್ಸುತೆಯುಮಂ ಪೆಱಗಿಕ್ಕಿ ತಗುಳ್ದು ತಾಗಿದೆ
ಮ್ಮನಿಬರುಮಂ ವಯೋಧಿಕರಿರಾಯುಧ ಹೀನರಿರೆಂದು ನಕ್ಕು ಕೊ
ಲ್ಲನೆ ಕರುಣಾರಸಾರ್ದ್ರ ಮನನಂತಪರಾಜಿತನಾರ್ಯಪೂಜಿತಂ || ೬೯ ||

ಏಱುಮಿದಂ ದಮಿತಾರಿಗೆ
ಪೇೞುಂ ಹರಿ ಕರಿಗೆ ಮುಳಿಗುಮಲ್ಲದೆ ನರಿಗಂ
ಕೋೞಗಮೇಂ ಮುಳಿಗುಮೆ ಬರ
ವೇೞುಂ ನಿಜಸೈನ್ಯ ಸಹಿತಮಹಿತನನೀಗಳ್ || ೪೦ ||

ಆಜಿಗರಕ್ತರನಧಿಕ ವ
ಯೋಜಿತರಿವರಂ ಪುರಾಣ ಪುರುಷರನಯ್ಯೋ!
ಪೂಜಿಸದಪಕೃಪೆಯಿಂದಪ
ರಾಜಿತನುಱದಿಱುಗುಮೆಂಬಿದಂ ನಂಬಿದಿರೇ || ೪೧ ||

ಗಗನೇಚರನೊಳ್ ಕಾದುವ
ಬಗೆ ಕೈಮಿಗೆ ತಂದನೆಮ್ಮ ತಮ್ಮಂ ಪೆಱತೇಂ
ಮೃಗನಯನೆಯನನಿಮಿತ್ತಂ
ಮೃಗಾಳಿ ಪೋರದು ನೃಪಾಳಿ ಪೋರ್ಗುಮೆ ತಮ್ಮೊಳ್ || ೪೨ ||

ಆದಱಿಂದಂ ವಿಜಯಾರ್ಧಪರ್ವತ ತಟೈಕೋದ್ದೇಶದಿಂದಿತ್ತಲೊ
ರ್ವದಮಂ ದಾಂಟದೆನಪ್ಪೊಡಂ ಭವದಧೀಶಂಗಂಜಿದೆಂ ಪೋಗಿ ತ
ರ್ಪುದು ನೀನಾತನನೆಂದಸೆಂಬ ನುಡಿಯುಂ ಕಂಪೋತ್ಕರಂ ಭೀತಿ ಗ
ದ್ಗದಕಂಠಂ ತುದಿಗೆಯ್ದೆ ಬಿನ್ನವಿಸಿದಂ ವಾಕ್ಕೋವಿದಂ ಸೌವಿದಂ || ೪೩ ||

ಆತನ ನುಡಿಯೆಂಬ ಲಯೋ
ದ್ಭೂತಾನಿಲನೆಸಗೆ ಮಸಗಿ ದಮಿತಾರಿ ಮನೋ
ಭೂತ ಪ್ರಭೂತ ಕೋಪೋ
ದ್ಭೂತಾಗ್ನಿಶಿಖಾಳಿ ಸಭೆಗೆ ತಲೆದೋಱುವುದುಂ || ೪೪ ||

ಅವಳಂಬಿತ ಕುಲೀನ ಧೀರತಾಜಲದಿನೊಯ್ಯನೊಯ್ಯನೆ
ದ್ರೇಕಮಂ ಪದವಡಿಸಿ, ಮುಳಿವೆಡೆಯೊಳಂ ಮುಳಿಸಂ ಮೊಗಕ್ಕೆ
ಗಂಭೀರ ಸಾರತರ ಕಟಾಕ್ಷ ವಿಕ್ಷೇಪಣಂಗಳಿಂದಂ ಪ್ರಸಿದ್ಧರುಂ ವೀರಾಗ್ರ
ರುಮಪ್ಪ ಸಭಾಸದರ ಮೊಗಮಂ ನೋಡುತ್ತುಮಿನಿವಿಱಿದು ಪರಾ
ಪ್ರಾಕೃತಪುರುಷಂಗಂಕಾಪುರುಷಂಗಂ ಪೊತ್ತುನಿಲ್ವುದರಿದು, ಇನ್ನಿ
ತಕ್ಕುದಂ ತಕ್ಕಂದದೊಳ್ ಪೇೞ[ಮೆನೆ] ಆ ಪ್ರಸ್ತಾವದೊಳ್ ಸು
ಯೆಂಬ ಮಂತ್ರಿ ಮಹತ್ತರನಿಂತೆಂದನಖಿಳ ಖಚರಪತಿ ಕಿರೀಟ
ವಿಟಂಕಚೂಡಾಮಣಿ ಮರೀಚಿಮಂಜರೀರಂಜಿತ ಚರಣನಳಿನನ್ನೈ ನೀಂ
ಭೂಚರಕೀ(ರೀ)ಟಯುಗಳಕ್ಕೆ ಮುಳಿವುದುಂ ನೊಟವಿಂಗೆ ಕುಪ್ಪೆವರಮೆ
ತಕ್ಕುಮಾದೊಡಂ ಮತ್ಸರ ಮಹೋರಗಕ್ಕಮಾಗ್ರಹ ಮಹಾಗ್ರಹ
ಕೋಪಮದಾನೇಕ ಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂ
ಪುರುಷಾರ್ಥಮಲ್ತು ಸಕಳ ಕ್ಷಮಾಪತಿತ್ವಮೆ ಸಕಳ ಕ್ಷಮಾ ಪತಿತ್ವ
ಮಾಡುಗುಂ [ಅದಱಂ ಸಂಪ್ರಣಿಧಾನನಂ ಪ್ರಣಿಧಿಯಂ ನೀಂ
ಮುನ್ನಟ್ಟ ನೋಟ್ಪುದು] ಎಂದರ್ಥಶಾಸ್ತ್ರಾಭಿಪ್ರಾಯಪುರಸ್ಸರಂ ನು
ಪದವಡಿಸಿದ ಸುಮತಿಯ ವಚನಕ್ಕೆ ಪದವಟ್ಟು ದಮಿತಾರಿ ಪ್ರೀತಿವ
ನೆಂಬ ದೂತ ಮುಖ್ಯನನಟ್ಟದೊಡಾತಂ ತನ್ನಾಳ್ದನ

ಕರಗಿ

ನೆಱೆದಾಯುಷ್ಯಮೆ ಮಿಟ್ತುವ
ನಱಿಸುವ ತೆಱದಿಂದಮವರ ಪೋಬೞಯನೆ ಬಂ
ದಱಿಸಿ ನಭಸ್ಥಳದೊದವಿದ
ತಱಿಂಬು ಕಳನಾಗಿ ಕಾದಲೆಂದಿರ್ದವರಂ ॥ ೪೫ ॥

ವೈಹಾಯಸ ಯುದ್ಧಸನ್ನದ್ಧರನಪರಾಜಿತಾನಂತವೀರ್ಯರಂ ಕಂ
ಪೊಡವಟ್ಟು ಅಪರಾಜಿತನನಿತ್ತ ಮನವಿತ್ತು ಕೇಳ್ವುದೆಂದಿಂತೆಂದಂ–

ಉಭಯಕುಲವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್
ಪ್ರಭುಗಳಧಿಕ ಪುಣ್ಯರ್ ಮುನ್ನೆ ನಿಮ್ಮಜ್ಜ ಪಜ್ಜರ್
ಶುಭಚರಿತ ತದೀಯಾನೂನ ವಂಶಾಧಿಪತ್ಯ
ಪ್ರಭವನೆಯದಱಿಂದೀ ದುರ್ಯಶಕ್ಕೆಂತು ನೋಂತೈ ॥ ೪೬ ॥

ನಿನಗಂ ದೊರೆಕೊಂಡುದು ತ
ಮ್ಮನಿಂದವಿಾ ಕಷ್ಟ ಚೇಷ್ಟಿತಂ ಸಂಸರ್ಗಂ
ಜನಿಯಿಸುಗುಂ ಗುಣದೋಷೋ
ಪನತತ್ವಮನೆಲ್ಲಿಯುಂ ಮಹೀಮಂಡಳದೊಳ್ ॥ ೪೭ ॥

ಆಗದ ನುಡಿಯನಿದಂ ಕೇ
ಳ್ದಾಗಡೆ ದಮಿತಾರಿ ನಾಣ್ಚಿ ಸಭೆಯೊಳ್ ತಲೆಯಂ
ಬಾಗಿ ಮದೀಯ ಕುಲಕ್ಕಿನಿ
ತಾಗಳವಳ್ ಕೆಟ್ಟಳೆನಗೆ ಪುಟ್ಟಿದಳಲ್ಲಳ್ ॥ ೪೮ ॥

ಎಂದು ಸ್ವೈರಿಸದಳವಲ್ಲದಳುರ್ದು ಕುಳಾಪವಾದನದ ನುಡಿಯೆಯ್ತರೆ ಕರಗಿ ಕೊರಗಿದಳ್ಳೈರ್ದೆಯನೆಂತಾನುಮೆಂತಾನುಮಾಱಿಸಿ

ದಂಡಿತ ವಿರೋಧಿಕುಳನೇ
ಗೊಂಡೇಂ ಗಳ ಗೆಯ್ವುದರಿದು ಕುಡೆ ಕುಡುಗೂಸಂ
ಕೊಂಡೊಯ್ವುದುಚಿತವಿಾಯದೆ
ಕೊಂಡೊಯ್ವುದನುಚಿತಮೆಂಬ ನುಡಿಯಂ ನುಡಿದಂ ॥ ೪೯ ॥

ಆತನನಾರಾಧಿಸಿ ನೃಪ
ನೀತಿವಿದರ್ ಖೇಚರಾವನೀಚರರಾತ್ಮ
ಖ್ಯಾತಿಶ್ರೀಯಂ ಕಾದಭಿ
ಜಾತ ನೃಪಾನ್ವಯರನೆನಿಬರಂ ಪೆಸರ್ಗೊಳ್ವೆಂ ॥ ೫೦ ॥

ಗುರುವಲ್ಲನೆ ಪತಿ ಪರಮೇ
ಶ್ವರನಾತಂ ತ್ವತ್ಪ್ರಮಾದಮಂ ಸೈರಿಸಿದೊಂ
ನಿರುಪಮಮಿದೆಂದು ಶಂಕಿಸ
ದಿರು ಮುಟ್ಟದು ಗುಣಿಗೆ ದೋಷಿಗಕ್ಕುಂ ದೋಷಂ ॥ ೫೧ ॥

ಬಿಡು ಕನ್ಯಾರತ್ನಮನೀ
ಗಡೆ ಚಕ್ರಿ ಪದದ್ವಯಕ್ಕೆ ತಡೆದಿರದೆಱಗೇ
ಪಡೆಮಾತೊ ಬಂದು ಕಾಣ್ ಕಂ
ಡೊಡೆ ಪಥ್ಯಮುಪಥ್ಯಮಿಾ ಕನಿಷ್ಠಾಚರಣಂ ॥ ೫೨ ॥

ಎಂದು ಸಾಮಪೂರ್ವಕಮಕ್ರಮಣಾವಸಾನಾನಂದಿತ ಗಂಭೀರೋದಾರ
ಭಿನ್ನನಯಸಂತತಿ ಸಮನ್ವಿತಮನಱಿಯೆ ತಿಳಿಯೆ ನೆಱಿಯೆ ನುಡಿದು
ವರ್ಧನಂ ಮಾಣ್ಬುದುಂ–

ನಾಲ್ಕುಮುಪಾಯದ ನುಡಿಗಳ
ಸಿಲ್ಕಾಸಿಲ್ಕಿಗಳನೆಯ್ದೆ ನುಡಿದೈಕ್ರಮದಿಂ
ಬಲ್ಕಣಿಯ್ಕೆ ನಯುದೊಳ್ನುಡಿ
ಯೆಲ್ಕೊಂಕಂ ಕಲ್ಪುದಲ್ತೆ ನಿನ್ನೊಂದಿಗರೊಳ್ ॥ ೫೩ ॥

ಎನ್ನುದ್ಯೋಗಂ ಪ್ರಕಟಮಱಿಯಲ್ಬರ್ಕುಮಾವಂಗಮೆಂತುಂ
ಮುನ್ನಂ ಪೇಳ್ದಿಟ್ಟಿನೆ ನೆಱಿಯೆ ಪೇಟಿವೇಟಿ ನೀಂ ಸಾವಿಥಂ ಕೇಳ್
ನಿನ್ನೀ ವಾಚಾಳತೆಯ ಬಲದಿಂದಂತರಾಳಂಗಳಂ ಸಂ
ಭಿನ್ನಾಳಾಪಂಗಳನಲಸದೇ ಕಾರಣಕ್ಕೆತ್ತಿಕೊಂಡಯ್ ॥ ೫೪ ॥

ನಿನ್ನ ಬಂದ ಬರವಿಂಗೆಮ್ಮ ಮನಂ ಮೊದಲಾಗಿ ನಾಣ್ಚಿದ
ಮೊಲಕ್ಕೊಡ್ಡಿದ ಬಲೆಯೊಳ್ ಮೃಗರಾಜಂ ತೊಡರ್ಗುಮೆ? ನಿಮ್ಮ
ಸುಕುಮಾರಚಕ್ರವರ್ತಿ, ನಡೆದೊನಿಲ್ಲಿವರಂ ಬರಲಾಱನದಱಿಂದಮಾ
ರ್ದನಲ್ಲಿವರಮಾನೆ ಪೋಗಿ ಕಾದುವೆನೆಂದು ತಱಿಸಂದು ಕಟ್ಟಾಳಾಗಿ
ಬರ್ಪಾಗಳೆ ಬರಲೆಂದಿರ್ದನೆನ್ನ ತಮ್ಮನಸತ್ಯಾಗ್ರಹದಿಂದಂ ಮಾಣಿಸಿದೆ

ನಿತಾನುಂ ತೆಱದಿ ಸೌಜನ್ಯಕಂದಾಂಕುರಂ ಗರ್ಜಿಸಿ ದೂತನಂ ವಿಸರ್ಜಿಸಿ ದೊಡಾತನುಂ ಬಂದನಿತುಮಂ ದಮಿತಾರಿಗೆ ಸಭಾಮಧ್ಯದೊಳಱಿಪುವುದುಂ-

ತದನಂತರಮರಿಯುದ್ಯೋ
ಗದ ಮಾತಂ ಕೇಳ್ದು ನಕ್ಕು ದಮಿತಾರಿ ಸಭಾ
ಸದರಂ ಪೋಗಲ್ವೇೞ್ದು ದ್ದರ
ದುದಾತ್ತಮತಿ ಕರೆದು ಬೆಸಸೆ ಸೇನಾಧಿಪನಂ ॥ ೫೫ ॥

ಅಂಬುಧಿವೇಳಾ ವಿಳಾಸೋಪಹಾಸಿಯಾಗಿ ನೆರೆದರಮನೆಯ ಬಾಗಿಲ್ಗೆ ಬಂದು ಗಜ ತುರಗ ರಥ ಪದಾತಿ ಪ್ರಕಾರದಿನತಿ ಕುಪಿತಾಂತಕಾಟೋಪಮಂ ಕೆಯ್ಕೊಂಡುಸಿಲೆ [ಅಂತು] ನಿಂದ ಸೈನಿಕಪ್ರಧಾನರೊಳ್

ಕವಚ ನವರತ್ನದೀಧಿತಿ
ನಿವಹವಾರುಣ ಧವಳ ಕಿರಣಮಪರಾಜಿತನು
ತ್ತ್ರವಳನಿಸೆ ದೂರ ಪಾತೇ
ಷು ವೇಧದೊಳ್ ಪುಣ್ಣ ಸರಲ ಪುದಿವಂ ಪೋಲ್ಗುಂ ॥ ೫೬ ॥

ಅಂತು ನೆಱೆದ ಚಾತುರ್ದಂತ ಬಲಜಲಧರ ರಭಸಂ ಪ್ರಭಿನ್ನ ಬ್ರಹ್ಮಾಂಡಾಖಂಡ ಶಂಕೆಯಂ ಪುಟ್ಟಿಸೆ ತೊಟ್ಟನೆ ಕೊಳೆ ತದ್ವಿಯಚ್ಚರ ಸೇನಾ ವ್ಯಾಜೃಂಭಣಮಾ ಪ್ರಸ್ತಾವದೊಳ್ ವೈಹಾಯಸ ಭೌಮ ದಿಗ್ಭವ ಸೈನ್ಯಜ ಗೃಹೋದ್ಭೂತಂಗಳಯ್ದು ತೆಱದುತ್ಪಾತಂಗಳೊಡನೊಡನೆ ನೆಗೆದುವಾಗಳ್-

ಪಡೆವಳ್ಳಂಗೆ ರಥಾಂಗಹೇತಿ ನಡೆಯಲ್ವೇೞ್ ಬೇಗಮಿ ನಿನ್ನ ಪೆ
ರ್ವಡೆಯಂ ನೀನೆನೆ ನಮ್ರಮೂರ್ತಿ ಬೆಸವೆತ್ತಾ ಬೀರವಟ್ಟಕ್ಕೆ ಮೆ
ಟ್ಟಿಡೆ ಬೀರಾಂಗನೆ ಸೇಸೆಗೊಂಡ ಪಡೆಯಂ ಕೈಸನ್ನೆಗೆಯ್ದುದ್ಧತಂ
ನಡೆಯಲ್ವೇೞ್ದೊಡೆ ಮೇರೆದಪ್ಪಿದ ಲಯಾಂತ್ಯೈಕಾರ್ಣವಾಕಾರದಿಂ ॥ ೫೭ ॥

ಪೆರ್ವಡೆ ನಡೆವುದುಂ, ದಮಿತಾರಿ ರಾಜಮಂದಿರದಿಂ ಪೊಱಮಟ್ಟು ರಾಜ ಮಾರ್ಗದೊಳಗನೆ ಪೋಗಿ ಪೊಱವೊಟಲೊಳೊಡ್ಡಣಮನೊಡ್ಡವೇೞ್ವುದುಂ ಸೇನಾನಾಯಕಂ-

ಶೂರಪದಾತಿ ಮುಂದೆ ಘಟೆ ಸಿಂದೆ ರಥಂ ನಡುವಿರ್ಕೆಲಂಗಳೊಳ್
ಸಾರ ಹಯೋತ್ಕರಂ ನೆರೆದು ನಿಲ್ವಿನಮೊಡ್ಡಿ ನಿಜೇಶನಾಜ್ಞೆಯಂ
ಪಾರುತುಮಿರ್ದನಿತ್ತಲಪರಾಜಿತನೂರ್ಜಿತ ಕೋಪರಾಜಿತಂ
ದೂರದೆ ನಿಂದು ನೋಡಿ ರಿಪುಸೇನೆಯನಪ್ರಮಿತಾರಿ ಸೇನೆಯಂ ॥ ೫೮ ॥

ಆಗ ರಾಜಾಕೃತಿ ವಿಭ್ರಮಾನುಕರಣೋದಗ್ರಂಗಳಿಂ ನೋಡಿ ಮು
ಯ್ವುಗಳಂ ಕಲ್ತ ಶರಾಸನಂ ಸಫಲಮಿಂದಾಯ್ತೆಂಬ ನಚ್ಚಿಂ ಮುಗು
ಳ್ನಗೆ ನಕ್ಕಂಕದ ವೀರಲಕ್ಷ್ಮಿ ಪೆಱಗಿಲ್ಲೆಂಬನ್ನೆಗಂ ತನ್ನನಾ
ವಗಮೊಲ್ದಿರ್ಪಿನಮೇರ್ವೆಸಕ್ಕೆಳಸಿದಂ ಸೌಜನ್ಯ ಕಂದಾಂಕುರಂ ॥ ೫೯ ॥

## ೩. ತಮ್ಮುಮ್ಮತಿರ್ವರುಮುಗುರ್ವುರ್ವೇಣ್ಣನಂ ಕಾದಿದರ್

ಶ್ರೀರಮಣಂ ಜಿನಚಂದ್ರನು
ದಾರಂ ಖೇಚರ ಬಲಾಬ್ಧಿಯಂ ತವೆ ಕಣ್ಣೊಳ್
ಪೀರಲ್ ಬಗೆವವೊಲೌರ್ವಾ
ಕಾರೇಕ್ಷಣನೀಕ್ಷಿಸುತ್ತುಮಿರ್ದವಯುವದಿಂ ॥ ೧ ॥

ತಮ್ಮನನಾಗಳಂಬರಚರೇಶ್ವರ ಕನ್ನೆಗೆ ಕಾಪುವೇಟಿ ತ
ನ್ಮಮ್ಮನದೊಳ್ ಬಿಗುರ್ತು ನಗೆ ಕೆಯ್ಮಿಗಲೀಬೆಸಕಣ್ಣ ನೀನೆಯಾಂ
ತಮ್ಮನೆ ನಾಳಿನಾಳ್ವೆಯೆನಗಪ್ಪೊಡೆ ನೀನೆನಗತ್ತಲಗ್ಗಮೆಂ
ದಾಮ್ಮಗುಟ್ಟಿಂದು ನಿಮ್ಮಡಿಗೆ ಸೂಟಿದಱಿಂ ಬೆಸಸೆನ್ನನನ್ನೆಗಂ ॥ ೨ ॥

ಎನೆ ಜಿನಚಂದ್ರಂ ಮತ್ತಂ
ತೆನವೇಡೆನ್ನಾಣೆ ಮಾಣೆಯಪ್ಪೊಡೆ ನೀನೆಂ
ದನಿತಾನುಂ ಸೂಟಿಯ್ ಸೂರುಳಿ
ಸಿ ನಿರ್ಭಯಂ ಕೊಂಡು ಬಿಲ್ಲನಪ್ರತಿಮಲ್ಲಂ ॥ ೩ ॥

ನಿಱಿಸಿ ನೀವಿ ಜೇವೊಡೆಯೆ ವೈರಿಗಜಂಗಳಜಂಗಳಂತೆ ಕಾ
ಯ್ಪಾಱಿದುವಾ ಖಗೇಶ್ವರನ ಕಟ್ಟ ಕಟಲ್ದುದು ಖೇಚರರ್ ಮನಂ
ಬೀಱಿದರೊರ್ವನೆಂದಗಿದ ಖೇಚರ ಕನ್ನೆಯ ಮೋನಸನ್ನೆಯುಂ
ಪಾಱಿದು ದೇವದೊಳ್ ಪುದಿದ ತಮ್ಮನ ಚಿತ್ತದೊಳಾಯ್ತು ಸಂತಸಂ ॥ ೪ ॥

ಇಡಿವಾಳ್ವಿರ್ಚುವ ನೇರ್ವ ಸೀಳ್ವಿರಿವ ನೇರ್ಗೊಲ್ವೋಪ ಪೋಟ್ಪಿಲ್ಪಿನೊಳ್
ನಡುವುದ್ದಂ ಬಿರಿವಂಬಿನೊಳ್ ಕಿಡೆ ಮರುಳ್ವಳ್ಳಾಡುವಳ್ಳಾಡುವ
ಳ್ಪಡಗಪ್ಪೊಡ್ಡಟಿವಟ್ಗಿ ತಟ್ಗುವಟಿವುರ್ಕಾಱಿರ್ಪ ಕೋದಿರ್ಪ ಮಾ
ರ್ಪಡೆ ಗೆಲ್ಲಂಗುಡೆ ತಮ್ಮುಮ್ಮತಿರ್ವರುಮುಗುರ್ವುರ್ವೇಣ್ಣನಂ ಕಾದಿದರ್ ॥ ೫ ॥

ಅಂತು ಕಾದಿ ನಾರಾಚದಂತಸಿಯನುಂ ಕೂರಿದನುಮಾಗಿ ದವಿ
ತನ್ನ ಪರಾಕ್ರಮಮೊಂದಱಿಂದಮೆ ಮೆಯ್ವೊಣರ್ಚಿ ಗೆಲ್ವ ತನ್ನ
ಭೋಗದ ಯಶೋರಾಶಿಯುಮಂ, ಪಸುಗೆವೋಗದ ಶೌರ್ಯಮುಮಂ,
ವೋಗದೇೞುಮಂ, ಪ್ರೊರೆವೋಗದ ಕಟ್ಟಾಯಮುಮಂ, ಓರೆವೋಗದ
ಮುಮಂ, ಮುಕ್ಕುವೋಗದಳ್ಕುರ್ಕಮಂ ನೋಟಕರಪ್ಪಿನಮಪ್ಪವರಿಂ ಪೊ
ಸುವೆನೆಂದು ತಱಿಸಂದು ತಮ್ಮುತಿರ್ವರುಮನಿಕ್ಕುವ ತಕ್ಕು ಕೈಮಿಕ್ಕು ನಿ

ನೊಂದಱಿದು ಕೆಟ್ಟ ಪಡೆಯಂ
ಪಿಂದಿಕ್ಕಿ ಜಸಂಬೊಲೆಸೆವ ಸಿತಕೇತನಮಂ
ಮುಂದಿಟ್ಟು ಶೂರ ಸಾರಥಿ
ಯಿಂದಂ ಶ್ವೇತಾಶ್ವತತಿಯಿನೆಸೆಯೆ ವರೂಥಂ ॥ ೭ ॥

ನೆರೆದಾಡುವಟ್ಟೆ ಬೆರ್ಚಿಸೆ
ಹರಿವ್ರಜಂ ತೊಲಗಿ ತೊಲಗಿಬರೆ ಗೋ ಮೂತ್ರಂ
ಬರಿಯೆ ರಥಂ ಮೆಯ್ಯಱಿವಂ
ತಿರೆ ರಥಮಂ ಪುದಿದು ಕುದಿದು ಬರೆ ಕೆಲರೆ ಭಟರ್ ॥ ೮ ॥

ಕರಮಱಿಯೆ ನೊಂದ ಭಟರೊಡ
ವರೆ ದಯೆಯಿಂದವರನಾಗಳಿರಿಮೆಂದಾ
ತುರ ಘರ್ಮವ್ಯಾಜದಿನೋ
ಸರಿಸಿದ ಪೆರೆಸುಲಿದ ಪಾವಿನಂತಾಕೃತಿಯಂ ॥ ೯ ॥

ಅಱಿಕೆಯ ತೇರ್ ಪಱಿಯಿಗೆ ಪೆ
ರ್ಬಱಿಚಕ್ರಂ ರಾಜ್ಯಚಿಹ್ನಮೆಂಬಿವಱಿಂ ಗೆಂ
ಟಱೊಳೆ ಬರವಂ ವಿರೋಧಿಗ
ಳಱಿಯೆ ಜಯೋದ್ಯೋಗ ಖೇಚರೇಂದ್ರಂ ಬಂದಂ ॥ ೧೦ ॥

ಬಂದಿರದವರ್ಗಿದಿರಂ ನಡೆ
ತಂದೀತಂ ತಮ್ಮನಾತನಣ್ಣಂ ತಾಂ ನೋ
ಡೆಂದು ನಿಜಸೂತನಱಿಪೆ ಮು
ಕುಂದನ ಪರ್ಪರಿಕೆ ಮುನಿಸನೊದವಿಸೆ ಮನದೊಳ್ ॥ ೧೧ ॥

ಪೋಬಿಮುಯ್ವಂ ತಾಗೆ ತಿಣ್ಣಂ ತೆಗೆನೆಜಿ‌ದಿಸೆ ಬಿಲ್ಗಲ್ಪಿ ತನ್ನೇಜಿನೊಳ್ ಕ
ಣ್ದೆ ಜಿದತ್ತೆಂಬಂತುಮಂಬಿಂ ಸನೆದುದೆ ನಭವೆಂಬಂತುಮಾ ಮಿಟ್ಟಿ ಪೋ ಬಾ
ಯ್ದೆ ಜಿದತ್ತೆಂಬಂತುವೊಂದೊಂದೆಸೆವ ನಿಯತವೆಂಬಂತುವಿಾಲೋಕವಮಂಬಿಂ
ಸೂಜಿಗಲ್ತೆಂಬಂತುಮಾಗಳ್ ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ
॥ ೧೨ ॥

ದಿಂಕಿಂ ತೆಗೆನೆಜಿದಿಸೆ ಚಾ
ಪಂ ಕುಟಿಲತೆಗೆಟ್ಟು ಚಕ್ರವಳಯದ ಬಳಸಂ
ಮಾಂಕರಿಸಿ ಬಿಲ್ಲಕೊಪ್ಪು ಕೊ
ಡಂಕೆಯ ಕೊಪ್ಪಿನವೊಲಮರೆ ಖೇಚರಪತಿಯಾ ॥ ೧೩ ॥

ಅಂತು ಮುಂಚಿದ ಕಾರ ಕಾರ್ಮುಗಿಲಂತೆ ಶರವರ್ಷಮಯಮಾಗೆ ದೆಸೆ
ಯೆಲ್ಲಮಂ ಪರ್ಬಿಪರ್ಪ ದಮಿತಾರಿಯೆಟ್ಟಿರಮಂ ಕಂಡು ಜಿನಚಂದ್ರಂ ತಮ್ಮನಂ
ಪೇಟ್ದಿಲ್ಲಣಿಗೆಗಾಳಗಂಗಾದುತ್ತಿರ್ಪುದುಮನಂತವೀರ್ಯಂ ಜನ್ಮಾಂತರವೈರಂ
ಕಾರಣಮಾಗೆ ವಿರೋಧಿಯನಾಂತು—

ನವದಾವಾಗ್ನಿ ಶಿಖಾಳಿಗಳ್ ಭವನಮಂ ತಟ್ಟಿಳ್ಪಿಕೊಳ್ವಂತೆ ಕೊ
ಳ್ವವನಾ ಖೇಚರರಾಜನಸ್ತ್ರತತಿಯಂ ತನ್ನಸ್ತ್ರಜಾಳಂಗಳಿಂ
ತವೆ ನೇರ್ದಾರ್ದನನಂತವೀರ್ಯನಧಿಕಪ್ರಾಯಕ್ಕೆ ಸೀರಾಸ್ತ್ರನ
ಸ್ತ್ರವಿಶೇಷಕ್ಕೆ ಸಮಾನಮಿರ್ವರುಮೆನುತ್ತಿರ್ಪನ್ನಮಿಂದ್ರಾದಿಗಳ್ ॥ ೧೪ ॥

ಸುರರ ಪಡೆ ನೆರವಿ ನೆರೆದಂ
ಬರದೊಳ್ ನಡೆ ನೋಡೆ ವರರನಜಿಸಲ್ಕೆ ಸೊಯಂ
ಬರದ ಕುಡುಗೂಸಿನಂತಿ
ರ್ವರುಮಂ ಜಯಲಕ್ಷ್ಮಿ ಬಯಸಿ ನೋಡಿದಳಾಗಳ್ ॥ ೧೫ ॥

ಬಯಸಿಯುಮೇಂ ಖಚರನನತಿ
ವಯಸಂ ಸುಕುಮಾರಕಂ ಕುಮಾರಕನೆಂದಾ
ಜಯವಧುಗನಂತವೀರ್ಯಂ
ಪ್ರಿಯನಾದೊಂ ಖೇಚರೇಂದ್ರನಪ್ರಿಯನಾದೊಂ ॥ ೧೬ ॥

[ಆಗಳ್] ದಮಿತಾರಿ ನಿರ್ಗುಣನಪ್ಪಸಹಾಯನಂ ಬಿಸುಟ್ಟಿಂತಿ
ಬಿಸುಟು ಬಲದ ಕೆಲದೊಳ್ ಮಿಱುಮಿಱುಮಿಱುಗಿ ತನ್ನ ಪಡೆದೊಂಗಂ
ಪೆಸರಿಂದಮೆ ದೊಡ್ಡಿವೆಸರಾಗಿ ನೆಗಟ್ದ ಚಕ್ರಮಂ ನೋಡೆ ನಿರಾಯುಧ
ನೆಂದನಂತವೀರ್ಯನಂ ದಮಿತಾರಿಯಿಂತೆಂದ—

ಪುಗದಿರು ಪೋಗು ಪೋಗು ನಡೆಗೊಳ್ ನಡೆಗೊಳ್ ಭಯಮಿಾ ವಿಮ
ಪುಗು ಪುಗು ನಿಂದು ಸಾಯದಿರು ಸಾಯದಿರುಗ್ರ ರಣಾಗ್ರ ಕೇಳಿ ಲೀ
ಲೆಗೆ ದೊರೆಯಲ್ಲಿಯಲ್ಲಿಗಪರಾಜಿತನಣ್ಣನೆಯೆಂದು ಕೀರ್ತಿ ಲ
ಕ್ಷ್ಮಿಗೆ ಪದೆದಿರ್ಪಯ್ಯೆ ನಿನಗೆ ನಾಣ್ಚರೊ ನೆಟ್ಟನೆ ನಾಡ ಮಾನಸರ್ ॥

ಅಸ್ಮತ್ಕೋಪಾಗ್ನಿಗೆ ನವ
ಭಸ್ಮತೆಗಂ ಶಲಭವೃತ್ತಿಗಂ ಪಡೆದೆಯಿದೇಂ
ವಿಸ್ಮಯಮೊ ನಿನಗೆ ಮುನಿಯೆನ
ಪಸ್ಮಾರ ಗ್ರಹಕ್ಕೆ ಮಂತ್ರಿ ಮುನಿಗುಮೆ ಮುನಿಯಂ ॥ ೧೯

ಎಂದು ತಿರಸ್ಕರಿಸಿ ನುಡಿದ ಚಕ್ರವರ್ತಿಯ ನುಡಿಗೆ ಮುನಿದತಿ
ಯಪ್ಪಪಾಪೇಭಕಂಠೀರವಾನುಜನವ್ಯಭಿಚಾರಿ ಮಿತ್ರಾನುಕಾರಿಯಪ್ಪ ಬಿಲ್ಲ
ಬಿಸುಟ್ಟನ್ನೆಗಮಾಂ ಬಿಲ್ಲಾಳಿಗಮೆಂದೇ ಬಗೆದೆಂ ಬಾಯ್ಗಾಳಗಮನೀಗಳಱ

ಎನಿತು ಮದವಾರಣಂ ಕ್ರೋ
ಧಿನಿ ಪೊಕ್ಕುಂ ಸಿಂಹಪೋತಮಂ ಗೆಲ್ಗುಮೆ ಮಾ
ತಿನೊಳೇನೊ ಕಯ್ದುಗೆಯ್ ಬಱ
ವನನಾಜಿಶ್ರಾಂತನಂ ಯಶೋಧನನಿಱಿಯಂ ॥ ೨೦ ॥

ಬಲಮಿಲ್ಲ ನಿನಗೆ ಚಕ್ರದ
ಬಲಮೆ ದಲದನೀಗಳೆನ್ನ ಬಾಣಂ ರವಿಮಂ
ಡಲಮಂ ವಿಘುಂತುದಂ ಕೊ
ಳ್ಪ ಲೀಲೆಯಿಂ ಕೊಂಡು ಖಂಡಂ ಮಾಳ್ಕುಂ ॥ ೨೧ ॥

ಎಂದು ನುಡಿದನಂತವೀರ್ಯನ ದೃಪ್ತೋದಾತ್ತ ಕರ್ಣಕಟುಕ ವಚೋನಿಚಯ ನಿಶಿತಾಸ್ತ್ರಂಗಳ್ ನೆಱಿನನುರ್ಚೆ ಪರ್ವಿದ ಕೋಪಾಗ್ನಿ ಪೊೞ್ಮರದ ಕಿಚ್ಚಿನಂತಳುರ್ದು ಕೊಳೆ ಕನಲ್ದು ದಮಿತಾರಿ ಚಕ್ರಕ್ಕೆ ಕೆಯ್ಯಂ ನೀಡೆ —

ಅದು ವಿಶ್ವಾಯುಧ ದಕ್ಷದಕ್ಷಿಣಭುಜಕ್ಕಾಸನ್ನಧಾರಾಗ್ರಮ<br>
ಪ್ಪುದುಮಾಗಳ್ ದಮಿತಾರಿ ಕೊಂಡಿಡಲೊಡಂ ಕಂಜಾಕ್ಷನಂ ಪೂರ್ವಪು<br>
ಣ್ಯದ ಪುಂಜಂ ನೆರೆದೆಯ್ದಿದಂತೆ ಬಲಗೊಂಡಾನಂದದಿಂ ದಕ್ಷಿಣಾಂ<br>
ಸದ ಮೇಗಿರ್ದುದು ನೀಳಶೈಲ ತಟದೊಳ್ ತಿಗ್ಮಾಂಶುವಿರ್ದಂದದಿಂ ॥ ೨೨ ॥

ಅಂತು ತನ್ನಿಟ್ಟ ಚಕ್ರಂ ಬಯ್ತಿಟ್ಟ ಚಕ್ರದಂತೆ ನಿಶ್ಚಲಮನಂತವೀರ್ಯನ ಬಲದ ಮುಯ್ಪಿನ ಕೆಲದೊಳಿರ್ದುದಂ ಕಂಡು ನೆರಗಂ ಬಗೆಯದೆ ಚಕ್ರಂಬೆರಸು ಪಗೆವನಂ ತಱಿದೊಟ್ಟುವೆನೆಂದು ಬಾಳು ಮತ್ತಪರಂ ಬೆರಸು ಮಿಂಚಂ ತಳ್ಕೈಸಿದ ಕಾರ ಕಾರ್ಮುಗಿಲಂತೆ ತಿೞ್ಪಿನೆಯ್ತರ್ಪ ದಮಿತಾರಿಯಂ ನೋಡಿ ತದನಂತರಂ

ತಿರಿಪುತ್ತುಂ ಜವದಿಂ ಮುಕುಂದನಿಡೆ ವಿದ್ಯುದ್ಭೀಕರಂ ವೈರಿಕಂ<br>
ಧರಮುಂ ಕೊಂಡು ತದುತ್ತಮಾಂಗದೊಡನುದ್ದಂ ಪಾಱಿ ಮೃತ್ಕಾನ್ಹ ಘಟಂ<br>
ಬೆರಸುದ್ಯದ್ಭುಜದಂಡವರ್ತನದಿನುಗ್ರಾಡಂಬರಂ ಪೊಂಗೆ ಕೋ<br>
ವರ ಚಕ್ರಂ ತಿರಿವಂದದಿಂ ತಿರಿದುದಾ ಚಕ್ರಂ ವಿಯಚ್ಚಕ್ರದೊಳ್ ॥ ೨೩ ॥

ತದನಂತರಂ —

ತ್ರಿದಶಾನಕಲಯದಿಂ ನೀ<br>
ರದ ಪಥದೊಳ್ ನಾರದಂಗೆ ತಾಂಡವದ ತಗು<br>
ಳ್ದೊಪ್ಪಿದವಿದುದು ತನ್ನ ಮಾಡಿದ<br>
ಕದನದ ಸತ್ಫಲಮನಾಗಳನುಭವಿಸುವವೊಲ್ ॥ ೨೪ ॥

ಅಂತುರ್ವರಾಸ್ಯತಿಲಕನಪಾರ ಸಂಗ್ರಾಮ ಪಾರಾವಾರಮನೆಯ್ದಿ, ಬಂದೆಱಗಿದ ತಮ್ಮನನಪ್ಪಿಕೊಂಡೆತ್ತಿ ತಳ್ಕಯ್ಸಿಕೊಂಡು ಪರಸಿ ವಿಸ್ಮಯದಿಂ

ನೋಡುತ್ತುಮಿರ್ದು ಸಂಗ್ರಾಮದೊಳಂಜಿದ ವಿದ್ಯಾಧರರ್ಗಭಯಂಗೊ
ಕಂಡರ ತಲೆಯೊಳ್ ಕೆಯ್ಯಿಟ್ಟು ಅಂಜದಿರಿಮಂಜದಿರಿಮೆಂದು ದಮಿತ
ಶರೀರಪೂಜೆಯಂ ಮಾಡಲ್ವೇಟ್ಟು ಕೊಳ್ಗುಳಮಂ ಬಳಸಿ ಚಕ್ರಮಂ
ವರ್ತಿಶ್ರೀಯುಮಂ ತಮ್ಮನೊಳ್ ನಿಯೋಜಿಸಿದಂ. ಅತ್ತ ಕನಕಶ್ರೀ ಜ
ಮರಣಮುಂ ನಿಜಾನುಚಿತಾಚರಣಮುಮೋರಂದಂ ಮಿಕ್ಕು ಮನಮನೊ
ಕಲ್ಲನೆ ಕನಲುತ್ತುಮಿರಲ್ ತತ್ಪಪ್ರಾಯವಚನಂಗಳಿನಟಿಲನಳವಡಿಸಿ ಜ
ಸನಚೂಡಾಮಣಿ

ದಮಿತಾರಿಯ ಭುಜಬಲ ವಿ
ಕ್ರಮದಳವಿಗೆ ಮಚ್ಚಿ ಮಚ್ಚುಗುಡಿಸುವವೊಲನು
ಕ್ರಮದಿಂ ನೀರ್ಗುಡಿಸಿ ಯಥಾ
ಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ ॥ ೨೫ ॥

ಓಜೆಗೊಳೆ ರಜತಶಾಸನ
ರಾಜತ್ಪತ್ರಕದೊಳೆಸೆಯೆ ಬರೆಯಿಸುವಂತಾ
ರಾಜತಶೈಲೇಂದ್ರದೊಳೆ ಮ
ಹಾಜಿನಚಂದ್ರಂ ಪ್ರಶಸ್ತಿಯಂ ಬರೆಯಿಸಿದಂ ॥ ೨೬ ॥

ಬಟಿಯಂ ತನ್ನ ನಿಸ್ತ್ರಿಂಶ ಕರ್ಮಕ್ಕೆ ತಾನೇ ಕೊಕ್ಕರಿಸಿ ಕೃ
ಶಯಂ ತತ್ಕಾಲೋಚಿತ ಪ್ರಾಯಶ್ಚಿತ್ತನಿರತನುಪವಾಸಪುರಸ್ಸರಂ ಭ
ರ್ಚನಾದಿ ಸತ್ಕಾರ ಕರಣಾನಂತರಂ ಕನ್ಯಾಚಕ್ರಾದ್ಯಭಿಧಾನ ಜೀವಾ
ರತ್ನಂಗಳಂ ಕೊಂಡು ತಮ್ಮನಂ ಮುಂದಿಟ್ಟು ವಿಮಾನಾರೂಢಂ ಪ್ರಭಾ
ಪುರಮಂ ಮನೋವೇಗದಿನೆಯ್ದಿ ಅದಂ ಕಾವ ಚಿತ್ರಸೇನಾದಿ ಸೇನಾನಾ
ರುಮನೊಳಗು ಮಾಡಿ ಮೂವಳಸಾಗಿ ಸುತ್ತಿ ಮುತ್ತಿ ಕಾದುತ್ತಿರ್ದ
ದ್ದಂಷ್ಟ್ರನುಮಂ, ಸುದಂಷ್ಟ್ರನುಮಂ ಕಂಡು ಕಡುಮುನಿದು ಮಾಣದೆ ಕನ
ಬಾರಿಸೆವಾರಿಸೆ—

ಇರದೆರಡೆ ಸರಳಿನುಱದೆರ
ಡೆರಲೆಗಳನೆ ಕೊಲ್ವ ತೆಱದಿನಿರ್ವರುಮಂ ಕೊಂ
ದೆರಡನೆಯ ದುಃಖಮಂ ಮಾ
ಣ್ದಿರದಾ ಕನ್ನಿಕೆಗನಂತವೀರ್ಯಂ ಪಡೆದಂ ॥ ೨೭ ॥

ಅಂತು ದಮಿತಾರಿಯ ತನಯರಿರ್ವರುಂ ಸಾಯೆ ಮಂಜು ಕರಗುವಂತೆ ವಿದ್ಯಾಧರಬಲಮೆಲ್ಲಂ ಕರಗೆ ನಿಜಾನ್ವಯ ರಾಜಧಾನಿಯಂ ಪೊಕ್ಕು ಅಷ್ಟಾಹ್ನಿಕ ಮಹಾಮಹಿಮೆಯಂ ಜಿನೇಶ್ವರಂಗೆ ನಿರ್ವರ್ತಿಸಿ ಬೞಿಯಂ ಚಕ್ರಪೂಜೆಯಂ ಮಾಡಿ ತಮ್ಮಂಗೆ ರಾಜ್ಯಾಭಿಷೇಕಮಂ ಮಾಡಿ ತಮ್ಮುತಿರ್ವರುಂ ದಿಗ್ವಿಜಯಾಭಿಲಾಷಿಗಳಾಗಿರೆ—

ಅಮರ ನರ ಖಚರರುಳ್ಳ
ರ್ಥಮೆಲ್ಲಮಂ ಕೊಂಡುಬಂದು ಕಂಡಜಿತ ಪರಾ
ಕ್ರಮಮನುೞಿದೆಱಗಿ ದಿಗ್ವಿಜ
ಯಮನುೞಿಪಿದರೆಱಕಮಿಾಯದಿರ್ಕುಮೆ ನಯಮಂ ॥ ೨೮ ॥

ಅಂತು ಪೊೞಲ್ಗಿಂ ಪೊಱಮಡದೆ ಸಿದ್ಧ ದಿಗ್ವಿಜಯರಾಗಿರ್ದರಿರೆ ಕನಕಶ್ರೀ ಕನ್ನಿಕೆ —

ಆ ಸಾಹಸಭೂಷಣೆ ನಾ
ಲ್ಸಾಸಿರ್ವರ್ ಕುಡದಕೂಸುಗಳ್ವೆರಸರ್ಹ
ಚ್ಛಾಸನದೆಱವಿಡಿದಘಮಂ
ತ್ರಾಸಿಸಲೆಂದಮಳ ದೀಕ್ಷೆಯಂ ಕೆಯ್ಗೊಂಡಳ್ ॥ ೨೯ ॥

ಅಂತಾಕನ್ನಿಕೆ ಸ್ವಯಂಪ್ರಭ ಜಿನೇಂದ್ರ ಪಾದಪದ್ಮೋಪಾಂತದೊಳ್ ಕಮಳಶ್ರೀ ನಾಮಾರ್ಯಿಕಾಭಿಧಾನೆ ತಪಶ್ಚರಣನಿರತೆಯಾಗಿ ಸುರೇಂದ್ರಲೋಕಾತಿಥಿಯಾದಳ್, ಇತ್ತ ಪುರುಷರತ್ನಕ್ಕೆ ಸ್ತ್ರೀರತ್ನಮಲ್ಲದೆ ಸಾಮಾನ್ಯಮಣಿಯುಂ ಪಸುರ್ವಣೆಯುಂ ದೊರೆಯಲ್ಲವೆಂಬಂತೆ ಜೈನಶಾಸನಚೂಡಾಮಣಿಗೆ ವಿಜಯಮಯೊಂಬೊಳಗ್ರಮಹಿಷಿಯಾಗಿರೆ—

ರವಿಗಂ ಸಂಜೆಗವೊಪ್ಪಿ ತೋಱುವುದಯಾದ್ರೀಂದ್ರಾಗ್ರದೊಳ್ ದೀಪ್ತಿ
ಟ್ಟುವವೋಲ್ ಕಾರ್ಗಮುದಗ್ರ ಮೇಘತತಿಗಂ ಕಾರ್ಗಾಲದೊಳ್ ಮಿಂ
ಟ್ಟುವವೋಲ್ ಇಂದುಗವೊಂದಿನಿಂದ ಕಳೆಗಂ ಸಂದೂರ್ಜದೊಳ್ ಕಾಂ
ಟ್ಟುವವೋಲ್ ನಂದನೆ ಸೀರಿಗಂ ವಿಜಯೆಗಂ ತದ್ವಂಶದೊಳ್
ಪುಟ್ಟಿದಳ್ ॥

ಅಂತು ಪುಟ್ಟಿ ನಾಮಕರಣದೊಳೇನಾನುಮೊಂದು ಪೆಸರೊಳ್ ಬಳೆಯೆ—

ವಿಶದಮತಿಗಂ ನಿಕಾಮೋ
ಪಶಮಕ್ಕಂ ಮೆಚ್ಚಿ ತಾನುಮನುಜನುಮಿದರ್ಕೆ
ಕುಶದಳ ಸವರ್ಣವರ್ಣೆಗೆ
ಕುಶಾಗ್ರಮತಿ ಸುಮತಿಯೆಂದು ಹರಿ ಪೆಸರಿಟ್ಟಂ ॥ ೩೧ ॥

ನಿಸರ್ಗದೊಳ್ ದೇವಗುರುಭಕ್ತಿಯುಂ, ಮಾತಾಪಿತೃ ಶಿಕ್ಷಾನುರಕ್ತೆ
ಯಾಗಿ ಸ್ವಭಾವದೊಳ್ ಸಂಸಾರ ಶರೀರ ಭೋಗ ನಿಸ್ಸಾರತೆಯನಱಿ
ಗಂಭೀರ ಧೀರೋದಾರ ಸಾರೋಕ್ತಿಗಳಂ ನುಡಿದೊಡಂ[ಬಡಿಸಿ]ತಾ
ತಂದೆಯುಮಂ ಬಿಡಿಸಿ ತದನುಗಮ್ಯಮಾನೆ ರಾಜಮಂದಿರದಿಂ ಪೊಱಮ
ಸುಮತಿ ಸುವ್ರತಾಗಣಿನೀ ಸಮಕ್ಷದೊಳ್ ಪರಮದೀಕ್ಷೆಯನಯ್ನೂ
ಮಹೀಪಾಲ ಕನ್ನೆಯರೊಡನೆ ಕೈಕೊಂಡಳ್—

ಮತ್ತಿತ್ತ ಚಕ್ರಿಯುಂ ಚತು
ರುತ್ತರವದಶೀತಿ ಲಕ್ಷಪೂರ್ವಂ ಬಟ್ಟಿ
ತ್ಯುತ್ತಮ ಸುಖ ಪವಡಿಸಿ ತ
ನ್ನುತ್ತರ್ಯ ದುಕೂಲ ವಿಶದ ಶಯ್ಯಾತಳದೊಳ್ ॥ ೩೨ ॥

ಇರೆ ಛಿದ್ರಿಸಿದೊಂ ಜವನನು
ವರಕ್ಷಮಿದಿರ್ಗಂ ಪೊಣರ್ಕೆಗಂ ಸುಗಿದವೊಲಾ
ಹರಿಯಂ ಮೂದಲಿಸಿ ಚಲಂ
ಬೆರಸಿ ನಿರಾಕರಿಸಿ ಹರಿಯನಿಱುವುದು ಮೊಗ್ಗೇ' ॥ ೩೩ ॥

ಅಂತನಂತವೀರ್ಯಂ ಭವಾಂತರಿತನಪ್ಪುದುಂ—

ಬಲದೇವಂ ಬಲದೇವಸುಜ್ಜವಣೆಯೊಳ್ ಮುಂದಾದರಂ ಕೊಂದ ಮೆ
ಯ್ಗಲಿ ತಮ್ಮಂ ಸಯೆ ಬಳ್ಳಿಯುಂ ನಿಗಳಮುಂ ತತ್ತಿಂದುವುಂಬಳ್ಳಿಸಂ
ಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹ ಶೃಂ
ಖಲೆ ಪಾಱೆಟಿ ತಪೋವನಕ್ಕೆ ತಳರ್ದಾತ್ಮೀಯಾನ್ವಯೈಶ್ವರ್ಯ
ದೊಳ್ ॥ ೩೪ ॥

ಅರಿಂಜಯನೆಂಬೊಂ ತನ್ನ ಕಿಱಿಯ ಮಗನನಭಿಷೇಕಪೂರ್ವಕಂ ನಿಱಿಸಿ ಸಪ್ತಶತಕ್ಷಿತಿಪಾಲ ಸಮನ್ವಿತಂ ಸ್ವಯಂಪ್ರಭತೀರ್ಥೇಶ್ವರ ಪಾದಾರವಿಂದ ಸಮಕ್ಷದೊಳ್ ಜಿನನಾಥರೂಪಮಂ ತಾಳ್ದಿ—

ಧೀರತೆಗಿಡದೆ ಪರೀಷಹ
ವೀರರನುಗ್ರೋಗ್ರ ತಪದೊಳಂ ಗೆಲ್ದು ತಮೋ
ವೈರಿ ವಿಜಯಕ್ಕೆ ಮಸೆದಸಿ
ಧಾರೆವೊಲಪರಾಜಿತಂ ವಿರಾಜಿತನಾದಂ ॥ ೩೫ ॥

ಅಂತು ತಪೋನಿಯಮದೊಳಮಾ ಜಿನಚಂದ್ರಮುನೀಂದ್ರಂ ಯೋಗೀಂದ್ರಚಂದ್ರರಿಂ ಪೊಗೞಿಸಿ ನಿರಾಕುಳಮೇಕವಿಹಾರಿಯಾದೊನನಂತವೀರ್ಯನುಂ ರತ್ನಪ್ರಭೆಯುಂ ಘರ್ಮೆಯುಮೆಂಬ ಮೊದಲ ನರಕದ ಪದಿಮೂಱಿಂದ್ರಕಂಗಳೊಳ್ ಸೀಮಂತಮೆಂಬ ಮೊದಲಿಂದ್ರಕದೊಳ್ ನಾಲ್ವತ್ತಿರ್ಛಾಸಿರ ಸಂವತ್ಸರಮಾಯುಷ್ಯಮಾಗಿ ಪುಟ್ಟಿದನಿತ್ತಲ್ ಉರ್ವರಾಸ್ಯತಿಲಕನಪ್ಪ ತಪೋಧನನುಂ ಸಿದ್ಧಗಿರಿಯೊಳಾತ್ಮಪರ ನಿರಾಪೇಕ್ಷಮಪ್ಪ—

ಪ್ರಾಯೋಪಗಮನದಿಂ ಮುನಿ
ನಾಯಕನಿರದರಿದು ತೊಱೆದು ನಿಜತನುವ ನಯ
ಶ್ರೀಯ ಬೆಳಗೆನಿಸುವಮರ
ಶ್ರೀಯೊಳ್ ನೆಗಟ್ಟಚ್ಯುತೇಂದ್ರ ಪದಮಂ ಪಡೆದಂ ॥ ೩೬ ॥

ಅಂತು—

ನೆರೆದಿರ್ದುವೆಂತು ಮೂಲಾಂ
ಕುರಂಗಳೊಳಗೊಂದಧೋಗವೊಂದೂರ್ಧ್ವಗಮಂ
ತಿರೆ ವಾಸುದೇವ ಬಲದೇ
ವರೊಳೊರ್ವನಧೋಗನೊರ್ವನೂರ್ಧ್ವಗನಾದೊಂ ‖ ೩೭ ‖

ಪರಮ ಸುಖಾಮೃತಪಿಂಡದ
ದೊರೆ ಮೂಱುವೊಟಿಂ ಶರೀರಮಾಗಿಪ್ಪ
ತ್ತೆರಡು ಸಮುದ್ರೋಪಮ ವ
ತ್ಸರಂಬರಂ ಬಾೞ್ಗುಮಚ್ಯುತೇಂದ್ರಂ ದಿವದೊಳ್ ‖ ೩೮ ‖

ಅಂತು ಅಚ್ಯುತಾಮರೇಶ್ವರಂ ನಂದೀಶ್ವರದ್ವೀಪಕ್ಕೆ ಪರಿವಾರಾಮ
ಶ್ವರರ್ ಸಹಿತಂ ಪೋಗಿ ಜಗತ್ರಿತಯಚೂಡಾಮಣಿಗಂ ಜನದಧಿಮುಖಾದಿ
ಗಾಕೃತ್ರಿಮ ಚೈತ್ಯಾಲಯಂಗಳೊಳಷ್ಟಾಹ್ನಿಕ ಮಹಾಮಹಿಮೆಯಂ ಮ
ಬಂದೊಂದು ದೆವಸಂ—

ಅಮರಾನೀಕದ ಸುತ್ತು ಪೋಲೆ ದಿನನಾಥಾವಂಧ್ಯ ಸಂಧ್ಯಾಭ್ರವಿ
ಭ್ರಮಮಂ ವಾಹನದೇವ ದಂತಿಶಿರದೊಳ್ ಕೂರಂಕುಸಂ ಚಾರಣ
ಕ್ರಮದಿಂದಾದಜುವತ್ತು ನಾಲ್ಕು ಪೊಳೆಪಿಂ ಕಣ್ಗೊಪ್ಪೆ ಮೇಲಪ್ಪಕೃ
ತ್ರಿಮ ಚೈತ್ಯಾಲಯವಂದನಕ್ಕೆ ನಡೆದಂ ಸೌಜನ್ಯಕಂದಾಂಕುರಂ ‖ ೩೯

## ೪. ಅರಿಶಿರಂ ಸೆಂಪರದುಂಡಿಗೆ ಧರೆಗೆನಿಸಿ ಮುಂದೆ ಬಿಟ್ಟುದು

ಶ್ರೀಜಿನಚಂದ್ರಂ ವಿಬುಧ ಸ
ಮಾಜಂ ಬೆರಸಂದು ವಂದನಾಭಕ್ತಿಯೊಳೇಂ
ರಾಜಿಸಿದನೊ ಗಮನದೊಳಪ
ರಾಜಿತಚರನಚ್ಯುತೇಂದ್ರನಪಗತತಂದ್ರಂ ॥ ೧ ॥

[ಪದಿನಾಱುಮಕೃತ್ರಿಮ ಜಿನಾಲಯಂಗಳ್ಗೆ ಮನಂಬೇಱೆ ನುಡಿಬೇಱೆ ಕಾಯಂ ಬೇಱೆನಿಸದೆ ಕರಣಶುದ್ಧಿಯಿಂ ಪೊಡಮಟ್ಟು, ಬಲಗೊಂಡೊಳಗಂ ಪೊಕ್ಕು ಕ್ರಿಯಾಪೂರ್ವಕದಿಂ ದೇವರಂ]

ಬಂದಿಸಿ ಬೞಿಕೆ ಯಥಾಕ್ರಮ
ದಿಂದಮಳಾರ್ಚನೆಗಳಿಂದಮರ್ಚಿಸಿ ಪರಮಾ
ನಂದಂ ಕಡೆಯ ಜಿನೇಶ್ವರ
ಮಂದಿರದೊಳ್ ಕಂಡನೊರ್ವನಂಬರಚರನಂ ॥ ೨ ॥

ಅಂತು ಭಾವಾನುಬಂಧ ಸಿಜಮೋಹದಿಸಿರ್ವರುಮೋರೊರ್ವರಂ—

ಸಂತಸದಂತನೆಯ್ದಿ ನಡೆನೋಡುವುದುಂ ಖಚರೇಂದ್ರನೆಂದನೆ
ನ್ನಂ ತವೆ ಪುಣ್ಯಮೂರ್ತಿಯುತನೈ ಪರಮೇಶ್ವರ ನೀನುಮಿಂತು ನೋ
ಟ್ಪಂತಿರೆ ನೋಂತನೇಂ ಮನುಜಕೀಟಕನೊಳ್ ನಿನಗೆನ್ನೊಳಾವುದ
ತ್ಯಂತ ಮನೋಹರಂ ಸಕಳನಾಕಿನಿಕಾಯ ಸಭಾಭಿವಂದಿತಾ ॥ ೩ ॥

ಎಂದತಿಭವ ಸೌಧರ್ಮಿಕೆಯ ಕೂರ್ಮೆಯ ಭರದಿಂದೆಜಗುವಂತೆಱಗಿ ಪೊಡವಡುವುದುಂ —

ದೇವೇಂದ್ರನುಮಾಗಳ್ ದೇ
ಶಾವಧಿಯಿಂ ಚಿತ್ತದೊಳ್ ಪ್ರಯೋಗಿಸಿ ನಿಜ ಜ
ನ್ಮಾವಳಿಸಮೇತಮಾತ್ಮೀ
ಭಾವಮನಱಿದಂ ವ್ಯತೀ[ತ] ಭವಸಂತತಿಯಂ ॥ ೪ ॥

ಅಂತು ಭವಾವಳಿಯನೋಳಿಯೆ ಪೂರ್ವಾಪರ ಪರಾಮರ್ಶಂಗೆಯ್ದು—

ಕಂಡು ದಿವಿಜೇಶ್ವರಂ ಬಗೆ
ಗೊಂಡಿರೆ ನುಡಿದಂ ವಿಯಚ್ಚರಂ ಮುಂ ನಿನ್ನಂ
ಕಂಡಱಿಯದೆಯುಂ ಸ್ವಾಮಿ
ಕಂಡಂತಾದಪುದಖಂಡಿತ ವ್ಯಾಮೋಹಂ ॥ ೫ ॥

ನಿನ್ನ ದಯೆವೆರಸು ನೋಟ್ಪಿಮ
ಹೋನ್ನತಿಯುಂ ಸತ್ಪ್ರಸಾದಮುಂ ಕಿಱುಕುಳನ
ಪ್ಪೆನ್ನೊಂದಿಗನೊಳನುಚಿತಮಿ
ದು ನಿಮ್ಮಡಿ ಬೆಸಸಿ ಕಳೆಯ ಮತ್ಸಂಶಯಮಂ ॥ ೬ ॥

ಅದಱಿನವಧಿಬೋಧಲೋಚನನಪ್ಪ ನಿನಗೆ ಗೋಚರಮಲ್ಲದುದೊಂ
ಮಿಲ್ಲ. ರೂಪದರ್ಶನಮಾತ್ರದೊಳೆಲ್ಲಂ ವ್ಯಕ್ತಮಕ್ಕುಂ. ಮತ್ಪ್ರೇಮಾನುಬಂ
ಕಾರಣಮುಮಂ ಭವದ್ದಯಾ ವಿಶೇಷೋದಯ ನಿಮಿತ್ತಮುಮಂ ಕೇಳಲಟ
ಯಾದಪುದೆನೆ–

ಪದದಪ್ಪದೆಯುಂ ಬಗೆ ಬೆದ
ರದೆಯುಂ ಕತೆ ಕಿಡದೆಯುಂ ಭವಾವಳಿ ತಡಮಾ
ಗದೆಯುಂ ಸವಿ ತವದೆಯುಮಂ
ಬುದ ನಿನದನತಂದ್ರನಿಂದ್ರನಾ ಜಿನಚಂದ್ರಂ ॥ ೭ ॥

ಇಂತೆಂದನೀ ಜಂಬೂದ್ವೀಪದ ಭರತಕ್ಷೇತ್ರದೊಳುಂಟು —

ವಿಜಯಾರ್ಧಂ ಗಿರಿ ಚಕ್ರವರ್ತಿವಿಜಯ ಪ್ರಾರಂಭದಿಂ ಗೆಯ್ವ ದಿ
ಗ್ವಿಜಯಾರ್ಥಂ ತನಗಿಕ್ಕೆಯಾಗೆ ಪೆಸರಂ ಪೋಲ್ತಿರ್ದುದಂಬೋಧಿಯು
ಗ್ಮ ಜಲಕ್ಷಾಳಿತ ಪಾದಮಲ್ಲಿ ದೊರೆವೆತ್ತಾ ದಕ್ಷಿಣಶ್ರೇಣಿಯೊಳ್
ತ್ರಿಜಗತ್ಸಾರತರಂ ವಿಯಚ್ಚರಪುರಂ ಚೆಲ್ವಿಂದವಾಗ್ಗೋಚರಂ ॥ ೮ ॥

ವಿವಿಧ ವಿಯಚ್ಚರ ರಥಿನೀ
ನಿವಹ ರಥಪ್ರತತಿ ತನಗೆ ನೂಪುರಮಾಗೊ
ಪ್ಪುವುದೆನೆ ರಥನೂಪುರ ಚ
ಕ್ರವಾಳಮೆಳಗವಯುವಂಬೊಲತಿರಮಣೀಯಂ ॥ ೯ ॥

ಅದನಾಳ್ವೊಂ ಜ್ವಳನಜಟಿಯೆಂಬೊಂ ವಿದ್ಯಾಧರರಾಜನ್–

ಅವನೀವಧುಗಂ ಶ್ರೀಗಂ
ಸವತಿಯೆನಲ್ ಜ್ವಳನಜಟಿಗೆ ಮಾದೇವಿ ಮನೋ
ಭವನ ನನೆಗಣೆಗೆ ದೊಣೆ ವಾ
ಯುವೇಗೆ ಸುರಗಗನಚರನರಸ್ತ್ರೀರತ್ನಂ ॥ ೧೦ ॥

ಅಂತಾ ವಿಯಚ್ಚರೇಶ್ವರ ದಂಪತಿಗೆ ಸಮಸಂದ ಸಂತಸಂ–

ಪುಟ್ಟುವವೊಲಗ್ರತನಯಂ
ಪುಟ್ಟದನಾ ಪೂರ್ತಿಪೊಂಗಮಾದಿತ್ಯಂಗಂ
ಪುಟ್ಟದುದೆನಿಸಿದುದವನೊಡ
ವುಟ್ಟದುದಂಬರ ಚರೇಂದ್ರ ಸಾಂದ್ರ ತೇಜಂ ॥ ೧೧ ॥

ಅಂತರ್ಕಕೀರ್ತಿಯೆಂಬ ಪಿರಿಯಮಗಂ ಬಳೆಯೆ–

ಸಕಳಕಳಾವಿದನಪ್ಪ
ರ್ಕಕೀರ್ತಿಯಿಂ ಕಿಱಿಯಳಾಮ್ರಲಸದತಿ ಮೃದುಕೋ
ರಕದಿಂ ಬೞಿಯಂ ಮಂಜರಿ
ನಿಕಾಮಕೋಮಳ ವಿಲಾಸದಿಂ ಪುಟ್ಟುವವೊಲ್ ॥ ೧೨ ॥

ಅಭಿನವರೂಪ ಹಾವ ನವಭಾವಸಮನ್ವಿತೆ ಪುಟ್ಟಿದಳ್ ಸ್ವಯಂ
ಪ್ರಭೆ ಮಗಳಾಕೆ ಪಾರ್ಶ್ವಚರ ಭೂಚರ ಖೇಚರ ನೇತ್ರಪತ್ರಿಕಾ
ನಿಭೆ ಮದನಾಪನೀಜ ನಿಭೆ ಮಾನವ ಮಾನಸಕಂಜಭಾನುವ
ತ್ಪ್ರಭೆ ನಯನೋತ್ಪಲೇಂದು ಕಿರಣಪ್ರಭೆಯಪ್ಪುದು ತಪ್ಪದೊಪ್ಪುಗುಂ
|| ೧

ತದೀಯ ಜನಕಂ ಜ್ವಳನಜಟಿಮಹಾರಾಜಂ ಶುಭದಿನ ಮುಹೂ
ದೊಳ್ ಅರ್ಕಕೀರ್ತಿಗೆ ಗಗನಕೂಟ ಪುರಾಧೀಶನಪ್ಪ ಜ್ಯೋತಿರಥ
ಸುಂದರೀದೇವಿಗಂ ಪುಟ್ಟಿದ ಜ್ಯೋತಿರ್ಮಾಲೆಯಂ ತಂದು ಮದುವೆ
ಮಾಡಿ ಮತ್ತಂ ಸ್ವಯಂಪ್ರಭೆಗಂ ಯೌವನಂ ನೆಱೆವಿನಂ ಒಂದು ದಿನ
ಶ್ರೀಪಂಚಮಿಯೊಳುಪವಾಸ ನಿರತೆಯಾಗಿ ಸಿದ್ಧಕೂಟ ಜಿನೇಂದ್ರ ಮ
ದೊಳ್ ತ್ರಿಭುವನೈಕಲಲಾಮನ (ಜಿನನ) ನಭಿಷೇಕಪೂರ್ವಕಮಷ್ಟವಿ
ರ್ಚನೆಗಳಿಂದಮರ್ಚಿಸಿ ಬಂದು ನಿಜಜನಕಂಗಂ ಜನನಿಗಂ ತಮ್ಮಣ್ಣನಪ್ಪ
ಕೀರ್ತಿಗಂ ಸೇಸೆಯನಿಕ್ಕಿ ತನ್ನ ಚೆಂಬೊನ್ನ ಕನ್ನೆವಾಡಕ್ಕೆ ಪೋಸಳಂ ಜ್ವ
ಜಟಿ ನೋಡಿ—

ಅಮಿತ ಮದಾಲಸಾಂಗಜಮತಂಗಜಮೋ ನಡೆಗೊಂಡನಂಗ ಜಂ
ಗಮಲತೆಯೋ ಮದೋತ್ಕ ಕಳಹಂಸೆಯೊ ಚೇತನೆವೆತ್ತ ಚಿತ್ರಮೋ
ಸಮೆದ ಮನೋಜಕೇತನಮೊ ಕಣ್ಮಸೆಯಿಟ್ಟರಲಂಬೊ ಕಾಮಚಾ
ಪಮೊ ಕುಸುಮಾಸ್ತ್ರ ಚಕ್ರಿಕರಚಕ್ರಮೊ ಕಾಂತಿ ಬಸಂತಕಾಂತೆಯೋ
|| ೧

ಎಂದು ಬಗೆದು ಮಗಳೇೞಂಜವ್ವನಮುಮಂ ಕನ್ಯಾವ್ರತನಿ
ಮಾದ ಪಾವನಮುಮಂ ಸೌಂದರ್ಯ ಸಂಪ್ರತಿಪತ್ತಿಯುಮಂ ಲಾವ
ಸದ್ಭಾವಮುಮಂ, ಸಂಭೋಗಪ್ರಾವೀಣ್ಯಭಾವಮುಮಂ, ವಿಭ್ರಮ ಸಂಭ
ಮುಮಂ ಕಾಮಸಂಭ್ರಮಾವಧೀರಣಮುಮಂ, ವಿಲಾಸ ಸಮೇತತೆಯುಮ
ಮಿಥುನ ಲೀಲಾವ್ಯಪೇತತೆಯುಮಂ ಬೇಱೆವೇಱೆ ಪಚ್ಚಿಪಚ್ಚಿ ಮಂತ್ರಿವ
ದೊಳಾಲೋಚಿಸಿ—

ಜನಪತಿ ಬೞಿಯಂ ಸಂಭಿ
ನ್ನನೆಂಬ ನೈಮಿತ್ತಿಕಂಗೆ ಬೞಿಯಟ್ಟೆ ಚಿರಂ
ತನರಿರ್ ದೃಷ್ಟಪರಂಪರ
ವಿನೂತ ವಿದ್ಯಾವಿಶೇಷವಿದರಿರ್ ಪೇೞಿಂ ॥ ೧೫ ॥

ನರರೊಳ್ ಮತ್ಸುತೆಗೀ ಸ್ವಯಂಪ್ರಭೆಗೆ ಪೇೞಿರ್ ಧನ್ಯರಾರ್ ಮಾನ್ಯರಾರ್
ಸೊರೆಯೆಂದಂದವನೀಶನೆಟ್ಟು ಬೆಸಗೊಂಡಾಗಳ್ ನಿಮಿತ್ತಜ್ಞನಂ
ಬರ ಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ ಕಂ
ತಿರದಿಂತೆಂದನಧೀಶನಂ ಬಗೆದುಕೇಳ್ ಪೇೞ್ವೆಂ ಖಗಾಧೀಶ್ವರಾ ॥ ೧೬ ॥

ಭರತಕ್ಷೇತ್ರಲಲಾಮಮಪ್ಪುದು ಸುರಮ್ಯಂ ನಾಡು ತತ್ಪಾದನಂ
ಪುರಮುಂಟಂತದುವಂ ಪ್ರಜಾಪತಿ ಮಹೀಪಾಲಂ ದಲಾಳ್ಗುಂ ಜಗ
ಕ್ಕೆರಡುದ್ಯನ್ಮದಲೇಖೆಯಂತಿರೆ ತದುರ್ವೀಪಾಲಕಂಗಿಷ್ಟ ಸುಂ
ದರಿಯರ್ ಸುಂದರರೂಪೆಯರ್ ಸೊಬಗೆಯರ್ ಕೂರ್ತಿರ್ಪರು-
ರ್ವೀಶ್ವರಾ ॥ ೧೭ ॥

ಆ ವಧುವಿರ್ವರೊಳೆ ವಿಜ
ಯಾವತಿಯೆಂಬಳ್ ವಿಳಾಸವತಿ ಪಿರಿಯಮಹಾ
ದೇವಿ ಮೃಗನಯನೆಯುಗೆ ಮೃಗ
ಯಾವತಿ ಕಿಱಿಯರಸಿಯಾಗಿ ಸಲೆ ಪಲಕಾಲಂ ॥ ೧೮ ॥

ಅಲ್ಲಿ ಪಿರಿಯರಸಿಯ ಮಗಂ ವಿಜಯನುಂ, ಕಿಱಿಯರಸಿಯ ಮಗಂ ತ್ರಿಪೃಷ್ಠನುಮೆಂಬರ್ ಬಲದೇವ ವಾಸುದೇವರಾಗಿ ಪುಟ್ಟಿದರವರೊಳಗೆ-

ವಿಜಯಂ ಲಕ್ಷ್ಮೀನಿಲಯಾಂ
ಬುಜಂ ಜಯಶ್ರೀಪ್ರಿಯಂ ತ್ರಿಪೃಷ್ಠನರಾತಿ
ಧ್ವ[ಜಿ]ನೀ ಸಮಸ್ತ ಮದಸಾ
ಮಜಕುಲನಗಕುಲಕೆ ಶನಿಯುಮಶನಿಯುಮಾದಂ ॥ ೧೯ ॥

ಆ ಕಿಱಿಯನನಿಭರಿಪು ಕೋಲೆ
ಲೋಕವನಿಭರಿಪುವನಸಗವೊಯ್ಯೊಲ್ವಯ್ದು ಜಯ
ಶ್ರೀಕಬಲಿತ ವೈರಿ ನಿರಾ
ಲೋಕಂ ಮಾಡಿದನಖಂಡಭೂಮಂಡಲಮಂ ॥ ೨೦ ॥

ಅಂತು ಬಾಳಕೇಳೀಲೀಳೆಯುಂ ಪ್ರಜಾಪಾಲನಮನಪ್ಪುಕೆಯೆ ...
ದೇಶದಿಂ ಮತ್ತೊಂದು ದಿವಸಂ ತಮ್ಮಯ್ಯನೋಲಗದೊಳ್ ಮಾತುಮ...
ಕುಲವೃದ್ಧರ ನುಡಿಯುಂ ವಿಜಯುಂ ಕೇಳ್ದು ತಮ್ಮನುಂ ತಾನುಂ ಅನೇಕ...
ರಾಜಸಮಾಜಂ ಬೆರಸು ಆಡುವ ನೆವದೊಳ್ ಪೋಗಿ ಕೋಟಿಕಶಿಲೆಯಂ ...

ಕ್ಷಿತಿನಾಥತ್ವಮನೊಲ್ವ ರಾಜತನಯರ್ ಪೂಣ್ದೆತ್ತಲೀ ಪ್ರಸ್ತರ
ಕ್ಕೆ ತಗುಳ್ವೆಂಬುದುಮೆತ್ತಿಕೊಂಡು ಗಗನಕ್ಕೀಡಾಡಿ ವಾಮೇತರಾ
ಯತ ಹಸ್ತಾಗ್ರದೊಳಾಂತು ತಾಳ್ದಿದುದಱಿಂ ಬಾಳತ್ವದೊಳ್ ಕೋಟಿ...
ತಿತಮಾಕಲ್ ತಿರಿಕಲ್ ತ್ರಿಪೃಷ್ಠಮಹಿಪಂಗಕ್ಕುಂ ಪೆಱಂಗಕ್ಕುಮೇ ॥...

ಅದಲ್ಲದೆಯುಂ ಅಳಕಾಪುರವರೇಶ್ವರಂ ಮಯೂರಗ್ರೀವಂಗಂ ನೀ...
ನೆಗಂ ಪುಟ್ಟಿದ ನಿಖಿಳ ಖೇಚರ ಲಲಾಮಾಯಮಾಣಂ ತ್ರಿಖಂಡಾ...
ಅರ್ಧಚಕ್ರವರ್ತಿಯಪ್ಪ ಹಯಗ್ರೀವಂ ಆ ತ್ರಿಪೃಷ್ಠಂಗಿದಿರ್ಚಿ—

ವನನಾಗಾರಿಯನಾಂತ ದಂತಿಶಿಶುವೊಲ್ ದಿಗ್ದಂತಿಯೊಳ್ ಪೋರ್ದ ಹಿ...
ನನವೋಲ್ ಗಾಳಿಯ ಕೋಟಿಗೊಳಿಟ್ಟೆ ಸೊಡರ್ವೋಲ್ ದಾವಾಗ್ನಿ-
ಗೊಡ್ಡಿ...
ನನಕುಂಜಂಬೊಲಿನಂಗೆ ನಿಂದ ತಿಮಿರವ್ಯೂಹಂಬೊಲುಗ್ರಾಹಿ ಮ
ರ್ದನದೊಳ್ ಮಚ್ಚರವುಳ್ಳ ಬಾಳಫಣಿವೋಲ್ ನೀಡಿಲ್ಲದಳ್ಕಾಡುಗುಂ ॥...

ಈ ವಚನಮಾದೇಶವಚನಮಂತು—

ತ್ರಿಭುವನ ಭೂಷಣೋಪಮೆಗೆ ಸಂಗಮದೊಳ್ ಪರಭಾಗಮಿಾ ಸ್ವಯಂ
ಪ್ರಭೆಗೆ ಲುಲತ್ತಟಿತ್ಪ್ರಭೆಗೆ ಬಂಧುರ ಸಿಂಧುರ ನೀಲನೀರದ
ಪ್ರಭನಭಯಂ ತ್ರಿಪೃಷ್ಠನುಟೞದರ್ ನಿಲೆ ಕಲ್ಪಲತಾಶ್ರಯಕ್ಕೆ ನಿ
ಷ್ಪ್ರಭತನುವುಳ್ಳರಂದೊರೆಗೆ ವಾರಧವೋಲ್ ದೊರೆಯಾಗಲಾರ್ಕುಮೇ
|| ೨೩ ||

ಅದಱಿಂ ನಿಮ್ಮ ಕೊಂಡಾಟದ ಮಗಳಪ್ಪ—

ಕಿಱಿಯವಳಾತನೊಳಲ್ಲದೆ
ಪೆಱರೊಳಸಂಪೂರ್ಣ ನಿಜಮನೋರಥೆ ಪೆಱದೇಂ
ಮಱಿದುಂಬಿ ಪೂತಚೂತದೊ
ಳೆಱಗುಗುಮೆಱಗುಗುಮೆ ಸಲ್ಲಿಕೀ ಪಲ್ಲವದೊಳ್ || ೨೪ ||

ಎನೆ ಖಚರಾಧಿನಾಥನವಧಾರಿಸಿ ದೂತನನಿಂದುವೆಂಬೊನಂ
ಮುನಮೆನಿಪನ್ನನಂ ನಯದಿನಟ್ಟಿದೊಡಾತನುಮೆಯ್ದಿ ಪೋಗಿ ಪೌ
ದನಪುರಮಂ ಪ್ರಜಾಪತಿಮಹೀಪತಿಮಂದಿರಮಂ ತದುರ್ವರೇ
ಶನ ಮತದಿಂದೆ ಪೊಕ್ಕು ಮಣಿಮಾಲೆಯ ಲೀಲೆಯ ಚಿತ್ರಶಾಲೆಯಾ || ೨೫ ||

ಮೃಗೇಂದ್ರವಿಷ್ಟರಾರೂಢನಾಗಿರ್ದ ಪ್ರಜಾಪತಿಮಹೀಪಾಲನಂ ದ್ವಾರ
ಪಾಲಕ ಸಂದರ್ಶಿತಂ ಕಂಡು ಮಹೀತಳಾಶ್ಲಿಷ್ಟಲಲಾಟಪಟ್ಟನೆಱಗಿ ಪೊಡವಟ್ಟು
ಮುಖೋಪದಿಷ್ಟಾಸನದೊಳ್ ಕುಳ್ಳಿರ್ದು—

ಭೂಪಂ ಬೆಸಗೊಳೆ ಮಧುರಾ
ಳಾಪಂ ಬಿನ್ನವಿಕುಮಿಂದುಶರದಿಂದು ಯಶೋ
ರೂಪನಭಿರೂಪ ಶೀಳಕ
ಲಾಪಂ ಮತ್ಸ್ವಾಮಿ ನಿಮ್ಮ ಭಾವಂ ದೇವಾ || ೨೬ ||

ಜ್ವಳನಜಟಿ ವೈರಿಭೂಭೃ
ಜ್ಜ್ವಳನಂ ನಮಿ ಬಾಹುಬಲಿ ಮಹೀಭುಜರಿಂದಂ
ತೊಲಗದದಾವಮುಂ ತಾಮುಂ
ತೊಲಗಿಸೆ ತೊಲಗಿದುದು ತಮ್ಮ ವರ್ತನವಿಾಗಳ್ ‖ ೨೭

ಎಂದು ಪಟ್ಟಸೂತ್ರದೆರಡೆಳೆಯುಮಂ ಗಂಟಿಕ್ಕುವಂತೆ ಪರಂಪ
ಪಱಿಮಱಿವುಮಾದ ನಣ್ಪಂ ಪುನರ್ನವಂ ಮಾಳ್ಪ ಬಗೆಯಿಂ ಎನ್ನ
ದಟ್ಟಿದನೆಮ್ಮರಸಂ, ತನ್ನ ಮಗಳಪ್ಪ ಕನ್ಯಾರತ್ನಮಂ ಸ್ವಯಂಪ್ರಭೆಯ

ಆ ಯುವತಿರತ್ನಮಂ ಭವ
ದೀಯಾತ್ಮಜ ಪುರುಷರತ್ನದೊಳ್ ಕೂಡುವಭಿ
ಪ್ರಾಯಂ ಪ್ರೀತಿಲತಾ ಶಾ
ಖಾಯಮನಡರ್ದಪೆನೆಯೆಂದು ಖೇಚರರಾಜಂ ‖ ೨೮ ‖

ಒಸೆದಟ್ಟಿದನಟ್ಟಿದ ವಿಭು
ಗೆ ಸಂತಸಂ ಮಾಡಿ ಬರೆದ ಮಾಱೋಲೆಯೆನೆ
ಯ್ದಿಸಿದೊಡೆ ನಡೆಯುತ್ತುಂ ಬಾ
ಱಿಸಿ ತಡೆಯದೆ ಬರ್ಕುಮಿರ್ಕುಮೇ ಖಚರೇಂದ್ರಂ ‖ ೨೯

[ದೂತನ ಮಾತನೆಲ್ಲಮಂ ಕೇಳ್ದು] ಮೂಱುಲೋಕಮನಾಳ್ದಂತೆ
ಸಂತಸಂಬಟ್ಟು ಬಂದ ದೂತನಂ ದಾನಸನ್ಮಾನಾದಿಗಳಿಂ ಸಂತಸ
ತ್ರಿಪ್ರಷ್ಠನೊಡಂಬಡಿಸಿ ಜ್ವಳನಜಟಿಮಹೀಪಾಲಂಗೆ ಬಱಿವೆರಸು ತನ್ನ
ಯೊಳಗ್ಗಳಮಪ್ಪಮೂಲ್ಯ ವಸ್ತುಗಳಂ ಪ್ರಜಾಪತಿ ಮಹಾರಾಜಂ ಪ
ಗಟ್ಟ ಸಂಪೂರ್ಣೇಂದ್ರಮುಖಿಯನಿಂದು ನಾಳೆನ್ನದೆ ಬಂದ ಪೊಱ್ತೆ ಪ
ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದುಮಾತನುಂ ಗಗನಗಮ
ನಿಜನಾಥ ಪುರವರಮನೆಯ್ದಿ ಒಡ್ಡೋಲಗಂಗೊಟ್ಟಿರ್ದ ಗಗನಚರೇ
ದೂರಾವನತ ಮಸ್ತಕಂ ಕ್ಷಿತಿತಳ ನಿಪಾತಿತ ಸಾಷ್ಟಾಂಗನಾಗಿ ಕಂಡು

ಮುಕುಳಿತ ಕರೋಪೇತಂ ದೂತಂ ಪ್ರಜಾಪತಿ ಪಾರಮಾ
ರ್ಥಿಕವಚನ ಸದ್ಭಾವಂ ಭಾವಂಗುಪಾಯನ ಭೂಷಣ
ಪ್ರಕರಮನಿವೆಂದೌತ್ಸುಕ್ಯಾಕ್ರಾಂತನಟ್ಟಿದೊನಾತ್ಮಪು
ತ್ರಕವಿವಹನ ಪ್ರೀತಂ ರೋಮಾಂಚಕಂಚುಕಿತಾಂಗಕಂ || ೩೦ ||

ಎಂದು ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನುಮಾದ ರಸವಾದಿಯಂತೆ ಜ್ವಳನಜಟಿ ರಾಗಿಸಿ ನೈಮಿತ್ತಿಕನಂ ಬರಿಸಿ ತದಾತನಮುಮ ತ್ಯಂತ ನೂತನಮುಮಪ್ಪುದೊಂದು ಲಗ್ನಮಂ ಪೇೞಿಮೆಂಬುದುಂ ಆತಂ ತನ್ಮುಹೂರ್ತಮೆ ಶುಭಮುಹೂರ್ತವೆಂಬುದುಂ ಅಂಬರಚರರಾಜನಂಬರಚರ ಗೋಚರೋಚಿತ ಪ್ರಸ್ಥಾನದಿಂ ಪಯಣಂಬೋಗಿ ತನ್ನ ಬರಮನಱಿದು ಪುರ ವರಮನಾಗಳಷ್ಟಶೋಭೆಗೆಯ್ಸಿ ಬೇಗಮಿದಿರ್ವಂದ ಪ್ರಜಾಪತಿ ಮಹೀಪಾಲನಂ ಜ್ವಳನಜಟಿಮಹಾರಾಜಂ ಯಥಾರ್ಹ ಪ್ರತಿಪತ್ತಿಯಿಂ ಕಂಡು ಮೈದುನ ನೀರ್ವರುಂ ಪುತ್ರಪುತ್ರೀಸಹಿತಂ ಪೊೞಲಂ ಪುಗುತಂ ಬಂದು ರಾಜಗೇಹಮಂ ಪೊಕ್ಕು ಕಱುಮಾಡದೊಳ್ ವಿದ್ಯಾಧರರಾಜನನಿರಿಸಿ ಸ್ವಯಂಪ್ರಭೆಗಂ ರಾಣೀ ವಾಸದ ಕನ್ನೆವಾಡದೊಳ್ ಪರಿವಾರಿಕಾ (ದೌವಾರಿಕಾ) ಸಮೇತಮಿರವಂ ಮಾಡಿ ಮಜ್ಜನಭೋಜನಾದಿ ದಾನಸನ್ಮಾನಂಗಳೊಳ್ ಜ್ವಳನಜಟಿಯಂ ಸಂತಸಂಬಡಿಸಿ ಪ್ರಜಾಪತಿ ಮಹಾರಾಜಂ ವಿವಿಧವಿನೋದ ದರ್ಶನಾನಂತರಂ ಪುಣ್ಯದಿನದೊಳ್ ತ್ರಿಪೃಷ್ಠನಂ ಸ್ವಯಂಪ್ರಭೆಯೊಳ್ ನೆರಪಿ

ಸಾರತರ ಕಲ್ಪತರುಗಮು
ದಾರೋತ್ತಮ ಕಲ್ಪಲತೆಗಮಭಿವೃದ್ಧಿಗೆ ಪೊ
ಯ್ಮಾರೆಱೆವಂತಾಗಿರೆ ಕೆ
ಯ್ಮಾರೆಱೆದರ್ ಖಚರಪತಿಯುಮವನಿಪತಿಯುಂ || ೩೧ ||

ಪೊಸಯಿಸಿದ ವಿವಾಹಕಲ್ಯಾಣ ವಿರಾಮದೊಳ್ ಜ್ವಳನಜಟಿಯು ಮರ್ಕಕೀರ್ತಿಯುಂ—

ತಲೆಬಳಿವಳಿಯೆಂಬೀಶ್ರವೆ
ನೆಲಕೆಲ್ಲಂ ಪರೆಯೆ ನುಡಿದು ವಿದ್ಯಾಸಹಿತಂ
ಕುಲಧನಸಹಿತಂ ಹರಿಕರಿ
ವಿಲಾಸಿನೀ ಸಹಿತಮಿತ್ತರುಳ್ಕೊಡಮೆಗಳಂ ॥ ೩೨ ॥

ಅಂತು ನಿರ್ವಹಿಸಿದ ವಿವಾಹವ್ಯತಿಕರದ ಪರೆದ ಪಡೆಮಾತನರ್ಧ ಚಕ್ರವರ್ತಿ ವಿಜಯಾರ್ಧಶೈಲಮೂರ್ಧವರ್ತಿ ರೇಖಾವಳೀ ವಿಲಾಸ ಸಮಗ್ರೀವನಶ್ವಗ್ರೀವಂ ಕೇಳ್ದು—

ರತ್ನಂಗಳೆರಡರೊಳ್ ಸ್ತ್ರೀ
ರತ್ನಮನೆನಗೆಂಬ ಬಗೆಯಿನಿರ್ದನ್ನೀ ಶ್ರೀ
ಪತ್ನೀಶತೆಯಂ ಬಗೆಯದೆ
ಯತ್ನಪರರ್ ದೇಸಿಗಂಗೆ ಕೂಸಂ ಕೊಟ್ಟರ್ ॥ ೩೩ ॥

ಕೊಟ್ಟೊಡಮೇಂ ಕನ್ನಿಕೆಯಂ
ಕೊಟ್ಟೊಂಗವಿದಾಗದೆಂದು ಕುಡೆ ಕೊಂಡೆನಗೇ
ಗೆಟ್ಟಪುದೆಂದು ಮನಂ ಪೊಲೆ
ಗೆಟ್ಟರೆ ಕೊಂಡಂಗವೆನಗಮಱಿಯಲ್ಕಕ್ಕುಂ ॥ ೩೪ ॥

ಎಂದಾಗಳ್ ವಿಳಯಾನಿಳೋಚ್ಚಳಿತ ಕೂಪಾರಾಶವಂ ಖೇಚರೇಂ
ದ್ರಂ ಭ್ರಷ್ಟಾಧರನಾತ್ಮಪೀಠತಳಮಂ ಪೊಯ್ದೆಟ್ಟು ನಿಂದಾಗಳಂ
ತೊಂದುಗ್ರಂ ಕರಿ ಪಟ್ಟದಿಂ ನಡೆವವೊಲಾಸ್ಥಾನದಿಂ ಬಂದು ನಿಂ
ದಂ ದೌವಾರಿಕಭೂಮಿಯೊಳ್ ಸ್ಫುರದುರುಶ್ಮಶ್ರೂತ್ಕರಂ ಭೀಕರಂ ॥ ೩೫ ॥

ಅಂತಲ್ಲಿಂ ಬಂದು ನಿಲ್ವುದುಂ ಸಂಭ್ರಮಾಕುಳನುಮುವನತೋತ್ತಮಾಂಗನುಮಾಗಿ ಬಂದು ಮುಂದೆ ನಿಂದು ಸೇನಾಗ್ರಗಣ್ಯಂ ಬೆಸನಂ ಪಾರುತ್ತುಮಿರೆ-

ಆ ಚಕ್ರಿಭ್ರೂಲತೆ ಸಚ
ರಾಚರಮಂ ನೆರಪವೇೞ್ ನೆರಪುವುದುಂ ರೂ
ಪ್ಯಾಚಳ ಗೋಚರ ಖಚರವ
ಹೀಚರರೊರ್ವೊದಲೆ ನೆರೆದರಪರಿಮಿತಬಲರ್ ॥ ೩೬ ॥

ನೆರೆದು ನಭೋಭೂವಳಯಂ
ತರಂಗದೊಳ್ ತಮ್ಮ ಹಯಮೆ ಹಯಮಾಗಿರೆ ಖೇ
ಚರರಾಜಂ ತಳರ್ದಂ ನೆಗ
ೞ್ದ ರಥಾವರ್ತಾದ್ರಿಗದ್ರಿ ತಳರ್ವಂತಾಗಳ್ ॥ ೩೭ ॥

ಅಂತು ರಥಾವರ್ತಾಚಳಮನೆಯ್ದಿ ಬೀಡಂಬಿಟ್ಟು ಮದುವೆನೆರೆದಿರ್ದ ವರನುಮಂ ನೆರೆದಿರ್ದ ನೃಪವರರುಮಂ ಮೂದಲಿಸಿ ಮಾತಂ ಬೂತುಮನಟ್ಟು ವುದುಂ ದರ್ಪಿಷ್ಠನಪ್ಪ ತ್ರಿಪೃಷ್ಠಕುಮಾರಕಂ—

ಕೊಲ್ವೆನರಾತಿಯನಿಂದೆ ಪೊ
ನಲ್ವರಿವಿನಮೆಯ್ದೆ ವೀರರಸಮೇಮಾತೊ
ಡ್ಡಲ್ವೇೞ್ಪುದಿಂದೆ ತೞಿದು ಪ
ಡಲ್ವಡಿಸನೆ ಖಚರಸೈನ್ಯ ವಿಷಮಾಟವಿಯಂ ॥ ೩೮ ॥

ಎಂದು ಗರ್ಜಿಸಿ ಬಂದೊನಂ ಮುಹೂರ್ತಮಾತ್ರಮಪ್ಪೊಡಂ ತಡೆಯಲೀಯದೆ ಬೂತಿಂಗೆ ಧನಮುಮಂ ದೂತಂಗೆ ಪ್ರಸಾದನಮುಮನಿತ್ತು ಪೋಗಲ್ವೇೞ್ದು ತಾನುಮಾತನ ಬೞಿವೞಿಯನೆ ಪಯಣದ ಮೇಲೆ ಪಯಣಂಬಂದು ರಥಾವರ್ತಮಹೀಧರಮನೆಯ್ದಿ ಬೀಡಂಬಿಟ್ಟು ಸ್ತ್ರೈಣದಿಂ ಪೆರ್ಚಿದ ಕೋಪೋದ್ರೇಕಮನಾಱಲೀಯದೆಯುಂ ಬೇಗಮನುವರಮಂ ಸಾರಲ್ವೇೞ್ದಿರುೞೊಳ್ ಕೊಳ್ಳಿವಿಸಿಸಿಯುಂ ರವಳಿ ಘೋಷಿಸಿಯುಂ ನಾಲ್ಕುಜಾವಮುಮನುವರಮನೆ ಸಮಕಟ್ಟುತ್ತುಮಿರೆಯಿರೆ

ವನಿತೆ ಪರಸ್ತ್ರೀ ಪೆಱರ್ಗಿ
ತ್ತನಿತಱೊಳಱಿದಱಿದುಮಳುಪನಾದನಶ್ವಗ್ರೀ
ವನ ಮಿಟ್ಟು ಪೊಟ್ಟುವಾರ್ದಪು
ದೆನಗೇಂ ತಡಮೆಂಬ ತೆಱದಿನಿನನುದಯಿಪುದುಂ ॥ ೩೯ ॥

ಇತ್ತ ತ್ರಿಪೃಷ್ಠನುಂ ವಿಜಯನುಮರ್ಕಕೀರ್ತಿಯುಂ ಪ್ರಜಾಪತಿಯುಃ
ಜ್ವಳನಜಟಿಯುಂ ಪಸರಿಸಿ ಸಮಕಟ್ಟ ಮೂಱುಮೊನೆಯಾಗೊಡ್ಡಿ ಸ್ವಯಂ
ಪ್ರಭೆಗಂ ಬೀಡಿಂಗಂ ತಮ್ಮ ನಚ್ಚುವ ವಿದ್ಯೆಗಳಂ ಕಾಪುವೇಟ್ಟು ಪರಿಚ್ಛೇದಕ್ಕೆ
ವಂದು ನಿಂದಾಗಳ್—

ಆ ಸಮಯದೊಳರಿಬಲ ಸಂ
ತ್ರಾಸಿ ಬಲಿಷ್ಠಂ ತ್ರಿಪೃಷ್ಠನಶ್ವಗ್ರೀವೋ
ದ್ಭಾಸಿಪ್ರದೀಪಮಂ ಕಿಡೆ
ಬೀಸುವವೋಲನುವರಕ್ಕೆ ಕೆಯ್ವೀಸುವುದುಂ ॥ ೪೦ ॥

ಎರಡು ಬಲಮುಂ ಘೋರೆಂದಾರ್ದಾರ್ದು ಖೇಚರ ಭೂಮಿಗೋ
ಚರ ಸಮುದಿತಂ ಬಾನೊಳ್ ಭೂಭಾಗದೊಳ್ ಕಿಡಿಗುಟ್ಟಿದಂ
ತಿರೆ ಪೆಣೆದು ಬಿಲ್ವಿಲ್ಲಂ ತೇರ್ ತೇರನಾನೆಯುಮಾನೆಯಂ
ಹರಿ ಹರಿಯನಾಂತಾಗಳ್ ನಿಂದಣ್ಮಿ ಮಣ್ಮಿಱಿಯಪ್ಪುದುಂ ॥ ೪೧ ॥

ತೊಟ್ಟನೆ ಕೊಳೆ ಚದುರಂಗದ
ಮುಟ್ಟಂ ಕೆದಱಿದವೊಲಂತಕಂ ಪೆಣನಂ ಸಾ
ಲಿಟ್ಟವೊಲಿರೆ ಸೈನ್ಯಂ ಪಡ
ಲಿಟ್ಟವೊಲಿರೆ ಪರಿವ ಪಿರಿಯ ಕರಿಯಂ ವಿಜಯಂ ॥ ೪೨ ॥

ಕಂಡಣೆದು ನೂಂಕಿ ಮದವೇ
ತಂಡಮನಿದಿರಾದ ವಿಪುಳಕಂಠನಿನಿಸಂ
ಕೊಂಡಿರದೆ ಕೊಂದು ಗೆಲ್ಲಂ
ಗೊಂಡಂ ಬಗೆಗೊಳ್ವ ತೆಱದೆ ವಿಜಯಾಂಗನೆಯಂ ॥ ೪೩ ॥

ಅಂತು ವಿಜಯನಶ್ವಗ್ರೀವನ ಮಗನಪ್ಪ ವಿಪುಳಕಂಠನಂ ತನ್ನವಾರ್ಯ ವೀರ್ಯಕ್ಕೆ ಮುಡಿಗಿಕ್ಕುವಂತಿಕ್ಕೆ ಕೆಯ್ಮಿಕ್ಕಳಲೊಳನಿಬರುಮೊಂದಾಗಿ ಬಂದು ತಾಗೆ ದಿವ್ಯಚಾಪಂ ಪೊಱಮುಯ್ವಂ ತಾಗೆ—

ತೆಗೆನೆಱೆದು ಚಿತ್ರಮೂಲಾ
ದಿಗಳುಮನೋರೊಂದೆ ಸರಲೊಳೋರೊರ್ವರನಾ
ವಗಮೆಚ್ಚಂತಕಮುಖಮಂ
ಪುಗಿಸಿದನಾರಾಂಪೊರುಱದೆ ಹಲಿಯಂ ಕಲಿಯಂ ॥ ೪೪ ॥

ಅಂತು ಬಲದೇವನಶ್ವಗ್ರೀವನ ತಮ್ಮನಪ್ಪ ಸುಕಂಠನುಮಂ ಮೃತ್ಯು ಕಂಠೀರವಕ್ಕೆ ಗ್ರಾಸಂಮಾಡಿ ಮಗುಟ್ದು ಹಲಾಯುಧಮನೆತ್ತಿಕೊಂಡು—

ಧೃತವಿಷಮಬಾಣನಂ ಜಿನ
ಪತಿ ಗೆಲ್ದವೊಲಾತನಂ ಪ್ರಜಾಪತಿ ಧರಿಣೀ
ಪತಿ ಕಾಮದೇವನಂ ಗೆ
ಲ್ದು ತಳರದನಿವಾರ್ಯ ವೀರ್ಯಮಂ ಪೊಸಯಿಸಿದಂ ॥ ೪೫ ॥

ಅಂತಾ ಸಂಗ್ರಾಮದೊಳ್ ತನ್ನನುಜತನುಜ ಜಾಮಾತೃವರ್ಗಂ ಪಡಲ್ವ
ಟ್ಟಂತಾಗಳ್ ಮೊಟ್ಟಿಗ್ಗೆ ತಟ್ಟುಗ್ರದುಮಣಿದಿಭಮಂ ಕೀಱಿ ಬಿಟ್ಟಕ್ಕಿಪಾಂಗ
ಪ್ಪಂತಶ್ವಗ್ರೀವನೆಟ್ಟಿಂದಹಿತನ ಮೊನೆಯೆತ್ತೆತ್ತಣಿಂ ಪೇಟ್ ತ್ರಿಪೃಷ್ಠಂ
ಭ್ರಾಂತಾತ್ಮಂ ತೋಱು ತೋಱೆಂದೊದಱಿ ಗಜಮಹಾಪೃಷ್ಠನಿಷ್ಠಂ
ತ್ರಿಪೃಷ್ಠಂ ॥ ೪೬ ॥

ಇದಿರಂ ಪರಿಯಿಸಿ ನಿಜಮದ
ರದನಿಯನಿತ್ತಿತ್ತ ಪರಿಯಿಸಣ್ಮಿಣ್ಮಿಂದಾ
ದ್ರೋಣದವಿಸೆ ಸೋನೆಯ ಕೋಲ್ಗಳ
ಪುದುವಿನ ಕಿಱುಮೊರಡಿಯನ್ನನಾದೊಂ ಖಚರಂ ॥ ೪೭ ॥

ಅಂತು ಕಡುಗೆಯ್ಯನಾಗಿ ಶೀಘ್ರಸಂಧಾನಮಿಸುವಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ ಕಿಡೆ —

ಎನಿತೆನಿತಿಸುವಂಬುಗಳನಿ
ತನಿತಱೆನವರಿದು ತಱಿದು ನೆರೆದಶ್ವಗ್ರೀ
ವನ ಬಿಲ್ಲಗೊಣೆಯುಮಂ ಭೋಂ
ಕನೆ ಕುಱಿದಱಿದಱಿದನಬ್ಜಜಠರಂ ಧುರದೊಳ್ ॥ ೪೮ ॥

ಅಂತು ಬಿಲ್ಲ ಗೊಣೆಯುಮಂ ಪಱಿವುದುಂ ದೇವಚಾಪದಂತೆ ನಿರ್ಗುಣ ಮಪ್ಪ ಬಿಲ್ಲನೀಡಾಡಿ ನಾಡಾಡಿಯಲ್ಲದಣ್ಮು ಕೆಯ್ಗಣ್ಮಿ ಪೊಣ್ಮೆ ತನ್ನುಳ್ಳ ವಿದ್ಯೆ ಗಳಂ ಬೆಸಸಿ ಕಾದುವಾಗಳ್—

ಅಂತಾ ವಿದ್ಯೆಗಳಂ ನರ
ಕಾಂತಕನಲಸದೆ ವಿಷಂ ವಿಷಸ್ಯಾ ಷಧಮೆಂ
ಬಂತಿರೆ ವಿದ್ಯೆಗಳಿಂ ಗೆ
ಲ್ದಂ ತನ್ನಂ ಮುನ್ನೆ ಮೆಚ್ಚದೊಂ ಮೆಚ್ಚುವಿನಂ ॥ ೪೯ ॥

ಅಂತಶ್ವಗ್ರೀವಂ ನಿರಾಯುಧನುಂ ನಿರ್ವಿದ್ಯನುಮಾಗಿ ಕೆಲನಂ ನೋಡಿ ತನ್ನ ದಕ್ಷಿಣಪಕ್ಷದೊಳಿರ್ದ ಚಕ್ರಮಂ—

ಕೊಂಡಿಡೆ ಶಾರ್ಙಧರಂ ಕಡ
ಗೊಂಡೊಂ ಕುಡುವಂತೆ ಮಗುಟ್ಟಿದಂ ಕೊಂಡಿಡೆ ತ
ಚ್ಛಂಡಾರಿಶಿರಂ ಸೆಂದರ
ದುಂಡಿಗೆ ಧರೆಗೆನಿಸಿ ಮುಂದೆ ಬಿಟ್ಟುದು ಹರಿಯಾ ॥ ೫೦ ॥

ಅಂತಶ್ವಗ್ರೀವನಂ ಕೊಂದು ತನ್ನ ಕೊಂದ ಕೊಳ್ಗುಳಕ್ಕೆ ಬಂದ ಸ್ವಯಂ ಪ್ರಭೆಗೆ ತ್ರಿಪೃಷ್ಠನಶ್ವಗ್ರೀವನ ಕಬಂಧಮಂ ಸುಟ್ಟತೋಱಿ ನೋಡು ನೋಡೆಂದು—

ಬಲದ ಮದದ ಬಲ್ಲಾಳೆನ್ನ ಕೆಯ್ಪಿಟ್ಟ ನಿನ್ನಂ
ಕೊಳಲುಮದಿರದೆನ್ನೊಳ್ ಕಾದಲುಂ ಬಂದು ಚಕ್ರಂ
ಕೊಳೆ ಕೆಡೆದಿವನಶ್ವಗ್ರೀವನೀ ಯಟ್ಟೆಯಿಂದು
ಚ್ಚಳಿಸಿದುದು ಶಿರೋಂಭೋಜಾತಮಂಭೋಜನೇತ್ರೇ ॥ ೫೧ ॥

ಎಂದು ಮತ್ತಮಣ್ಮಿ ಸತ್ತರ ಗಂಡಮಾತನುಪಮಾತೀತಂ ಮಾಡಿ ಪೊಗಟ್ದು ಕೊಳ್ಗುಳನಂ ಬೆಳಸಿ ತದ್ವಿದ್ಯಾಧರರಾಜಂ ಮೊದಲಾಗೆ ಕಾದಿ ಸತ್ತ ನೆಗಟ್ತೆಯ ಖೇಚರರ್ಗೆಲ್ಲಂ ಶರೀರಪೂಜಾಪೂರ್ವಕಂ ಸಂಸ್ಕಾರ ವಿಧಿಯಂ ನಿರ್ವರ್ತಿಸಿ ದಕ್ಷಿಣೋತ್ತರ ಶ್ರೇಣಿಗಳೆರಡುಮಂ ತಮ್ಮ ಮಾವಂಜ್ವಳನಜಟಿಗೆ ಕೊಟ್ಟು ತಾನುಂ ತ್ರಿಖಂಡಮಂಡಲಾಧಿಪತ್ಯಮಂ ತಾಳ್ದಿ ಪೌದನಪುರಮಂ ಪೊಕ್ಕು ಜಯಮೆಂಬ ಚಕ್ರರತ್ನಮಂ ಶಾರ್ಙಮೆಂಬ ಚಾಪಮುಮಮೋಘ ಮುಖಿಯೆಂಬ ಶಕ್ತಿಯುಮಂ ಜಯಾನಂದಮೆಂಬ ಖಡ್ಗಮುಮಂ ಕೌಮೋದಕಿಯೆಂಬ ಗದೆಯುಮಂ ಪಾಂಚಜನ್ಯಮೆಂಬ ಶಂಖಮುಮಂ ಕೌಸ್ತುಭಮೆಂಬ ಆಭರಣಮುಮಂ ಪೂಜಿಸಿ ತಾನುಂ ಚಕ್ರವರ್ತಿಪದದೊಳ್ ವಿರಾಜಿಸಿ ಸುಖಮರ ಸುಗೆಯ್ಯುತ್ತಿರ್ದನನ್ನೆಗಂ—

ಜ್ವಳನಜಟಿ ನಿಜಪುರೋಪವ
ನಳಿನೀಳೆ ಮಧುಮಾಸ ವಿರತಿಯೊಳ್ ಮಸುಳ್ದಿರೆ ಕಂ
ಟಳಿಸಿದ ಮೆಯ್ವೆರಸಿನಿಸಾ
ಕುಳನಾದೊಂ ಬಗೆದು ನೋಡಿ ಸಂಸೃತಿವಿಧಿಯಂ ॥ ೫೨ ॥

ದಿವಸದೊಳೆ ತರುಗಳುಂ ಮಾ
ರ್ದವಮಂ ಕೆಯ್ಕೊಳ್ಗುಮಲ್ಲದಂದೊಣಗುಗುಮಿಾ
ಭವವಾರಿಧಿಯೊಳ್ ಮುಟುಗಿದ
ವಿವೇಕಶೂನ್ಯಂಗಸಾರಮಿಂತಿದೆ ಸಾರಂ ॥ ೫೩ ॥

ಎಂದು ತತ್ವಭಾವನೆಗೆ ಮನಂದಂದು ರಾಜ್ಯದೊಳರ್ಕಕೀರ್ತಿಯನಭಿಷೇಕಪೂರ್ವಕಂ ನಿಱಿಸಿ ವಿನೇಯಜನಾಭಿನಂದರಪ್ಪಭಿನಂದನ ಗುರೂಪಾಂತ

ದೊಳ್ ನಿಶ್ಚಳಿತತಪಶ್ಚರಣನಿರತನಾದೊಂ ತದಗ್ರಮಹಿಷಿ ವಾಯುವೇಗೆಯುಂ ಶ್ರೀಮತಿ ನಾಮಾರ್ಯಿಕಾ ಸಮೀಪದೊಳ್ ಮೋಕ್ಷ ಹೇತುಭೂತ ಜೈನದೀಕ್ಷೆಯಂ ಕೆಯ್ಕೊಂಡಳದಂ ಕೇಳ್ದಿತ್ತ ವಿಜಯನನಾಧಿರಾಜ್ಯದೊಳ್ ನಿಱಿಸಿ—

ಪ್ರಜಾಪತಿನೃಪಂ ಜಗತ್ಪತಿಪದಕ್ಕಡರ್ಪಪ್ಪನೂ
ನಜೈನ ಶುಭದೀಕ್ಷೆಯಂ ಮನದೆ ಕೊಂಡು ಕೈಕೊಂಡನಂ
ದಜೇಯ ವಿಹಿತಾಸ್ರವಾಖ್ಯ ಮುನಿಮುಖ್ಯ ಪಾದದ್ವಯಾಂ
ಬುಜಾಂತಿಕದೊಳಂತೆ ಭವ್ಯರಿರರೀ ಭವಾರಣ್ಯದೊಳ್ ॥ ೫೪ ॥

## ೫. ರತ್ನಮಾಲೆಯನುದ್ಭಾಸಿಸಿದಂ ಸ್ವಯಂವರದೊಳಾ ಸೌಜನ್ಯನಕಂದಾಂಕುರಂ

ಗಗನಚರ ಸಕಲ ಸಾಮ್ರಾ
ಜ್ಯಗಾಮಿಯಪ್ಪರ್ಕಕೀರ್ತಿಗಂ ಜ್ಯೋತಿರ್ಮಾ
ಲೆಗಮಮಿತತೇಜನೆಂಬೊಂ
ಮಗನಾದೊಂ ಖೇಚರೇಂದ್ರ ಬಗೆಗೊಳ್ವುದಿದಂ ॥ ೧ ॥

ಎನ್ನಿಂ ಕಿಱಿಯಳ್ ಸಗ್ಗದ
ಕನ್ನೆಯರಂ ಹಾವಭಾವ ವಿಭ್ರಮಗತಿಯಿಂ
ದನ್ನಗುವಳ್ ಮುದದಿಂ ಸಿರಿ
ಯನ್ನಳೆನೆ ಸುತಾರೆಯೆಂಬಳಂಬರಗಮನಾ ॥ ೨ ॥

ಶ್ರೀವಿಜಯಂ ವಿಜಯಂ ನವ
ಭಾವಜ್ಯೋತಿಃ ಪ್ರಭಾಖ್ಯೆಯೆಂಬರ್ ಮಕ್ಕಳ್
ಮೂವರ್ ಕೊಂಡಾಟದ ಮಾ
ದೇವಿಗಮಂವರ್ಧ ಚಕ್ರವರ್ತಿಗಮಾದರ್ ॥ ೩ ॥

ಆಗಿ ಸುಖದಿಂ ಬಳೆಯೆ—

ಧರೆಯಂ ಪಾಲಿಸಿ ಪದ್ಮೋ
ದರನೆಣ್ಬತ್ತೊಂದು ಲಕ್ಕಬರಿಸಂ ಬಟ್ಟಾ
'ಪರಮಾಯುವ ತಾಕಲೊಳ
ರ್ಧರಾತ್ರದೊಳ್ ಕಟುದು ಸಪ್ತಮಾವನಿಗಿೞಿದೊಂ ॥ ೪ ॥

ತದ್ವಿಯೋಗ ದುಃಖದೊಳ್ ಮಗಂ ಶ್ರೀವಿಜಯಂಗೆ ಪಟ್ಟಮಂ ಕಟ್ಟಿ ಪಿಹಿತಾ ಸ್ರವಗುರುಗಳ ಚರಣನಳಿನ ಸಮಿಾಪದೊಳ್—

ರಾಜ್ಯಕ್ಕಂ ತ್ರಿಭುವನ ಸಾ
ಮ್ರಾಜ್ಯಕ್ಕಂ ಬಗೆಯೆ ಹಸ್ತಿಮಶಕಾಂತರಮೆಂ
ದಿಜ್ಯಾಪುರಸ್ಸರಂ ಪ್ರ
ವ್ರಜ್ಯಮನವಯವದೆ ಹಲಧರಂ ಧರಿಯಿಪುದುಂ ॥ ೫ ॥

ವರಮುಕ್ತಿಪ್ರಮದೆ ಪತಿಂ
ವರೆ ಪುರುಷನನಱಸಿಕೊಳ್ವವೋಲ್ ವಿಜಯಮುನೀ
ಶ್ವರನಂ ಕೆಯ್ಕೊಂಡಳ್ ದೇ
ವರಪಲವು ತೆಱದ ಪಱಿಗಳೊಡನೆಸೆವಿನೆಗಂ ॥ ೬ ॥

ಅಂದರ್ಕಕೀರ್ತಿಯುಮಮಿತತೇಜನಪ್ಪೆನಗೆ ತನ್ನ ರಾಜ್ಯಮನಿತ್ತಭಿನಂದನ ಮುನಿಪ್ರಧಾನಪಾರ್ಶ್ವದೊಳಾಶಾಂಬರನಾದೊನಂದಿನ ಶ್ರೀವಿಜಯನೈ ನೀಂ, (ನಿನ್ನ) ಚಕ್ರೇಶ್ವರರಾಜ್ಯದೊಳ್ ನಿಂದು ಶ್ರೀಗಂ ವಿಜಯಕ್ಕಂ ಮೊತ್ತಮೊದಲಿಗನಾಗಿಯೆ ಸಮಸ್ತರಾಜಕಮನೆಱಗಿಸಿ ಶ್ರೀವಿಜಯನೆಂಬ ಪೆಸರನನ್ವರ್ಥಂ ಮಾಡಿಯಂದಿನ ನಿನ್ನಪ್ಪ ಚಕ್ರವರ್ತಿಯತನಯಂ—

ಜ್ಯೋತಿಃ ಪ್ರಭಾಸ್ವಯಂವರ
ಜಾತೋತ್ಸವ ವಿಧಿಗೆ ಸಾನುಜಂ ಶ್ರೀವಿಜಯಂ
ಖ್ಯಾತಿಯ ರಾಜಕುಮಾರ
ವ್ರಾತರ್ಕಳ್ಗೞ್ತೆವೆರಸು ಬೞಯುಟ್ಟುವುದುಂ ॥ ೭ ॥

ಎರೆಗೆಱಗುವ ಕಿಱುಮೀನಂ
ತಿರೆ ಕನ್ಯಾಮಿಷಕೆ ರಾಜನಿಕುರಂಬಂ [ಬಂ]
ದಿರೆ ಬಯಸಿ ಬರಿಸಿದೊಂ ಸೋ
ದರಮಯ್ದುನನಮಿತತೇಜನಂ ಶ್ರೀವಿಜಯಂ ॥ ೮ ॥

ಬಂದಮಿತತೇಜನುಪವನ
ದೊಂದೆಡೆಯೊಳ್ ಬೀಡುವಿಡುವುದುಂ ಶ್ರೀವಿಜಯಂ
ಬಂದನಿದಿರಂ ಹಿಮಾಂಶುಗೆ
ಮಾಂದಿರದಿದಿರಪ್ಪ ತೆಱದಿನಂಬುಧಿ ಸಲಿಲಂ ॥ ೯ ॥

ಅಂತು ಬಂದಮಿತತೇಜಂ ಬೆರಸು. ಶ್ರೀವಿಜಯಂ ರಾಜಭವನಮಂ ಪುಗುವುದುಂ ಅದಱ ಕೆಲದೊಳ್ ಸಮ್ಮೇದಶಿಬಿರನಿವೇಶದೊಳಂಬರೇಚರರಾಜಂ

ಬಗ್ಗವಳ್ಳಿಯ ಬಳ್ಳಿಗಾವಣದೋಳಿಯಿಂ ಸೊಗಯಿಪ್ಪ ಸ
ಮ್ಯಗ್ಗವಾಕ್ಷದ ವಂಕದಾರದ ಕೇತಕಿರ್ಗಯಿಸೊಂದಿ ನಿಂ
ದಗ್ಗಳಿಕ್ಕೆಯ ನೀಟ್ಟು ನೀಳ್ದ ನಿವೇಶದೊಳ್ ಮದನಂ ಮನ
ಕ್ಕೆಗ್ಗು ಪೊರ್ದದ ರೂಪಿನೊಳ್ ನೆಲಸಿರ್ಪವೊಲ್

ಸುಖಮಿರ್ಪಿನಂ ॥ ೧೦ ॥

ಮನೆಗಾ ಶ್ರೀವಿಜಯಂ ಬಿ
ದ್ದಿನನಲ್ಲಿಗೆ ರಾಜನಮಿತತೇಜಂ ವಲಮಂ
ಬಿನೆಗಂ ಶ್ರೀವಿಜಯಂ ಮೈ
ದುನಂಗೆ ನಿಜಲಕ್ಷ್ಮಿಯಂ ನಿವೇದಿಸಿ ನೆಗಟ್ದಂ ॥ ೧೧ ॥

ಆನೀತಾಖಿಳ ರಾಜಲೋಕಮನನರ್ಘಾಕಾರಮಂ ಮಿಕ್ಕ ಕ
ನ್ಯಾನೂನೋಚಿತರತ್ನಮಂ ತನಗೆ ಮಾಡಲ್ಕೆಂದು ಬಂದಿರ್ದನೀ
ಶ್ರೀನಾಥಂ ದಲವೋಘಮೆಂಬ ಬಗೆಯಿಂ ಕಣ್ಣೊಳ್ ತೋಟಿಲ್ಪಂದದಿಂ
ದಾ ನಿದ್ರಾಂಗನೆ ಸೂಱೆಗ್ಗೆವಂದಳಿರುಳೊಳ್ ತತ್ಖೇಚರಾಧೀಶನಾ ॥ ೧೨ ॥

ಆಗಳ್

ಉಪ್ಪವಡಿಸುವುದುಮಱಿಕೆಯ
ಪಪ್ಪಕರೊಡನಾಡಿಗಳ್ ಪ್ರಭೋಧಿಸಿದರ್ ಮೇ
ಲಪ್ಪ ಪದರಚನೆಯಿಂ ದೊರೆ
ಯಪ್ಪ ಮಹಾಮಂಗಳಪ್ರಭೋಧನೆಯಿಂದಂ ॥ ೧೩ ॥

ವಂದಿವೃಂದಾರಕವೃಂದಂ ಅಭಿನಂದಿಸುವ ಮಂಗಳವಚನರಚನೆಗಳಿಂದಂ ಕುಮಾರನುರ್ವರಾಸ್ಯತಿಲಕಂ ಗಂಗಾಸಿಕತಿಳತಳದೊಳೊಱಗಿ ತದುದ್ದೇಶದಿಂ ಕಪಿಲಾಕರೇಣುವೆರಸಿ ಪುಂಡರೀಕಗಜನೇಟ್ಪಿಂತೆ ಸೂಟಿರಸಿವೆರಸು

ಸೆಜ್ಜೆಯಿನೆೞ್ದು ಕುಳ್ಳಿರ್ದು ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ ಶ್ರೀವಿಜಯನ ಬೞಿ ಬರ್ಪುದುಂ ಕುಶಲವಿರಚಿತಾನುರೂಪ ವೇಷಭೂಷಣ ನಾಗಿ ರಾಜಸಮಾಜವಿರಾಜಮಾನಮಮಂ ಸ್ವಯಂವರಪ್ರದೇಶಮನೆಯ್ದಿ ವಂದು ಎರಡೋಳಿಯ ಚೌಪಳಿಕೆಗಳೊಳಮೋಳಿಯೊಳೆಯ್ದೆ–

ಹರಿಪೀಠಸ್ಥಿತರಂ ಭಾ
ಸುರ ರತ್ನಮರೀಚಿಮೇಚಕಿತ ತನುಗಳನಾ
ವರ ಜಿನಚಂದ್ರಂ ಕಂಡು
ಸುರೇಂದ್ರವಿಭವರನಿಳಾಧಿರಾಜಾತ್ಮಜರಂ ॥ ೧೪ ॥

ಕಂಡು ಮಂಚೋಭಯಾಂತರ ವೀಥಿಯೊಳಗನೆ ಬರ್ಪ ದೀನಜನತಾ ಕಲ್ಪಾಂಘ್ರಿಪನಂ–

ನನೆಯ ಸರಲ್ಗಳುಮಂ ಕ
ಬ್ಬಿನಬಿಲ್ಲುಮನೊಲ್ಲದಿಲ್ಲಿಗವತರಿಸಿದನಂ
ಗನನೆಯ್ದೆ ಕಾಣ್ಬವೋಲ್ ಕಂ
ಡು ನೃಪಕುಮಾರರ್ ಸ್ವಯಂವರಾಶೆಯನುೞಿದರ್ ॥ ೧೫ ॥

ಅಂತನಿಬರ ಮನಕ್ಕೆ ತಲ್ಲಣಂ ಬರ್ಪಂತೆ ಬಂದು ಪರಾರ್ಥ್ಯರತ್ನರಚಿತಾನೇಕ ಹರಿವಿಷ್ಟರದ ಮೇಗೆ ಕುಳ್ಳಿರ್ದು ರತ್ನಮಂಡನಾಯೋಗ ಪರಿಗೃಹೀತ ಸುರೇಂದ್ರ ಕರೀಂದ್ರ ಪೃಷ್ಠಗತನಪ್ಪಮರೇಂದ್ರನನೆ ಪೋಲ್ತುಂ ಸೌಜನ್ಯ ಕಂದಾಂಕುರನಿರ್ಪುದುಂ–

ಆಗಳ್ ಸೂತರ್ ಸ್ವಕೀಯಾನ್ವಯದರಸುಗಳಂ ಬಣ್ಣಿಸುತಿರ್ಪಿನಂ ದಿ
ಗ್ಭಾಗಂ ಮಾಂಗಳ್ಯತೂರ್ಯಸ್ವನದೊಳೆ ಬಧಿರೀಭೂತಮಪ್ಪನ್ನೆಗಂ ಪೊ
ತ್ತೀಗಳ್ ಬರ್ಕೆಂಬುದುಂ ಶ್ರೀವಿಜಯನ ಮತದಿಂದೆಯ್ದೆ ಕೆಯ್ಗೆಯ್ದುಮಾಗಳ್
ಬೇಗಂ ಜ್ಯೋತಿಃಪ್ರಭಾಕನ್ನಿಕೆ ಮಸಕದೆ ಕೊಲ್ಪಾನೆ ಬರ್ಪಂತೆ
ಬಂದಳ್ ॥ ೧೬ ॥

ಅಂತು ರಥಮುಂ ಮನೋರಥಮುಂ ನಿಮಿರೆ ವಿವಾಹಮಂಗಳ ವೇಷ ಸನಾಥೆಯಾಗಿ ಮಂಚಾಂತರ ರಾಜಮಾರ್ಗಮಂ ಪೊಕ್ಕು ಪ್ರತಿವರರುಮಂ ನೋಡಿ–

ಆದಿಬ್ರಹ್ಮವಿಧಾನದಿ
ನಾದತಿಶಯ ಸೃಷ್ಟಿಯೆನಿಸಿದಾ ಕನ್ನಿಕೆಗಿಂ
ದ್ರಾದಿ ನೃಪಮತಿ ಗಳಿರದಿದಿ
ರ್ವೋದುವು ತನುವಿರೆ ಮದೇಭರಿಪುವಿಷ್ಟರದೊಳ್ ‖ ೧೭ ‖

ಆ ರಾಜಕುಮಾರರ ಶೃಂ
ಗಾರಾಭಿನಯಂಗಳೊಡನೆ ನೆಗೞ್ದುವು ಪಲವುಂ
ಮಾರುತಹತ ಮಹಿರುಹ ಶೋ
ಭಾರುಚಿರಂಗಳ್ ಸ್ವಯಂವರಾಸ್ಥಾಯಿಕೆಯೊಳ್ ‖ ೧೮ ‖

ಜ್ಯೋತಿಃಪ್ರಭೆಯಂ ಪ್ರತೀಹಾರಂ ಮಗಧಾಧಿರಾಜಾಭಿಮುಖಂ ಮಾಡಿ
ಕ್ಷಿತಿನಾಥರ್ ಪಲರುಳ್ಳೊಡಂ ಬಗೆದುಕೇಳ್ ನೀನಕ್ಕ ರಾಜಾನ್ವಯ
ಸ್ಥಿತಿ ವಿಶ್ವಾವನಿಗೀತನಿಂದೆ ದೊರೆಯಾಯ್ತೆಂತೆನ್ನ ಸಜ್ಯೋತಿರು
ನ್ನತಿ ಋಕ್ಷಗ್ರಹ ತಾರಕಾನಿಕರದಿಂದೇನಾದುದೇ ರೋಹಿಣೀ
ಪತಿಯಿಂದಾದುದು ರಾತ್ರಿಗಂಬುಜದಳವ್ಯಾಲೋಲಲೀಲೇಕ್ಷಣೇ ‖ ೧೯ ‖

ಅನುದಿನ ವಿಗತವೃಜಿನಂ
ಜಿನೇಂದ್ರ ಪೂಜಾವಿಧಾನಮಂ ಮಾಡಿ ಮಹೇಂ
ದ್ರನುಮನೊಡನಿಱಿಸಿ ನಾಕಮ
ನನಾಥವೆನಿಸಿದನನೂನಪೀನನಿತಂಬೇ ‖ ೨೦ ‖

ನೆರೆದೀತನೊಳವನಿಪ ಸುಂ
ದರನೊಳ್ ಪುಗೆ ರಾಜಗೃಹಗೃಹಾಳಿ ಗವಾಕ್ಷಾಂ
ತರಕೃತ ಸರೋಜಮೆನಿಸುವ
ಪುರಾಂಗನಾ ನಯನಸುಖಮನೊದವಿಸು ಸುದತೀ ‖ ೨೧ ‖

ಎಂದ ಧಾತ್ರೀಪುತ್ರಿಯ ಮಾತನೆಯ್ದೆ ಕೇಳ್ದಾತನಂ ನೋಡಿ—

ಪೊಟವನೆ ಭಾವಿಸದೇೞಿಸಿಯು
ಮಿೞಿಯೆಯುಮಾಗಳ್ ನಖಾಗ್ರ ವಾಲಾಗ್ರದಿನೊಂ
ದುೞಿಯದವಯವಮನವಯವ
ಮುೞಿಯದುಮೆನಿಸದೆ ಕುಮಾರಿ ನೋಡಿದಳಿನಿಸಂ ॥ ೨೨ ॥

ನೋಡಿ–

ವರನ ಕೊರಲಳವಿಗೆತ್ತಿ
ರ್ದ ರತ್ನನವಮಾಲೆ ನೇಲೆ ನೆಲನಂ ನೋಡು
ತ್ತಿರೆ ಕನ್ನಿಕೆ ಧಾತ್ರಿಜೆಯಂ
ತಿರದೆ ಕುಮಾರಿಕೆಯ ಮನದ ಪರಿಚಾರಿಕೆಯಂ ॥ ೨೩ ॥

ರಥಮಂ ನಡೆಯಿಸೆಂಬುದು.—

ಮತ್ತಿತ್ತಂ ಲಲಿತಾಂಗ [ನಂಗ] ವಿಷಯಾಧೀಶಂ ಸುರಸ್ತ್ರೀಜನೋ
ದಾತ್ತ ಪ್ರಾರ್ಥಿತಯೌವನಂ ದಿವಿಜರಾಜಿತ್ವಂತರಾಸ್ಥಕ್ಕೆ ಮೆ
ಯ್ವೆತ್ತತ್ತೀಪರಮೇಶ್ವರಂಗೆ ಗಜಶಿಕ್ಷಾಸೂತ್ರದಿಷ್ಟಕ್ಕೆ ಮೂ
ವತ್ತಿರ್ವರ್ ನಯಕಾರರೀತನ ಗಜವ್ರಾತಂಗಳಂ ತಿರ್ದುವರ್ ॥ ೨೪ ॥

ಅರಿಯುವತಿ ಬಾಷ್ಪಬಿಂದೂ
ತ್ಕರಂಗಳಪಸೂತ್ರಹಾರಮಂ ಸ್ತನದೊಳ್ ಪೋ
ಲ್ತಿರೆ ತವಿಸೆ ಪಗೆವರಂ ಸಕ
ಳ ರಾಜ್ಯಮಂ ವೀರಭೋಜ್ಯನೆನಿಸಿದನೀತಂ ॥ ೨೫ ॥

ಈತಂ ನಿಸರ್ಗಭಿನ್ನ ನಿ
ಕೇತನಮಂ ಶ್ರೀಸರಸ್ವತೀದ್ವಯಮಂ ತಂ
ದೋತೊಂದೆ ಮೆಯ್ಯೊಳಿರಿಸಿದ
ನೇತಡವವರೊಳ್ ತೃತೀಯೆಯಾಗಿರು ನಿರುತಂ ॥ ೨೬ ॥

ಎಂಬುದುಮಂಗರಾಜನೊಳಿದಿರ್ಚಿದ ಭಾವನೆ ಪೊಚ್ಚಮಾಗೆ ಹೇ
ಮಾಂಬುರುಹಾಸ್ಯೆ ಸೋಲ್ವುದೆನೆ ಕನ್ನಿಕೆ ಜನ್ಯೆಯನೊತ್ತಿ ಪೋಯ್ತು ಯಾ
ನಂ ಬಿಡದಾತನೊಳ್ ಸಹಸಮಾಗದು ಭಾವಕೆ ಕೂಟಮಾದುದಿ
ಲ್ಲೇಂ ಬಗೆ ನಾಡೆ ಭಿನ್ನರುಚಿಯೋ ರಮಣೀ ರಮಣೀಯ ಸೃಷ್ಟಿಯಾ ॥ ೨೭ ॥

ದಾದಿಯುಮಾ ಸುಕುಮಾರಿಕೆ
ಗಾದರದಿನವಂತಿನಾಥನಂ ತೋಱಿದಳಿಂ
ದೂದಯಕಾಂತನನಹಿತನಿ
ಷೂದನನಂ ದಿವಿಜರಾಜಲೀಲಾಸ್ಪದನಂ ॥ ೨೮ ॥

ಈತನ ಯಾನದೊಳಗ್ರ ಪ
ದಾತಿ ಪದೋದ್ಧೂತಧೂಳಿ ಸಾಮಂತಶಿಖಾ
ನೂತಮಣಿ ತರಣಿಕಿರಣ
ವ್ರಾತಕ್ಕಸ್ತಮಯ ಸಮಯಮಂ ಪುಟ್ಟಸುಗುಂ ॥ ೨೯ ॥

ಈ ನವಯೌವನನೊಡನೆ ಮ
ನೋನಯನ ಶರೀರಸುಖಮನನುಭವಿಸುಗೆ ಶಿ
ಪ್ರಾನದಿಯೆರಡುಂ ತಡಿಯು
ದ್ಯಾನಪರಂಪರೆಯೊಳತನುತಸು ತನುಲತಿಕೇ ॥ ೩೦ ॥

ಎನೆಯುಂ —

ಜ್ಯೋತಿಃಪ್ರಭೆ ಖರಕಿರಣ
ಜ್ಯೋತಿಯೊಳೆಳಸದವೊಲೆಳಸಲೊಲ್ಲಳೆ ಸಮುಭಿ.
ದ್ಯೋತಿತ ಮಿತ್ರಾಬ್ಜನೊಳಭಿ
ಜಾತಹಿತೋದಯನೊಳಂತವಂತೀಶ್ವರನೊಳ್ ॥ ೩೧ ॥

ತದನಂತರಮಿರದಾಕೆಯು
ನುದಾತ್ತ ಧಾತ್ರೀತನೂಜೆ ಪರಿವಿಡಿಯೊಳ್ ತಂ
ದಿದಿರೊಳ್ ನಿಱಿಸಿ ತಗುಳ್ದು ನು
ಡಿದಳ್ ಪ್ರಪಂಚಮನನೂಪ ವಿಷಯಾಧಿಪನಾ ॥ ೩೨ ॥

ಎರಡೆ ಭುಜಂ ಮನೆಯೊಳ್ ಸಾ
ಸಿರಮೆ ಭುಜಂ ಮೊನೆಯೊಳೀ ಮಹೀಪತಿಗರಸೆಂ
ಬೆರಡಕ್ಕರಮನ್ಯರೊಳ
ರ್ಥರಹಿತಮನ್ವರ್ಥಮಿಾತನೊಳ್ ಮೃಗನಯನೇ ॥ ೩೩ ॥

ಕ್ಷಿತಿಪತಿಸುತೆ ನೀನೀ ಮಹಿ
ಪತಿಯುತ್ಸಂಗಸ್ಥೆಯಾಗಿ ವಾತಾಯನಪ
ದ್ಧತಿವಿಡಿದು ನೋಡು ಮಾಹಿ
ಷ್ಮತಿಗೆ ಕಟೀಸೂತ್ರಮಾದ ರೇವಾನದಿಯಂ ॥ ೩೪ ॥

ಎನೆ—

ಅತಿಸುಂದರ ನಿರತಿಶಯಾ
ಕೃತಿಯಾಗಿಯುಮಾತನಾಕೆಯೆರ್ದೆವುಗನೆ ಶರ
ದ್ಗತ ಜಲದ ಗಗನತಳ ವಿಲ
ಸಿತೇಂದು ಸೊಗಯಿಸದ ತೆಱದಿನಬ್ಜನಿಗಿನಿಸಂ ॥ ೩೫ ॥

ನೃಪಪುತ್ರಿ ಶೂರಸೇನಾ
ಧಿಪನಿದಿರೊಳ್ ರಥಿನಿ ನಿಲ್ವುದುಂ ಚತುರಕಳಾ
ಲಪನೆ ನೃಪೇಶ್ವರವರ್ಣನ
ನಿಪುಣೆ ಪತಿಂವರೆಯ ಮುಂದೆ ನಿಂದಿಂತೆಂದಳ್ ॥ ೩೬ ॥

ನೀಪಕುಲನಾಗಿ ನೃಪತಿಲ
ಕೋಪಮನೀತನನೆ ಸಾರ್ದು ಗುಣಗಣಮುಟೀದ
ತ್ತಾಪೊ ಸರ್ವೋತ್ತಮನಘಕುಲ
ಲೋಪಕನಂ ಪೊರ್ದಿ ಪಗೆಯನುಳಿದಂತೆ ಜಗಂ ॥ ೩೭ ॥

ಅಂಗದ ತೊಲಗದ ಕಾಂತಿ ಮ
ನಂಗೊಳಿಸುವುದೀತನೋಲಗಂಗೊಟ್ಟರೆ ಸ
ಪ್ತಾಂಗದ ರಾಜ್ಯದ ತೇಜಮ
ನುಂಗೊಳಿಸುವುದನ್ಯಮಂಡಲಾಧೀಶ್ವರರಂ ॥ ೩೮ ॥

ಈ ವರನುಂ ನೀನುಂ ನಾ
ನಾವಿಧ ನವಕುಸುಮ ಶಯ್ಯೆಯೊಳ್ ರಮಿಯಿಸು ಬೃಂ
ದಾವನದೊಳಿಂದ್ರವನಪರಿ
ಭಾವಿಯೊಳಗಲದೆ ಸುಗಂಧಪಾಟಳಗಂಧೀ ॥ ೩೯ ॥

ಘನಸಮಯದೊಳಿರ್ದು ಶಿಲಾ
ಸನದೊಳ್ ಶೈಳೇಯ ಸುರಭಿತಳದೊಳ್ ಗೋವ
ರ್ಧನ ಕಂದರದೊಳ್ ಶಿಖಿನ
ರ್ತನಂಗಳಂ ನೋಡು ಮದನಮದಗಜಗಮನೇ ॥ ೪೦ ॥

ಎನೆ ಮನಂದಾರದೆ—

ಅಂಗದವಿರಾಜಿ ಭುವನ ಕ
ಳಿಂಗೇಶನ ಮುಂದೆ ನಿಜಾಸಿ ನೃಪಕನ್ನೆಯನಿಂ
ತೆಂಗುಂ ಭುಜಿಷ್ಯೆ ಮದನನ
ಭೃಂಗೀಧ್ವನಿ ತನ್ನ ದನಿಗೆ ಸಮನೆನಿಸುವಿನಂ ॥ ೪೧ ॥

ಖ್ಯಾತಂ ಮಹೇಂದ್ರಗಿರಿ ಸಾ
ರಾತಿಶಯಂ ಪತಿ ಮಹೇಂದ್ರಗಿರಿಗಂ ಪ್ರಾಚೀ
ಸ್ರೋತಃಪತಿ ಪ್ರಯಾಣದೊ
ಳೀತಂ ಜಂಗಮ ಮಹೇಂದ್ರಮೆನಿಕುಂ ಘಟೆಯಿಂ ॥ ೪೨ ॥

ರವಜಿತ ಯಾಮತೂರ್ಯರವಮಾಶನನಬ್ಧಿಯೆ ನಿದ್ರೆಯತ್ತಲು
ಪ್ಪವಡಿಸುವಂತು ಮಾಳ್ಪುದು ಗವಾಕ್ಷನಿರೀಕ್ಷಿತ ವೀಥಿಮಾರ್ಗದೊಳ್
ನವಯುವನೀತನೊಳ್ ನೆರೆದುವಂದುಪವಾಂತ ಲವಂಗಪುಷ್ಪವ
ತ್ಪವನವಿದಾರ್ಯ ಘರ್ಮಲವೆಯಾಗಿ ವಿಹಾರಿಸು ವಾರ್ಧಿತೀರದೊಳ್ ॥ ೪೩ ॥

ದೌವಾರಿಕೆ ಬಣ್ಣಿಸಿದೊಡ
ಮಾ ವಧು ತನ್ನೃಪನನುಜಿದೆ ಪೋದಳ್ ಸಿರಿಯಂ
ಜೀವದ ಮತಿತರೆ ಪುಣ್ಯಾ
ಭಾವದಿನದು ನೆಲಸಿ ತೊಲಗಿ ಪೋದಂತಾಗಳ್ ॥ ೪೪ ॥

ಆ ರಾಜಕನ್ನೆಯಂ ಪ್ರತಿ
ಹಾರರವಸ್ಥಿತೆಯನುಯ್ದು ದಕ್ಷಿಣದಿಗ ಕೂ
ಪಾರಪತಿಯಿದಿರೊಳಿರಿಸಿ ಚ
ಕೋರಾಕ್ಷಿಯನಿತ್ತ ನೋಡು ನೋಡೆಂದಾಗಳ್ ॥ ೪೫ ॥

ಹರಿಚಂದನ ವಿಚ್ಛುರಿತಾಂ
ಗರಾಗನತಿರುಚಿರಹಾರನೇನೆಸೆದನೊ ನಿ
ರ್ಝರಮುಂ ಬಾಲಾತಪಮುಂ
ಬೆರಸಿರ್ದದ್ರೀಂದ್ರನಂತೆ ಪಾಂಡ್ಯನೃಪೇಂದ್ರಂ ॥ ೪೬ ॥

ಭವದೀಯ ಪರಮಗುರು ಚ
ಕ್ರವರ್ತಿ ದಿಗ್ವಿಜಯದೊಳ್ ಕರಂ ತಡೆವುದನೀ
ಭುವನೇಶಂ ಬಾಯ್ಕೇಳದೊ
ಡವಂ ತಡೆಯದೊಂ ತ್ರಿಪೃಷ್ಠನಂಬುಧಿತಟದೊಳ್ ॥ ೪೭ ॥

ಎಂತಾನುಂ ಸ್ಥಳಜಳದು
ರ್ಗಂ ತವೆ ಬಾಯ್ಕೇಳ್ದೊನೀತನದೆ ದಿಗ್ವಿಜಯಾ
ತ್ಯಂತೋತ್ಸವಮದೆ ರುಚಿ ಚತು
ರಂತಾವನಿಗದೆ ರಥಾಂಗ ವಿಜಯಾಂಗ ಫಲಂ ॥ ೪೮ ॥

ಶ್ರೀಮಜ್ಜಿನಬಿಂಬಂ ಚೂ
ಡಾಮಣಿ ಮಣಿಮುಕುಟದೊಳ್ ಕುಳಂ ವೃಷಭಜಿನ
ಸ್ವಾಮಿಕೃತಂ ನವವಯನಭಿ
ರಾಮಂ ಸಮನೆಂಬರೇಂ ಸುಪುಣ್ಯನೊ ಪಾಂಡ್ಯಂ ॥ ೪೯ ॥

ಮೃದುತಾಂಬೂಲ ಲತಾಪಿನದ್ಧ ವಿಲಸತ್ಪೂಗ ದ್ರುಮೌಘಂ ಸಮು
ಚ್ಛಿದುರೇಲಾವ್ರತತೀ ಪರೀತ ವಿಪುಲ ಶ್ರೀಖಂಡಭೂಜಂ ತಮಾ
ಳದಳಪ್ರಸ್ತರಣಂ ಲತಾಂಗಿ ಮಳಯಕ್ರೀಡಾಚಳಂ ನೀನುಮೀ
ಮದನಾಕಾರನುಮಲ್ಲಿ ನಿಚ್ಚಲುಮಿರಿಂ ಕೇಳೀವಿನೋದಂಗಳಿಂ ॥ ೫೦ ॥

ಹರಿನೀಲವರ್ಣನೀ ಸುಂ
ದರತನು ನೀಂ ರೋಚನಾಭೆಯೊಳ್ ನೆರೆಯಲೊಡಂ
ಪರಭಾಗವಾಗಿ ನಿಮ್ಮ
ರ್ವರಿರವು ಕಾರ್ಮುಗಿಲ ಮಿಂಚಿನಿರವಿನ ತೇಜದಿಂ ‖ ೫೧ ‖

ಅತಿ ದಿವಿಜೇಂದ್ರವಿಳಾಸನೊ
ಳತಾಂತವಿಾತನೊಳಡಂಗಿ ರತ್ನಾಕರಭೂ
ಷಿತೆಯಾದ ದಕ್ಷಿಣದಿಶಾ
ಸತಿಗೆ ವಿಳಾಸವತಿ ಸವತಿಯಾಗಿರು ಸುಖದಿಂ ‖ ೫೨ ‖

ಎಂದೊಡಂ —

ಆವರ್ತನಾಭಿ ನಸುನ
ಕ್ಕಾವರನಿಂದತ್ತ ಪೋದಳಧಿಕೇಚ್ಛೆಯೊಳ
ನ್ಯಾವನಿಪತಿಯೊಳ್ ತಡೆಗುಮೆ
ದೇವಾಪಗೆ ತಡೆಯದೆಡೆಯೊಳಂಬೋಧಿವರಂ ‖ ೫೩ ‖

ಆ ವಧುವೊಲ್ಲದೆ ಬರೆ ಸಕ
ಳಾವನಿಪರ್ ತಮ್ಮ ರಾಗಮೋಗಡಿಸಿರೆ ಕೆ
ಯ್ದಾವಿಗೆ ಬರೆ ಪೆಱಗಣ ಭವ
ನಾವಳಿ ಮುಸುಳ್ದಂತೆ ಮುಸುಳ್ದರೆರಡೋಳಿಯೊಳಂ ‖ ೫೪ ‖

ಸುದತೀಸ್ಯಂದನಮಾತ್ಮ ಮಂಚನಿಕಟಾಗ್ರೋದ್ದೇಶಮಂ ಮುಟ್ಟಿವ
ರ್ಪುದುಮಿನ್ನೆನ್ನುಮನೊಲ್ದು ಮೊಲ್ಲಳಿವಳೆಂಬಾಶಂಕೆ ಪುಟ್ಟಿತ್ತು ಚಿ
ತ್ತದೊಳಾ ಬೇಗದೊಳುರ್ವರಾಸ್ಯತಿಲಕಂಗತ್ಯುನ್ನತಂ ದಕ್ಷಿಣಾಂ
ಸದ ಬದ್ಧಶ್ಲಥ ಬಾಹುಕೀರ್ತಿ ಕಳೆದತ್ತಂದಾದ ಸಂದೇಹಮಂ ‖ ೫೫ ‖

ಅಂತು ದೀನಜನತಾಕಲ್ಪಾಂಘ್ರಿಪಂ ವನಕರಿ ಕದಡೆ ತಿಳಿದ ಸರೋವರ
ದಂತೆ ಪ್ರಸನ್ನಾಂತರಂಗನಾಗಿರ್ಪನ್ನೆಗಂ ಕನಕದಂಡಹಸ್ತೆಯಾಗಳಿಂತೆಂದಳ್—

ಕ್ಷೋಣಿಗೆ ಹಾರವಮಲ್ತೆ ರಜತಾದ್ರಿ ತದದ್ರಿಗೆಬಿಂಕೆ ನೋಡಿಭ
ಶ್ರೇಣಿಗಳಂತವಂ ವಿನಮಿಯುಂ ನಮಿಯುಂ ನಯದಾಳ್ದರುತ್ತರ
ಶ್ರೇಣಿಗಧೀಶನೊರ್ವನಹಿತ ಪ್ರತಿಪಾಲಕದತ್ತ ದಕ್ಷಿಣ
ಶ್ರೇಣಿಯನಾಳ್ದೊ ನೊರ್ವನವರೊಳ್ ನಮಿವಂಶನಪಾರ ಪೌರುಷಂ ॥ ೫೭

ಜ್ವಳನಜಟಿಯೆಂಬೊನಹಿತ
ಜ್ವಳನಂ ಜ್ವಾಜ್ವಲ್ಯಮಾನ ಮಣಿಮುಕುಟಾಂಶೂ
ಜ್ವಳ ಖೇಚರೇಂದ್ರ ಪರಿಷ
ದ್ವಳಯಂ ನೋಡಳಸಮಿಳಿತ ಮುಗ್ಧಾಪಾಂಗೇ ॥ ೫೭ ॥

ಆ ಗಗನೇಚರೇಂದ್ರನ ಮಗಂ ಪೆಸರಿಂ ನೆಗಟ್ದರ್ಕಕೀರ್ತಿ ವಂ
ಶಾಗತ ಖೇಚರೇಂದ್ರ ವಿಭವಂ ಭವದೀಯ ವಿನೂತಮಾತುಳಂ
ಭೋಗಪರಂಪರಾಪರಿಗತಂ ಮಗನಾ ವಿಭುಗಾಳ್ದುದಮು
ದ್ಯೋಗಿ ವಿರೋಧಿ ದರ್ಪಮಥನಂ ರಥನೂಪುರ ಚಕ್ರವಾಳಪಂ ॥ ೫೮ ॥

ಅಪಗತ ಪತ್ರಲತಾವಳಿ
ರಿಪುಯುವತಿಕಪೋಲಪಾಳಿ ಪೇಟ್ಗುಂ ನೆಗಟ್ದೀ
ನೃಪನ ನಿರತಿಶಯ ಶೌರ್ಯ
ಪ್ರಪಂಚಮುಂ ಚಂಚರೀಕ ಸಮುಚಿಕುರಚಯೇ ॥ ೫೯ ॥

ಮತ್ತಮಾ ದಿವ್ಯಾನುಭಾವಂ—

ಕುಲನಗಮುನಡರ್ವ ಜಲನಿಧಿ
ಜಲಮುಂ ಪಾಯ್ವಹಿನಿವಾಸಮುಂ ಪುಗುವ ಮರು
ನ್ನಿಲಯಕ್ಕೊಗೆವೀತನ ಕೀ
ರ್ತಿಲತಾಂಗಿ ಚಲಾಂಗಿ ಖಚರನಚಳಿತನಬಲೇ ॥ ೬೦ ॥

ಬಾಲೆಗೆ ಗುಣಕಾಂತಿ ವಯೋ
ಲೀಲೆಗೆ ವಿನಯಪ್ರಧಾನ ಗುಣಗಣೆಗೆಣೆ ಭೂ
ಪಾಲಂ ನಿನಗದಱಿಂದನು
ಕೂಲಂ ಬಿದಿ ಬಿಸುಗೆ ಸಿಂಧುವೊಲ್ ಮಾನದಿಯೊಳ್ ॥ ೬೧ ॥

ಎಂದಿಂತಾಕಾರಾನುರೂಪ ದೌವಾರಿಕಾ ವಚನರಚನಾಶ್ರವಣ ಸಮು ಪಜಾತ ಸಾಧ್ವಸಭಯಮುಮೊಱಕಮುಂ ಪೆರ್ಚೆ ಭಾಸ್ವಜ್ಜಿನಚಂದ್ರ ಚಂದ್ರ ಪ್ರಭೆಗೆ ಜ್ಯೋತಿ ಸೋಲ್ವಂತೆ ಜ್ಯೋತಿಃಪ್ರಭೆ ಸೋಲ್ತು—

ಅವಯವ ಸಮುದಯ ಶೋಭಾ
ನವದ್ಯನಪ್ಪುರ್ವರಾಸ್ಯ ತಿಲಕೇತರನಂ
ನವವಧುವೊಲ್ಲಳೆ ಮಧುಕರಿ
ನವಾಮ್ರದೊಳ್ ಪಾಯ್ದುಗ್ಗಮೆಲವದೊಳ್ ಪಾಯ್ದಪುದೇ ॥ ೬೨ ॥

ಆಕೆಯ ಮನಮಱಿದಖಿಳ ಕ
ಳಾಕೋವಿದಮಾನ್ಯೆ ಜನ್ಯೆ ವಿಸ್ತರವಚನೆ
ವ್ಯಾಕುಳತೆ ತಗುಳೆ ಪೊಗೞ್ದಳ
ನೇಕೋಕ್ತಿಯಿನುರ್ವರಾಸ್ಯತಿಲಕನ ರೂಪಂ ॥ ೬೩ ॥

ಪೊಗೞ್ದಾಕೆ ಮಾಣೆ ನಾಣೆನಿ
ಸಗಲೆ ನಯಂ ಬೀೞೆ ದಿಟ್ಟೆ ನೆಯ್ದಿಲ ಪೊಸವಾ
ಸಿಗದೊಳೆಣೆಯೆನೆ ಕುಮಾರನ
ಪೆಗಲೊಳ್ ನೆಲೆ ನೆರೆಯೆ ಮಾಲೆ ಮೂಡಿದ ತೆಱದಿಂ ॥ ೬೪ ॥

ಅಂತೆಯ್ದೆ ಸೋಲ್ತುಮಧಿಕ ಲಜ್ಜಾಭಾವದಿಂ ಮಾಲೆವೂಡಲಱಿಯದೆ ಕುಮಾರಗ್ರೀವಾಳೋಕನೆಯಾಗಿರೆ—

ಮನಮಱಿದು ನಗೆಯೊಳಾ ನೃಪ
ತನೆಯಯ ರಥಮಂ ನೃಪಾಂತರಕ್ಕುಯ್ವುದೊ ಪೇೞ್
ಎನೆ ನೊಂದು ನಿಷಾದಿಗೆ ಮುಳಿ
ದನಂಗ ನೃಪಯಾನ ನಾಗಮಂ ವಧು ಪೊಲ್ತಳ್ ॥ ೬೫ ॥

ಕಣ್ಬಟತನದಿಂ ಪೇಟಿಲ್
ನಾಣ್ಚಿರೆ ತನ್ನೊಳಗನಬಲೆ ಪೊಱಪೊಣ್ಮಿದುದಾ
ಕಣ್ಚೆಲ್ಲದ ಬಳಸುವ ಕಡೆ
ಗಣ್ಚಪಳತೆಯೊಡನಲಂಪು ಪೊಱಪೊಣ್ಮುವಿನಂ ॥ ೬೬ ॥

ತದನಂತರಮಿರೆ—

ನಯನಾನಂದ ದಾಮಮಂ ಹಿಮಕರಾಂಶೂದ್ದಾಮಮಂ ಕನ್ನೆ ತ
ನ್ನಯ ಕೆಯ್ಯೊಳ್ ಕುಡೆ ಮಾಲೆವೂಡೆ ಸಮುದಂ ಕಂಠಸ್ಥನಕ್ಷತ್ರ ಮಾ
ಲೆಯಿನೈರಾವತದಂತೆ ತತ್ಕರತಳಾಯಾತ ಸ್ಫುರದ್ರತ್ನ ಮಾ
ಲೆಯನುದ್ಭಾಸಿಸಿದಂ ಸ್ವಯಂವರಥೊಳಾ ಸೌಜನ್ಯಕಂದಾಂಕುರಂ ॥ ೬೭ ॥

## ೬. ನಡೆಜಂತ್ರಮಲ್ತೆ ನರರ ಶರೀರಂ

ಶ್ರೀ ಪತ್ನೀಮೃದು ಭುಜಲತಿ
ಕೋಪಮಮಾಮಾಲೆ ಕೊರಲೊಳಿರೆ ಕರಮೆಸೆದಂ
ಭೂಪತಿ ಕನ್ಯಾಬಾಹುಲ
ತಾಪಾಶಾಶ್ಲೇಷತೋಷದಿಂ ಜಿನಚಂದ್ರಂ ॥ ೧ ॥

ಪರಸುವ ಪೌರರ ಪರಕೆಯ
ಸರಂ ಶ್ರವಣಶೂಲಮಾಗಿ ಕಿವಿಯೊಳ್ ಪುಗುವಂ
ತಿ[ರೆ] ಕಿವಿಯಂ ಪುಗೆ ನೆರೆದರ
ಸರ ಮಕ್ಕಳ್ ವಿರಸರಾದರಾ ಸಂಕಟದೊಳ್ ॥ ೨ ॥

ಅಂತು ಮಂಚಸ್ಥ ರಾಜನ್ಯಕಮಂ ಶ್ರೀವಿಜಯಂ ವಿಸರ್ಜಿಸೆ ಪ್ರತ್ಯೂಷತಾರಕಾಕಾರದಿಂ ಮಂದಮಂದಾಯಮಾನ ಪ್ರಭಾಪ್ರಸರಂ ತಮ್ಮ ತಮ್ಮ ಶಿಬಿರ ನಿವೇಶಂಗಳ್ಗೆ ಪರೆದು ಶ್ರೀವಿಜಯನೊಳಮುರ್ವರಾಸ್ಯತಿಲಕನೊಳ ಮನಿಬರ್ ನೆರೆದುಂ ಕಾದಿಯುಮೊದವಲಾಱದುದಱ ನೋಱಯೊಳಗಣ ಕೂರ ಸಿಯಂತೆ ಕೂರ್ಪುಗಿಡದೆ ಸೌಜನ್ಯಮುನುಂಟುಮಾಡಿ ನಿಜದೇಶ ಪ್ರಸ್ಥಾನಾಭಿಮುಖರ್ ಅಂತಸ್ಥ ಕೋಪಾವಲೇಪರ್ ಬಹಿಃಪ್ರಮೋದಂಗಳಿಂ ಸಂವೃತಾಕಾರರ್ ಗೂಢನಕ್ರ ಪ್ರಸನ್ನಹ್ರದಗಳಂತೆ ಪಯಣಂಬೋದರ್ ಇತ್ತ ಪಾಪೇಭಕಂಠೀರವಂ ಕಂಠೀರವವಧೂಪ್ರಭೆಯಂ ಜ್ಯೋತಿಃಪ್ರಭೆಯನುಪಾಯನಸಮೇತೆಯಪ್ಪ ನೃಪವಿದ್ಯೆಯಂ ಮುಂದಿಟ್ಟು ಪುಗುವಂತೆ ಪೊೞಲಂ ಪುಗೆ–

ಆದ ಸೊಯಂಬರಮಂ ಜಗ
ದಾದಿಯ ನೃಪರಮಿತಮತಿಗಳಿದನೊಳ್ಪಿತನು
ತ್ಪಾದಿಸಿದರಲ್ಲದಂದುದಿ
ತೋದಿತನಂ ವರನನೀಕೆ ಪಡೆಗುಮೆ ನೃಪರೊಳ್ ॥ ೩ ॥

ಅದಲ್ಲದೆಯುಂ "ಸಮವಯೋರೂಪಲಾವಣ್ಯ ಪುಣ್ಯಮನೀದ್ವಂದ್ವಮಂ ಕೂಡಿದ ಬಿದಿಗವರಂ ಪುಟ್ಟಿಸಿದ ಮಹಾಪ್ರಯತ್ನಂ ಸಫಲಮಾದುದು. ಈ ರಾಜಸಹಸ್ರದೊಳೀಕೆ ತನಗನುರೂಪನಪ್ಪನನಱಿದು ಮಾಲೆ ಊಡಿದಳ್, ಉನ್ನಮೆ ಪುರಾತನ ಭವಸಂಬಂಧವೇದಿನಿ" ಎಂದಿಂತರ್ಥ ಭೂತಂಗಳ ನೆನಿತಾನುಮಂ ನುಡಿವ ನಾಗರಕ ಶ್ರೋತ್ರ ಸುಖಮುಖರ ವಾರ್ತಾಮೃತಾಕ್ಷ ರಂಗಳಂ ಕೇಳುತುಂ ಮಂಗಳವಿಧಾನಾಧಾನ ಸನಾಭಿ ಭವನಮಂ ಪೊಕ್ಕು ಕುಮಾರನಂ ಮುನ್ನಂ ಹುತಾಗ್ನಿಯಾಗಿರ್ದ ಪುರೋಹಿತನನಿದಿರ್ಗೊಂಡಗ್ನಿ ಸಾಕ್ಷಿಯೊಳ್ ಜ್ಯೋತಿಃಪ್ರಭೆಯಂ ಯಥೋಕ್ತ ವಿಧಿಪೂರ್ವಕಂ ಕುಡುವುದುಂ-

ಉರಿವಗ್ನಿಕುಂಡಲಮಂ ಬಲ
ವರೆ ದಂಪತಿ ಕನಕಶೈಲಮಂ ಬಳಸುವಾ
ಸರದಿರುಳ ತೆಱನನಿರದನು
ಕರಿಸಿದುದಾಗಳ್ ತದೀಯ ಮಹಿಮಸಹಿತ್ವಂ ॥ ೪ ॥

ಅಂತಲ್ಲಿಂ ಬೞಿಯಂ

ಪ್ರಮದ ಪುರೋಹಿತ ವಚನ
ಪ್ರಮಾಣದಿಂದಗ್ನಿ ಕುಂಡದೊಳ್ ಲಾಜೆಯುಮಂ
ಕ್ರಮದಿಂದಮಿಕ್ಕಿದಳ್ ಪೆಣ
ದ ಮನಃಪ್ರಣಯಕ್ಕೆ ಮುಡಿಗೆಯಿಕ್ಕುವ ತೆಱದಿಂ ॥ ೫ ॥

ಆಗಳ್ ಸೌಸ್ನಾತಿಕರುಂ, ಬಂಧು ಸಹಿತಂ ಶ್ರೀವಿಜಯನುಂ, ಪುರಂಧ್ರೀ ವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗಮಾದ್ರಾ ಕ್ಷತಾರೋಪಣಂ ಗೆಯ್ದರ್-

ಶ್ರೀವಿಜಯಂ ವಿವಾಹಮನೊಡಂಬಡೆ ತಂಗೆಗೆ ಮಾಡಿ ಬೇಡಿದಂ
ಗೀವುದನಿತ್ತು ಖೇಚರ ಮಹೀಚರ ಕೋಟಿಗೆ ಬಾಯಿನಂಗಳಂ
ತೀವಿದಶೇಷ ಕೋಶಗೃಹಮುಂ ಬಱಿದಾಗಿರೆ ಕೊಟ್ಟು ತನ್ನನಿ
ತ್ತೋವದೆ ಮೈದುನಂಗೆ ಮೆಱೆದಂ ನೆರೆದನ್ವಯದೊಂದು ಮೈಮೆಯಂ ॥ ೬ ॥

ತಮ್ಮುತ್ತಿರ್ವರ ತಲೆ ಬಟ್ಟವಟಃಯೆಂದು ಶ್ರೀವಿಜಯನುಂ ವಿಜಯನಮುರ್ವರಾಸ್ಯತಿಲಕನುಮಂ ಜ್ಯೋತಿಃಪ್ರಭೆಯುಮಂ ಕಟ್ಟಿಸಲ್ ಮೂಱು ಪಯಣವೊಡವೋಗಿ ತಮ್ಮಂ ಬೆರಸು–

ಶ್ರೀವಿಜಯನತ್ತ ಮಗುಟ್ದಿನ
ಮಾವಾಸ್ಯೆಯೊಳೊಡನೆ ನಡೆದು ಕಡೆಯೊಳ್ ರವಿ ರಾ
ಜೀವರಿಪುವಿಂದಗಲ್ವವೊ
ಲಾವಿರ್ಭೂತ ಪ್ರತಾಪನಧಿರೂಢರಥಂ ॥ ೭ ॥

ಅಂತು ಚಕ್ರವರ್ತಿತನೂಜಂ ಕಳಿಪಿ ಮಗುಟ್ವಿದುಸುತ್ತ ಕತಿಪಯ ದಿನಂಗಳಿಂ [ಖಚರೇಶ್ವರಂ ರಥನೂಪುರ ಚಕ್ರವಾಳಮನೆಯ್ದಿದಂ]. ಪೋದನಾ ಗಳಷ್ಟಶೋಭೆಗೆಯ್ಸಿ ಮಹಾವಿಭೂತಿಯಿಂ ಪೊಕ್ಕನವರತಂ ವಿಷಯಸುಖನಿರತನಾಗಿ ಮಿತದಿನಂಗಳನಮಿತತೇಜನಿರ್ದು ತನ್ನ ತಂಗೆಯ ಸುತಾರೆಯ ಸ್ವಯಂವರ ವಿವಾಹಕಲ್ಯಾಣಕಾರ್ಯ ಪರ್ಯಾಳೋಚನ ವಿರಾಮದೊಳ್, ಶ್ರೀವಿಜಯಂ ಮೊದಲಾಗೆ ವಿಶ್ವಂಭರಾಧೀಶ ತನೂಜ ಸಮಾಜಮಂ ಬರಿಸೆ(ಬರಿಸೆ) ಬಂದು ಶ್ರೀ ವಿಜಯಂ–

ಗಗನಕ್ಷ್ಮಾಚರರೊಳ್ ಸ್ವಯಂವರದೊಳೀ ಸ್ತ್ರೀರತ್ನಮಂ ಕನ್ನೆಯಂ
ಬಗೆಗೊಂಡಂತೊಳಗೊಳ್ವೆವೆಮ್ಮೆಳೆನುತಿರ್ಪುರ್ವೀಶರಿರ್ದಂತೆ ಕಂ
ತುಗೆ ಕನ್ಯೋತ್ತಮೆ ರಾಜಕೋಟಿ ತನಗಳ್ಕಿರ್ಪನ್ನಮಾಗಳ್ ಸುತಾ
ರೆಗೆ ತಾರಾಧಿಪನಂತೆ ವಿಸ್ತರಿಸಿದಂ ಪ್ರಾಣೇಶ್ವರಪ್ರೀತಿಯಂ ॥ ೮ ॥

ಅಂತು ಪಿರಿದುಂ ವಿಭೂತಿಯೊಳ್ ಸ್ವಯಂವರದೊಳ್ ಶ್ರೀ ವಿಜಯಂ ಸುತಾರೆಯೊಳ್ ನೆರೆದಿಂ ಬಟ್ಟಃಕಮುಕಳಂಕಾಚಾರಸಾರನನೇಕ ಪಸದನದುಡುಗೊಱೆ ಸಹಿತಂ ಕಳಿಪೆ ಪೌದನಪುರಕ್ಕೆ ಪೋಗಿ ಸುಖಸಂಕಥಾ ವಿನೋದನರಸುಗೆಯ್ಯುತ್ತುಮಿರೆ ಮತ್ತೊಂದು ದಿವಸಮಾಸ್ಥಾನಮಂಟಪ ಮಧ್ಯಸ್ಥಿತ ಚಾರು ಚಾಮೀಕರ ಮೃಗರಿಪುವಿಷ್ಟರದೊಳ್ ತ್ರಿಪೃಷ್ಠತನಯಂ ಶ್ರೀ ವಿಜಯನಿರೆ–

ತ್ರಿಜಗದ ತಿರಿಕಂ ವಿದ್ಯಾ
ಭಿಜಾತಗಂಥಂ ನಿಮಿತ್ತವಿದನಾ ಸಭೆಯೊಳ್
ದ್ವಿಜನಱಿದಿಂತೆಂದನವೋ
ಘಜಿಹ್ವನೆಂಬೊಂ ಸಮಸ್ತವಸುಧಾಧಿಪನಂ ॥ ೯ ॥

ಇಂದಿಂಗೇೞುದಿವಸದಂದಿಂಗೆ ಪೌದನಪುರಾಧೀಶ ಮಸ್ತಕದೊಳ್ ನಿರ್ಘಾ ತಾಪಾತಮಕ್ಕುಮೆಂದಾದೇಶಂಗೆಯ್ವುದುಂ ತತ್ಸಭಾಪತಿಯ ಸರ್ವ ಸಚಿವ ರೊಳಱಿಮನುಕಾರನೈಮಿತ್ತಿಕನಂ ಕಣ್ಣಂ ಕಿಡೆ ಜಡಿದು—

ಅದು ನಿನ್ನಯ ತಲೆಯೊಳ್ ಬೀ
ೞ್ವುದಕ್ಕೆ ಶುಭಮಕ್ಕೆ ಸಾರ್ವಭೌಮಂಗೆ ದಲೆಂ
ಬುದುಮೆನ್ನಯ ತಲೆಯೊಳ್ ಸುರಿ
ವುದು ಕಾಂಚನವೃಷ್ಟಿ ಮೆಚ್ಚೆ ನಿಮ್ಮ ಮಹೀಶಂ ॥ ೧೦ ॥

ಎಂದು ನಿಶ್ಶಂಕನುಂ ನಿಸ್ಸಹಾಯನುಮಾಗಿ ನುಡಿದಮೋಘಜಿಹ್ವನ ಸ್ಥಿರತ್ವಕ್ಕೆ ಮೆಚ್ಚಿ ನೀನಾರ್ಗೇನೆಂಬೆ ಯೆಲ್ಲಿರ್ದುಬಂದೆಯೆಂದರಸಂ ಬೆಸಗೊಂ ಡೊಡಾಂ ಸಿಂಧುವಿಷಯದ ಪದ್ಮಿನೀಖೇಟದ ವಿಪ್ರಪ್ರವರನಷ್ಟಾಂಗ ಮಹಾ ನಿಮಿತ್ತ ವಿಶಾರದಂ ವಿಶಾರದನೆಂಬೊಂ, ತದೀಯ ಪುತ್ರನೆ ನಾನಮೋಘ ಜಿಹ್ವನೆಂಬವನೆನೆ ತರ್ಜನನಿರತರಪ್ಪ ದುರ್ಜನರಂ ಬಾರಿಸಿ ಸನ್ಮಾನಪುರಸ್ಸರಂ ನೈಮಿತ್ತಕನಂ ಪೋಗಲ್ವೇೞ್ದು ಶ್ರೀವಿಜಯಂ ಮಂತ್ರಿಮಹತ್ತರ ಪುರೋಹಿತ ಪ್ರಭೃತಿಪ್ರಧಾನರೊಳಾಳೋಚಿಸಿ ಮಹಾಶನಿ ರಕ್ಷೋಪಾಯಮಂ ಬೆಸಗೊಳೆ ಮಣಿವಿಭೂಷಣನೆಂಬಮಾತ್ಯೋತ್ತಮನುಪಾಖ್ಯಾನಮನಿಂತೆಂದು ಪೇೞಲ್ತ ಗುಳ್ದಂ, ಒಂದು ಪರ್ವತೋಪಕಂಠದೊಳ್ ಕುಂಭಕಾರಕಟಕಮೆಂಬುದು ಪೊೞಲುಂಟಲ್ಲಿ ಚಂಡಕೌಶಿಕನೆಂಬೊಂ ಪಾರ್ವಂ ದುರಾಚರಣಂ, ಆತನ ಭಾರ್ಯೆ ಸೋಮಶ್ರೀಯೆಂಬೊಳಾಕೆ ವ್ಯಂತರಾರಾಧನೆಗಳಿಂ ಮುಂಡಕೌಶಿಕ ನೆಂಬೊನಂ ಮಗನಂ ಪಡೆದಳಾಮಗಂ ಬಳೆಯೆವಳೆಯೆ ಮುಳಿದು ಕೊಲಲಿರ್ದ ಕುಂಭನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನನೊಯ್ದದ್ರಿ ಗುಹಾಂತರದೊಳ್ ಪ್ರಯತ್ನಂಬೆರಸಿರಿಸಿ ಕಾವುದುಮಲ್ಲಿಯುಂ—

ಪರಮಾರ್ಥತೆ ಹಿತಮಹಿತಮು
ಪರಮಾರ್ಥತೆಯೆನ್ನದಾತ್ಮಜನಕಜ್ಞಾನ
ಸ್ಥಿರತೆಯೊಡನೊಡನೆ ಜರದಜ
ಗರಗರಳ ಗತಾಯು ಮುಂಡಕೌಶಿಕನಱಿದಂ ॥ ೧೧ ॥

ಅದಱಿಂದಂ ಜೀವಕ್ಕ –
ಭ್ಯುದಯಮನಭ್ಯುದಯಮೆಂಬಿದಂ ಧರ್ಮಾರ್ಥ
ಮ್ದದ ಮತಿಯೆ ಮಾಣ್ಕುಮಜ್ಞಾ
ನದೊಳಿನ್ನೇನೆಂಬುಪಾಯಮಂ ಕೆಯ್ಕೊಳ್ಳಾ ॥ ೧೨ ॥

ಪೌದನಪುರಾಧಿಪತ್ಯಮ
ನಾದಕ್ಷನ....ಯಕ್ಷಬಿಂಬಕ್ಕಿತ್ತಿಂ
ತಾದರದಿನೇೞು ದೆವಸಮ
ನಾದಿ ಜಿನಾಲಯದೊಳರ್ಚನಾದಿಕ ಸಹಿತಂ ॥ ೧೩ ॥

ಇರೆಂದಿರಿಸೆ ಶಾಂತ್ಯಭಿಷೇಕಪುರಸ್ಸರಂ ಪೂಜಾವಿಧಾನಮಂ ಸಪ್ತವಾಸರಾವಸಾನಂಬರಂ ಮಾಡಲ್ತಗುಳ್ಪುದುಂ ಪರಿಪೂರ್ಣಾವಧಿ ದಿವಸ ಸಾಯಂತನ ಸಮಯದೊಳ್ ಶ್ರೀವಿಜಯನಿರ್ಪ ಚಿತ್ರಶಾಲೆಯೊಳಗಣ ಸಿಂಹಾಸನದೊಳಧಿಗತರಾಜ್ಯಾಭಿಷೇಕ ಕಿರೀಟಬದ್ಧಮಪ್ಪ ವೈಶ್ರವಣ ಪ್ರತಿಮೆ ಶ್ರೀವಿಜಯನಾಸ್ಥಾನದೊಳಿರೆ —

ತುಡೆ ಧನ್ವಿ ಸರಲನೊರ್ವಂ
ಗೆಡೆವುಗೆ ಮತ್ತೊರ್ವನವನನದು ತಱಿವವೊಲೊ
ಳ್ಪುಡುಗದೆ ಯಕ್ಷಪ್ರತಿಮೆಯ
ನಡುದಲೆಯೊಳ್ ಬಿಟ್ಟುದಶನಿ ನುರ್ಗಪ್ಪಿನೆಗಂ ॥ ೧೪ ॥

ಅಂತು ತಾಮ್ರಮಯ ಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕಱಿಗುವಂತೆ ಕಱಿಗಿ ಪೊನಲ್ಪರಿಯೆ ಬಿಟ್ಟಿಂದ್ರಾಯುಧಮಂ ಕಂಡು ಬೆಕ್ಕಸಂ ಬಟ್ಟು ಪದ್ಮಿನೀಖೇಡಂಬೆರಸು ಮಂಡಲಮನಮೋಘ ಜಿಹ್ವಂಗೆ ಮಚ್ಚುಗೊಟ್ಟು ಶ್ರೀವಿಜಯಂ ನಿಜರಾಜ್ಯದೊಳ್ ನಿಂದು —

ಜನನಿ ತನಗಿತ್ತುದ್ಯದ್ವಿದ್ಯಾದ್ವಯಂ ಬೆಸಕೆಯ್ಯೆ ಕಾಂ
ಚನಮಯ ವಿಮಾನಾಭ್ಯಾರೂಢಂ ಸುತಾರೆಯೊಳೋಪಳೊಳ್
ಮನದೆಱಕದಿಂ ಪೋದಂ ಜ್ಯೋತಿರ್ವನಕ್ಕೆ ವಿಹಾರಿಸಲ್
ಜನಪತಿ ಪೆಱಂಗಿರ್ದೊಂದುತ್ಪಾತಮಂ ಸಚಿವೋತ್ತಮಂ ॥ ೧೫ ॥

ಸಂಭ್ರಮಾಕುಲಿತ ಚಿತ್ತಂ ಸ್ವಯಂಪ್ರಭೆಗಮಱಿಪಿ ವಿಷಾದ ವ್ಯಾಪಾದಿತ ಪ್ರಮೋದರಾಗಿರ್ಪಿನೆಗಂ, ಅಪೂರ್ವ ಖಚರನವನಿಗವತರಿಸಿ ರಾಜಮಂದಿರಮಂ ಪೊಕ್ಕು ಸ್ವಯಂಪ್ರಭೆಯಂ ಕಂಡು ನಿಜಾಗಮನಕಾರಣಮನಿಂತೆಂದು ಬಿನ್ನಪಂಗೆಯ್ದಂ —

ಆನಪ್ಪೊಡೆ ಸಂಭಿನ್ನ ಮ
ಹಾನೈಮಿತ್ತಿಕನ ಮಗನೆನೆಮ್ಮಯ್ಯನುಮಿಂ
ದಾನುಮೊಡವೋಗಿ ಕಂಡು ಜ
ನಾನಂದನರುರ್ವರಾಸ್ಯ ತಿಲಕರನರಸೀ ॥ ೧೬ ॥

ಓಲಗಿಸಿ ನಿಜಪುರಕ್ಕೆ ವಿ
ಶಾಲತರಾಂಬೋಧಮಾರ್ಗದೊಳ್ ಬರೆ ಶರಣೆಂ
ಬಾಲಾಪರುದಿತ ನಿನದಮ
ನಾಲಿಸಿ ನಿಂದಿನಿಸನೆಮ್ಮ ತಂದೆಯುಮಾನುಂ ॥ ೧೭ ॥

ನಿಲ್ವಿನಮೆಮ್ಮಿರ್ದೆಡೆಗನತಿದೂರದೊಳ್ ವಿಮಾನಾರೂಢಂ ನವಯೌವನ ಶ್ರೀ ಮಧುರರೂಪಾಳಂಕರಣಭೂತ ಪರಿದೇವನಂ ಯಶೋಭಿರಾಮ ಪ್ರಮೋದ ಸನಾಥಪಾರ್ಶ್ವನನಂಬರಚರನಂ ಕಂಡು ತತ್ಸಮೀಪ ಸ್ತ್ರೀರೂಪಮಂ ಸುತಾರೆಯೆಂದಱಿದು ತಂದಿರ್ವರುಮವೊಂದೊರ್ವರಂ ಮೂದಲಿಸಿ ತದ್ವಿಯಚ್ಚರ ವಿಮಾನಕ್ಕಡ್ಡಮಾಗಿ ನಿಂದಾಗಳ್ —

ಹಾಹಾಧ್ವನಿ ಕರುಣಾವ್ಯಾ
ಮೋಹಮದೆರ್ದೆಯೊಳಗೆ ಬಳೆಯೆ ಸುತ್ತಿರ್ದೊಡದಂ
ಸಾಹಸಿಗಂ ಕೇಳ್ದುಂ ಧೃತ
ಮೋಹಂ ಕೇಳ್ದುಮೆ ಜಿತಾರ್ತಕುರರೀರವಮಂ ॥ ೧೮ ॥

ಅಂತು ಪುಯ್ಯಲಿಟ್ಟೊಳಱು ಪಳವಿಸಿ ಬಾಯಟಿದಟ್ಟಿ ಸುತಾರೆಯ ಸಂಜಲಂಜಲೆಂದು ಮಂಡಲಾಗ್ರಮಂಡಿತ ದೋರ್ದಂಡರೆನಾಗಿ ಪೋಗಿ ಪಗೆವ ನೊಳ್ ತಡೆಯದೆ ತಾಗುವೆಮ್ಮ ರಭಸಮಂ ಕೇಳ್ದು ವಿಮಾನಾಜಿರದೊಳಿರ್ದ ನಿಮ್ಮ ಸೊಸೆ ಬಾಡಿದಸಿ ಮಟಿಯಂ ಪೆತ್ತಂತೆ ರಾಗಿಸಿ ನಯಂಬೆತ್ತಿಂತೆಂದಳ್—

ಜ್ಯೋತಿರ್ವನದೊಳ್ ಛಿದ್ರಿಸಿ
ಪಾತಕನಿತ್ತಶನಿಘೋಷನಸ್ಮತ್ಪತಿಯಂ
ಮಾತೇಂ ನಿಜನಗರಕ್ಕೆಟಿ
ದೀತಂ ಕೊಂಡೊಯ್ದುಪೊಂ ವಿಯಚ್ಚರನೆನ್ನಂ ॥ ೧೯ ॥

ಅದಱಿಂದಂ ಬೇಗಂ ಪೋಗಿತಂದಿರ್ವರುಂ ಮದೀಯ ಜೀವಿತೇಶ್ವರನಂ ಕಾಯಲ್ವೇಟ್ಪುದು. ಇನ್ನಿನಿಸುಬೇಗಂ ತಡೆದಿರಪ್ಪೊಡೆನ್ನಂ ಕಾಣದಮೋಘಂ ಪ್ರಾಣಪರಿತ್ಯಾಗಂಗೆಯ್ಗುವೆಂಬುದುಂ, ಪೋಪರ್ ಪೋಗರೆಂಬಾಶಂಕೆವೆರಸಿದ ವಿರೋಧಿ ನೋಡೆನೋಡೆ ಶ್ರೀವಿಜಯ ಪ್ರಾಣತ್ರಾಣನಿಮಿತ್ತಂ ಜ್ಯೋತಿರ್ವನಮಂ ಮನೋಜವದಿನೆಟ್ದು ಸುತಾರಾರೂಪಧಾರಿಣಿಯಾಗಿ ಕುಕ್ಕುಟ ಸರ್ಪ ದಶನದ(ಶಾ)ಂಶವ್ಯಾಜದಿಂ ಬಿಟ್ದುಪಟ್ಟಿರ್ದ ಬಹುರೂಪಿಣಿಯೆಂಬ ಅಶನಿ ಘೋಷನ ಘೋಷಣವಿದ್ಯೆಯುಮನದಂ ಸುತಾರೆಗೆತ್ತಿರ್ದೆಯೊಳಿಟ್ಟು ಸುಡಲ್ ಚಿತಾರೂಢನಾಗಿರ್ದ ಶ್ರೀವಿಜಯನುಮಂ ಕಂಡು ಬೇಗಮಗ್ನಿಕುಂಡದಿನುರ್ವೀಶ್ವರನಂ ಪೊಱತೆಗೆದು ಬಟಿಕ್ಕೆನ್ನ ತಂದೆ ಸಂಭಿನ್ನಂ ಬಹುರೂಪಿಣೀ ವಿದ್ಯೆಯ ನಾಟಂದೊಡೊಳಱು ಪೆಳಱಿ —

ತದ್ವಿದ್ಯೆ ಪೋಗೆ ದಶನಕು
ಮುದ್ವತಿ ಪೊಱಪೊಣ್ಮೆ ನಗೆಮೊಗಂ ಬೆರಸು ನೃಪಂ
ಸದ್ವಿದ್ಯಾನಿಧಿ ಪೇಟಿನೆ
ತದ್ವಾರ್ತೆಯನಾಗಳಱಿಪಿದಂ ಸಂಭಿನ್ನಂ ॥ ೨೦ ॥

ನೃಪತಿ ಸುತಾರಾಹರಣ
ಪ್ರಪಂಚಮಂ ಜಲಕನಱಿದು ಮಯ್ದುನನ ಪೊಟಿ
ಲ್ಗಿಷಮತಿ ಸಂಭಿನ್ನಂ ಬೆರ
ಸು ಪೋದನಿತ್ತಟ್ಟೆ ನಿಮಗೆ ಪೇಟಲ್ಕೆನ್ನಂ ॥ ೨೧ ॥

ಎಂಬುದುಂ ದೀಪಶಿಖಂಬೆರಸು ಸ್ವಯಂಪ್ರಭಾದೇವಿಯುಮಾ ಪೊಟ್ಟ ಪೊಟ್ಟಾಗೆ ರಥನೂಪುರ ಚಕ್ರವಾಳಪುರಕ್ಕೆ ಪೋಗಿ ರಾಜಮಂದಿರಮಂ ಪೊಕ್ಕು ತನ್ನ ಮುನ್ನೆ ಕನ್ನತನದಿಂದೆತ್ತಿ ಕೊಂಡಾಡಿದ ಮಾತಾಪಿತೃಪಕ್ಷದ ಜನನೀ ಜನಂಗಳ್ ನೋಡೆ ತನಗಿದಿರ್ವಂದೆಱಗಿ ಪೊಡೆವಟ್ಟು ಕಂಡ ಮಗಳುಮನಳಿಯನುಮಂ ಕಂಡು ಪರಸಿ ಪ್ರಣಯಿನೀ ವಿಯೋಗ ಪರಿಭವಾನಲದಹ್ಯಮಾನ ಮಾನಸನಪ್ಪ ಶ್ರೀವಿಜಯನುಮಂ ಭಂಗಿಸಿ ಅಕಲಂಕಾಚಾರಸಾರನುಮಂ ಲೋಕಜ್ಞತಾದಿ ಮೃದುವಚನ ರಚನೆಗಳಿಂದಮಾಱೆ ನುಡಿದು ಕಿಱಿದು ಪೊೞ್ತಿರ್ದು ನಿಜಸ್ನುಷಾವಿರಹ ವಿಧುರೆ ಪೊಣ್ಮುವ ಕಣ್ಣನೀರ್ಗಳಂ ಅಡಂಗಿಸಿ ಸಭೆಯೊಳಿಂತೆಂದಳ್—

ಆದಿಜಿನೇಂದ್ರನುಂ ನಮಿಯುಮಿರ್ವರಪೂರ್ವಜರಿಂತು ಚಿಂತೆಯಂ
ಖೇದಮುಮಲ್ತು ನಾಯಕಗುಣಂ ರಿಪುಭೂಮಿಯನುಯ್ದುಪಾಯಮಂ
ಪೋದೆಡೆಯಂ ಪ್ರಕಾಶಮಱಿದುಂ ತಡೆವೊಂ ಗಡಮೆಂದೊಡಂಗನಾ
ನಾದಮಿದೆಂತೊ ಸೈರಿಸುವರಾತ್ಮ ಪರಾಭವಮಂ ಕುಲೋದ್ಭವರ್ ॥ ೨೨ ॥

ಎಂಬುದುಂ ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ ಹೇತಿ ವಿದಾರಿಣಿಯುಂ ಬಂಧವಿಮೋಚಿನಿಯುಮೆಂಬಿವೆರಡುಂ ವಿದ್ಯೆಗಳಂ ಕೊಟ್ಟು ಮತ್ತಂ ಸಾಧಿತ ಮಹಾವಿದ್ಯಂ ಮಾಡಿ ಮಿತ್ರನನಭ್ಯುದಯಮಿತ್ರಂ ನಿಜತನೂಜಸಹಿತಮಾಜಿಗೆ ಮುಂದಟ್ಟಿ ತಾಂ ಸಹಸ್ರರಶ್ಮಿವೆರಸಗ್ರಿಮಂತಮೆಂಬ ಪರ್ವತದೊಳ್ ಮಹಾಬಳಾಭಿಧಾನವಿದ್ಯೆಯಂ ಸಾಧಿಸಿಕೊಂಡಾ ವಿದ್ಯೆವೆರಸು ಮನೋನಿಲವೇಗದಿಂ ಬಂದು ಚಂಪಾಪುರಮನೆಯ್ದೆವರ್ಪನ್ನೆಗಮಶನಿಘೋಷಂ ಶ್ರೀವಿಜಯನೊಳ್ ಬಹುರೂಪಿಣಿ ವಿದ್ಯಾಪ್ರಭಾವದಿಂ ಕಾದುವಾಗಳ್ —

ನೆಲದಾಕಾಶದ ದಿಕ್ತಟಂಗಳೆಡೆಯೊಳ್ ಪರ್ವಿರ್ದ ತದ್ರೂಪ ಸಂ
ಕುಲಮಂ ಕಂಡಸುರಾತ್ಮಜನ್ಮನ ಮಹಾವಿದ್ಯಾಬಲಂ ಶೀರ್ಣ ಪ
ಲ್ವಲ[ದಂ]ತಾಗೆ ನಿಜಾಗ್ರವಿದ್ಯೆ ತವಿಸುತ್ತಿರ್ಪನ್ನಮಾಟಂದು ದೋ
ರ್ವಲದೇಕಾಂಗನಿವಂ ದಲೆಂದು ನುಡಿದಂ ಸೌಜನ್ಯಕಂದಾಂಕುರಂ ॥ ೨೩ ॥

ಜಾರಂಗೆ ವಿಜಯಕಾಮಿನಿ
ಕೂರಳೆ ಚಲವಿರದು ಕೆಯ್ದು ಬೆಸಕೆಯ್ಯದು ಸಂ
ಸಾರದೊಳೆನೆಯೆನೆ ದಟಿಮೊಳ
ಸೋರೆ ಖಗೇಶಾವನೀಶಸೈನಿಕರಾರ್ದರ್ ॥ ೨೪ ॥

ಅಂತು ತನ್ನಂ ಮುನ್ನಂ ಬೀರನೆಂದವರ್ ಭೀರುವೆನೆ, ಕಲಿಯೆಂದವ-ರಯ್ಯಗಲಿಯೆನೆ, ಪ್ರಾಣವನೆ ಕಾವ ಬಗೆ ಮಿಗೆ ಸ್ವಾಮಿದ್ರೋಹನಾದ ವೈದ್ಯನಂತೆ ಸುತಾರಾಪಹರಣಮನೆಯ್ದಿಯುಂ ದೆಸೆಗೆಟ್ಟೋಡುವಶನಿಘೋಷನ-ಸುರ್ವರಾಸ್ಯತಿಲಕಂ ಕೊಂದಲ್ಲದಿರೆನೆಂದು ವಿದ್ಯೆಗಳಂ ಬೆನ್ನೊಳ್ ತಗುಳ ವೇೞ್ದು ತಾನುಂ ಶ್ರೀವಿಜಯನುಂ ವಿದ್ಯಾಧರ ಶೂರಸೈನ್ಯಾವಸ್ಕಂದನ ಸಮನ್ವಿತಂ ಬೆಂಕೊಳ್ವುದುಂ ಅಶನಿಘೋಷನಪರಣನಾಶಿಕ್ಯನಗರ ಸಮೀಪದ ಗಜಧ್ವಜಾಭಿಧಾನಾಚಲದ ಮೇಗಿರ್ದು—

ವಿನಿಹತಕಲ್ಮಷಂ ಜಿನನನಂತ ಚತುಷ್ಟಯಭಾಗಿ ಭವ್ಯನಂ
ದನನಖಿಲಾಮರೇಂದ್ರ ಖಚರೇಂದ್ರ ಸುರೇಂದ್ರನತಂ ಶರಣ್ಯನ
ಪ್ಪಿನಮಭವಾಂಘ್ರಿ ಪದ್ಮಯುಗಳಕ್ಕೆಱಗಿರ್ಪುದುಮಾಗಳೋಡುವಾ
ತನ ಭಯ ಮುಟ್ಟುವಾತನ ಛಲಂ ತವುತಂದುವು ತತ್ಸಮೀಪ
ದೊಳ್ ॥ ೨೫ ॥

ಅಂತು ಬಿಱುತು ಬೆಳ್ಕೋಟವೋಡುವಶನಿಘೋಷನ ಭಯರಸಮುಂ, ಕರುತ್ತು ನಟ್ಟು ಬೆನ್ನಟ್ಟುವ ಗಗನಚರೇಂದ್ರನ ರೌದ್ರರಸಮುಂ ನಿದ್ರಾವಿದ್ರಾವಣನ ಲೋಚನದ್ವಯ ರಸನದಂತೊಡನೊಡನೆ ಮಾಣ್ಬುದುಮಶನಿ-ಘೋಷಂ ಮನದೊಳ್ ನಿಶ್ಯಂಕನಾಗಿ—

ಅವಯವದಿಂದಂದುರ್ಚುವ
ಭಯಭಯಮುಂ ಶಿಥಿಲಮಾದುದೆಂದೊಡೆ ತಾಂಶಾ
ಶ್ರವಭಯಮೋ ಗಹನಮೊ ಕ
ರ್ಮವೈರಿ ನಿರ್ಮೂಲನಾಂಘ್ರಿ ಕಮಲಾಂತಿಕದೊಳ್ ॥ ೨೬ ॥

ಎಂದು (ಬಗೆದು) ಬಗೆಯುತ್ತಿರ್ಪಿನಂ ಪಾಪೇಭಕಂಠೀರವನುಂ ಶ್ರೀವಿಜಯನುಮಜಾತನ ಪಾದಸರೋಜಯುಗಳಕ್ಕೆಱಗಿ —

ಆಕ್ಕಟ ಬಡವನೊಳೀತನೊ
ಳಕ್ಕುಮೆ ಚಲವಿೀತನಿಂದಮಧಿಕನೊಳಕ್ಕುಂ
ತಕ್ಕುದೆ ಮುಳಿಸು ಜಿನೇಂದ್ರನ
ಪಕ್ಕದೆ ಪೊತ್ತಿಸೆಯುಮನಲನುರಿಗುಮೆ ಜಲದೊಳ್ ॥ ೨೭ ॥

ಅಂತು ವಿದ್ಯಾಧರ ಶಿಖಾಯಮಾನನುರ್ವರಾಸ್ಯ ತಿಲಕನುಂ ಶ್ರೀವಿಜಯನುಂ ವಿನಯಾಂಬುಜಾತ ಬಂಧುವಂ ಭಕ್ತಿಭರಾನತರೋಲಗಿಸುತ್ತಿರ್ಪನ್ನೆಗಂ ಸುತಾರಾಸಮೇತಂ ಸ್ವಯಂಪ್ರಭೆ ಬಂದು ತತ್ಕೇವಳಿಗೆ ಭಯವಿನಮಿತರಾಗಿ ಕುಳ್ಳಿರಲೊಡಂ–

ವಿಜಯಾರ್ಧೇಶಂ ಬೆಸಗೊಳೆ
ವಿಜಯಾಖ್ಯಜಿನೇಂದ್ರನಱಿಯೆ ಬೆಸಸಿದನಾಗಳ್
ತ್ರಿಜಗನ್ನುತ ಜಿನಧರ್ಮಮ
ನಜೇಯಮಂ ಜೀವಕರ್ಮಭೇದಸ್ಥಿತಿಯಂ ॥ ೨೮ ॥

ವಿಜಯಕೇವಳಿ ಬೆಸಸುವುದುಂ ವಿಬುಧವನಜ ವನಹಂಸನೇಕಾದಶ ವಿಧಶ್ರಾವಕವ್ರತಮೆಲ್ಲಮಂ ಹೃದಯಂಗಮಾಧಿಕ ಸಮ್ಯಗ್ದರ್ಶನಪುರಸ್ಸರಂ ತನಗಲಂಕಾರಂ ಮಾಡಿ–

ಕ್ಷಪಿತ ದುರಿತನ ವಚಃ ಕ
ರ್ಣಪೂರಮಂ ಶ್ರವಣನಿಕಟದೊಳ್ತಾಳ್ದಿ ಪರಂ
ತಪನಾ ಜಿನಚಂದ್ರಂ ಜೈ
ನಪಾದನತಮಕುಟವರ್ತಿಯಂ ಬಿನ್ನವಿಕುಂ ॥ ೨೯ ॥

ಮದನುಜೆಯೊಳಶನಿಘೋಷಂ
ಗದೇಕೆ ಪಿಱಿದಾಗ್ರಹಂ ಕಟಲ್ವೇಟ್ಟುದದಂ
ತ್ರಿದಶೇಂದ್ರವಂದ್ಯ ಬೆಸನೆನೆ
ಪೊದಟ್ಟುದರ್ಹನ್ಮುಖೇಂದು ದಿವ್ಯನಿನಾದಂ ॥ ೩೦ ॥

ನಾನಾಭಾಷಾತ್ಮಕಂ ಮಾನವ ದಿವಿಜ ಸದಃಕರ್ಣಪಾತ್ರಕ್ಕೆ ತದ್ವಿ
ಜ್ಞಾನಂ ತಂತಮ್ಮ ಭಾಷಾರವದಿನೆಸೆಯೆ ಪೊಣ್ಮುತ್ತು ದಿವ್ಯಧ್ವನಿ ಪ್ರಾ
ದಾನಂ ಪೇಱ್ದೊ ಜಿನಂ ಕೇಳ್ದೊರಖಿಳ ವಿನೇಯಾರ್ಥಿಗಳ್ ತತ್ಕಥಾಸಂ
ತಾನಂ ಧರ್ಮಶ್ರವಃ ಸುಂದರಮೆನೆ ಪೇಱಿದೇವಣ್ಣಿಪೊಂ ಬಣ್ಣಿಪಣ್ಣಂ ॥ ೩೧ ॥

ಎಂಬ ಪೆಂಪು ದೊರೆವೆತ್ತು ಕಥಾರಸಮತಿಶಯಮುಮಂ ಪೊಂಪುೞಿಯೋಳಿಯುಮಾಗೆ ವಿಜಯಕೇವಳಿಗಳಿಂತೆಂದು ಬೆಸಸಿದರೀ ಜಂಬೂ ದ್ವೀಪದ ದಕ್ಷಿಣಭರತದ ಮಳಯ ವಿಷಯದ ರತ್ನಪುರಮಂ ಶ್ರೀಷೇಣನೆಂಬನರಸ ನಾಳ್ವೊನಾತಂಗೆ–

ಸೊಗಯಿಸೆ ಸಿಂಹನಂದೆಯುಮನಿಂದಿತೆಯುಂ ತನುಜನ್ಮಜನ್ಮಭೂ
ಮಿಗಳವರಿಂದಮಾ ಮಹಿಭುಜಂ ಕರಮೊಪ್ಪಿದನೈಂದ್ರವಾರುಣಾ
ಶೆಗಳಿನತೀವ ರಕ್ತನಿನನಗ್ಗಳಮೊಪ್ಪುವವೋಲಧೀಶನಾ
ಕೆಗಳೊಳಪತ್ಯರಂ ಪಡೆದನಿರ್ವರನಿಂದ್ರನುಪೇಂದ್ರನೆಂಬರಂ ॥ ೩೨ ॥

ಆ ಭೂಪನ ಭುಜಯುಗಬಲ
ವೈಭವಮೆ ತನೂಜಯುಗಳಮಾದುದು ವಿದ್ಯಾ
ಪ್ರಾಭವದಿನೆಸೆದು ಯೌವನ
ಶೋಭೆಗಡರ್ಪಾದರೆನಿಸಿದರ್ ಪ್ರಿಯತನಯರ್ ॥ ೩೩ ॥

ಅವರಿರ್ವರೊಳಂ ಕೃತದಾರಪರಿಗ್ರಹನಿಂದ್ರಂ ಯುವರಾಜ್ಯಪದದೊಳ್ ನಿಂದು ತನ್ನ ಶ್ರೀಮತಿಯೆಂಬರಸಿಯೊಳ್ ಕಳಾಭಿನೂತ ಚಂದ್ರಪ್ರತಿಚ್ಛಂದಂ ಚಂದ್ರನೆಂಬೊಂ ಮಗನಂ ಪಡೆದು ಸಂತಸದಿಂದಿರ್ಪಿನಂ ಆದಿರಾಜಪರಂಪರಾ ಪುತ್ರ ಪೌತ್ರನಕಳಂಕಾಚಾರಸಾರಂ ಸುಖದೊಳರಸುಗೆಯ್ಯೆ ಮತ್ತೊಂದು ದಿವಸದೊಳೊರ್ವಳ್—

ಸುಂದರಿ ಸಾಧ್ವಸಾಕುಳೆ ಸಭಾಂತರಮಂ ಪುಗುತಂದು ರಕ್ಷ ರ
ಕ್ಷೆಂದು ನೃಪಂಗೆ ಪುಯ್ಯಲಿಡುತುಂ ನಿಲೆ ಭೂಪನಭೂತಪೂರ್ವಮಾ
ಕ್ರಂದನಮೆಂದುಮೆನ್ನರಸಿನೊಳ್ ನಗೆಯೊಳ್ ಮೊದಲಾಗೆ ಕೇಳಲಾ
ಗಿಂದು ಚೋದ್ಯಮೆಂದುಸಿರದಿರ್ದನಿಸಂ ಖತಭಂಗ ಶಂಕೆಯಿಂ ॥ ೩೪ ॥

ಬಱಿಕಮಾಕೆಯಂ ನಿನಗಿನಿವಿಱಿದು ಭಯಾವೇಶಮಾರದೆಸೆಯಿಂದನ್
ದುದೆಂದರಸಂ ಬೆಸಗೊಳ್ವುದುಮಾ ಬಾಲಿಕೆ ಗದ್ಗದಕಂಠೆ ಬಿನ್ನವಿಕುಂ ನ
ಪುರೋಹಿತಂ ಸತ್ಯಕಿಗಂ ಜಂಬೂವತಿಗಂ ಪುಟ್ಟಿದೆನಾಂ ಸತ್ಯಭಾಮೆಯೆ
ನೆನ್ನಂ ಕಪಿಳನೆಂಬೊಂಗೆ ಕೊಟ್ಟರ್. ಕೆಲಕಾಲಕ್ಕಾತನ ದುರಾಚರಣಕ್ಕ
ಕೊಕ್ಕರಿಸುತ್ತಿರೆ ತದೀಯ ಜನಕನೆಮ್ಮ ಮನೆಗೆ ಬಿರ್ದುವಂದನಂ ಸನ್ಮಾ
ದಾನಾದಿಗಳೊಳ್ ಸಂತಸಂಬಡಿಸಿ ಮನಂಗೊಂಡೊಳಪೊಕ್ಕು ಬೆಸಗೊಳ್ವು
ಮಾಮಹಾನುಭಾವನಿಂತೆಂದಂ – ಮಗಧ ವಿಷಯದಚಲಗ್ರಾಮದೊ
ಧರಣೀಜಟನೆಂಬೆನಾನೆನ್ನ ಪಾರ್ವಂತಿ ಯಶೋಭದ್ರೆಯೆಂಬಳೆನಗಮಾಕೆ
ಶ್ರೀಭೂತಿಯುಂ ನಂದಭೂತಿಯುಮೆಂಬರಿರ್ವರ್ ಕೂಸುಗಳೊಳರಾಗೆನ್ನ ಗೃ
ದಾಸಿಯನೊಳಗಿಟ್ಟಲ್ಲಿ ಪುಟ್ಟಿದನಿವಂ ಕಪಿಲನೆಂಬೊನೇಕ ಸಂಧಿಯಪ್ಪುದ
ನಾನುಂ ಮತ್ತಿನ—

ಮತ್ತನಯರ್ಕಳನೋದಿಸೆ
ಮತ್ತಿವನಕ್ಲೇಶದಿಂ ಶ್ರುತಿಸ್ಮೃತಿ ಶಾಸ್ತ್ರೀ
ಪಾತ್ರಮುಖನಾಗೆ ಜಡರ
ಸ್ಮತ್ತನುಜರ್ ಕಲ್ಲದಿರೆ ತದಂಬಿಕೆ ಮುಳಿಸಿಂ ॥ ೩೫ ॥

ತೊೞ್ತಿನ ಮಗನಧ್ಯಯನಮೆ
ಬಾೞ್ತೆ ಮದಾತ್ಮಜರ ಬುದ್ಧಿಯುಂ ವೃದ್ಧಿಯುಮೇಂ
ಬಾೞ್ತೆ ನಿನಗೆಂದಟಿಲ್ದಳ್
ತೞ್ತಿರೆ ಸತಿ ಸುಮತಿ ಕುಮತಿ ಖೇದಾಂಧತೆಯಿಂ ॥ ೩೬ ॥

ಮೆಲ್ಲನಾಕಾಂತೆಯನಧ್ಯಯನದೊಳ್ ಪ್ರತಿಬೋಧಿಸಲ್ ಬಂದಾ
ನಿನ್ನ ಮಗಂದಿರನೋದಿಸುವಲ್ಲಿಗೊಡನೊಡನೆ ಬಂದಿವಂ ಕುಶಾಗ್ರಮತಿ ಕಲ್ತು
ಮತ್ತಮಿವರ್ಕಳೇಗೆಯ್ದುಂ ಕಲಲಾಱರೇಗೆಯ್ವೆನೆಂದೊಡಾಕೆ ನಿರುತ್ತರೆಯಾಗಿ
ಎನ್ನ ದೆಸೆಯ ಮುಳಿಸನುೞಿದಂದಿಂದಿತ್ತಂಗೆ ನಿಂದು ಪೊತ್ತುಕಾಯ್ದು ಬೇಸರಿಸಿ
ನಿರ್ವಂದದಿನಟ್ಟಿ ಕಳೆಯೆ ಬಂದನಿದೀತನ ವೃತ್ತಕಮೆಂದು ವಿಪ್ರಂ ಪೋಪುದು
ಮಾಂ ಚಿಂತಾರ್ಣವಾವಗಾಹದೊಳಿರ್ದೊಡೀ ಪೋದ ರಾತ್ರಿಯೊಳ್ ನಿನ್ನ
ನೋಲಗಿಸಿ ಕಪಿಲಂ—

ನಿಚ್ಚಲಿ ಕಾರಿರುಳೊಳ್ ಪೋಜಿ
ಪಚ್ಚವನುಟ್ಟಿರ್ದಿಜುಂಕಿ ಕಕ್ಷದೊಳಾ ಪಾ
ಟಚ್ಚರ ಭಯದಿಂದುಟ್ಟು ಪ
ಟಚ್ಚರಮಂ ಮನೆಗೆ ವಂದು ನಿಂದಂಗಣದೊಳ್ ‖ ೩೭ ‖

ಕವುಂಕುಟಿೞಿಜುಂಕಿದುಟ್ಟುದುಂ ಮೇಲುದಮಂ ತೆಗೆದುಟ್ಟುಂ, ಪೋದುದುಂ ಮನೆಯಂ ಪೊಕ್ಕು ವಿದ್ಯಾಪ್ರಭಾವದಿಂ ಮನೆಯೊಳ್ ನಾನದೆಬಂದೆನೆಂದು ನುಡಿಯೆ ಕೇಳ್ದಾಂ ಮನದೊಳ್ ನಾಣ್ಚದ ನನೆಯದ ನಿನಗೆ ನಾಂಬುದುಂ ನನೆವುದುಮೆತ್ತಣಿಂ ಬಂದುದೆಂದಿರಲ್ಲನ್ನೆವರಂ ಬಲ್ಲಾಳ್ತನದೊಳೆನ್ನನುಭವಿಸಲ್ ಬಂದೊಂ ನೀನುಂ ವರ್ಣಾಶ್ರಮ ಗುರುವಯ್ ಎನ್ನಂ ಕಾವುದೆನಲೊಡಂ—

ಪರಿಭವಿಸಿ ಕಪಿಲನಂ ಪುರ
ವರದಿಂ ಕಳೆದಿರಿಸಿ ಸತ್ಯಭಾಮೆಯನಂತಃ
ಪುರದೊಳ್ ಕಿಱಿಯರಸಿಯ ಪಿರಿ
ಯರಸಿಯ ಪಕ್ಕದೆ ತದೀಯ ರಕ್ಷಣವಿಧಿಯಂ ‖ ೩೮ ‖

ಧರಣೀಶ್ವರಂ ಪುಣ್ಯೋಪಾದೇಯನಾಗಿರ್ಪಿನಂ ಪಿರಿಯನಪ್ಪಿಂದ್ರನರಸಿ ಶ್ರೀಮತಿಗೆ ಬೞಿವೞಿಯೆ ಬಂದ ವಸಂತಸೇನೆಯನೊರ್ಮೊದಲೆ ಕಂಡು—

ನಿಧಿಯಂ ಕಂಡಂತೊಳಗಿಡೆ
ಮದಿರಾಕ್ಷಿಯನಿಂದ್ರನಿಡಿದ ನನೆಗಣೆಯಿಂ ತೀ
ವಿದ ದೊಣೆಗೆಣೆಯಾಗೆದೆರ್ಗ ಕೋ
ಟ್ಟುದಿಗೊಳೆ ಸ್ವೈರಿಸದುಪೇಂದ್ರನವಳೊಳ್ ನೆರೆದಂ ‖ ೩೯ ‖

ಅನ್ನೆಗಮುದನರಸನಱಿದು—

ಬಾರಿಸೆ ವಾರಿಸೆ ಬಂದು ಮ
ನೋರಮೆಗಳುಪಿದನುಪೇಂದ್ರನತಿರಕ್ತರನಾರ್
ವಾರಿಸುವರ್ ಸಂಧ್ಯಾರಾ
ಗಾರುಣ ರುಚಿ ವಾರಿಸಲ್ಕೆ ವರ್ಕುಮೆ ರವಿಯೊಳ್ ‖ ೪೦ ‖

ಎಂಬೀ ವ್ಯತಿಕರಮನಿಂದ್ರನಱಿದು–

ಸ್ಮಯಮೆರ್ದೆವುಗೆ ಕಿವಿವುಗೆ ದು
ರ್ನಯೋಕ್ತಿ ಕೊಲೆಗೆಯ್ದೆ ತನ್ನಬಗೆಯಿಂ ತತ್ಕಾಂ
ತೆಯೊಳಳುಪಿ ನೆರೆದೊಡೇಂ ಕ
ಯ್ಪಿಂಯುಣ್ಬರಂ ರಸಮೆ ಬಾರಿಕುಂ ಕೆಮ್ಮನಿರಿಂ ॥ ೪೧ ॥

ತಪ್ಪದೆ ಗುರುವಚನಮುಮಂ
ತಪ್ಪಲ್ ಬಸನಿಗೆ ಮದೀಯ ಕೋಪದ ಪದನೇಂ
ತಪ್ಪಿದುದೆ ಪರಕಳತ್ರಮ
ನಪ್ಪಿದುರಂ ಬೆರಸು ಖಳನ ತಲೆಯಂ ಕೊಳ್ವೆಂ ॥ ೪೨ ॥

ಎಂದಿಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು ಬೂತಟ್ಟಿದೊಡುಪೇಂದ್ರನುಮಿದಿರಿದಿರಂ ಗಱಿವಱಿಯ ಪಾವು ಬರ್ಪಂತೆ ಬಂದು ತಾಗುವುದುಂ—

ಉಭಯಾಬ್ಧಿರವದಿನಿಭಘಟೆ
ಯಿಭಘಟೆಯೊಳ್ ಕುದುರೆ ಕುದುರೆಯೊಳ್ ತೇರ್ ತೇರೊಳ್
ಸುಭಟರ್ ಸುಭಟರೊಳುಱದಿಱೆ
ದುಭಯಬಲಂ ಮೊಟ್ಟನಾದೊಡಿಂದ್ರನುಪೇಂದ್ರಂ ॥ ೪೩ ॥

ಮೂಗುರ್ಚಿದೆಮ್ಮೆ ವೋರಿಯುಂ, ಪೆಱಮೆಟ್ಟದ ತಗರುಂ ತಾಗುವಂತೆ ತಂತಮ್ಮೇಱಿದಾನೆಗಳಂ ನೂಂಕಿ ಚಕ್ರಾಚಕ್ರಿಯುಂ ಖಟ್ಗಾಖಟ್ಗಿಯುಮಾಗೆಯುಂ ಪೆಣೆದಿಱಿವ ಪದದೊಳ್—

ಕಡುಗರ್ಪಿಡಿದೆರಡಬ್ಧಿದ
ನಡುವೆ ಬೆಡಂಗಿಡಿದು ತೊಳಗಿ ಪೊಳೆವೆಳಮಿಂಚೊಂ
ದೆಡೆವುಗುವ ತೆಱದಿನೆರಡಿಭ
ದೆಡೆವುಗೆ ಮಣಿಕುಂಡಲಾಭಿಧಾನಂ ಖಚರಂ ॥ ೪೪ ॥

ಇಂದ್ರನುಮುಪೇಂದ್ರನುಂ ನೋಡಿ—

ಎಡೆವುಗುವುದುಮಾನೆಯು ನೆಡೆ
ಯೆಡೆಯಿಂದಳವಡಿಸಿ ನಿಜಿಸೆ ಮಣಿಕುಂಡಲನೇಂ
ಜಡರಿರೊ ವಸಂತಸೇನೆ ದ
ಲೊಡವುಟ್ಟಿದಳಕ್ಕುಮಿಜಿವ ನಿನಗಂ ತನಗಂ ‖ ೪೫ ‖

ಎಂತೆನೆ: ಧಾತಕೀಷಂಡದ ಮೂಡಣಮಂದರದ ಪೂರ್ವವಿದೇಹದ ಸೀತಾನದಿಯ ಬಡಗಣತಡಿಯ ಪುಷ್ಕಳಾವತೀ ವಿಷಯದ ವಿಜಯಾರ್ಧ ಪರ್ವತದ ದಕ್ಷಿಣಶ್ರೇಣಿಯೊಳಾದಿತ್ಯಪುರಮನಾಳ್ವ ಸುಕುಂಡಲಂಗಂ ಅಮಿ ತೆಗಂ ಸೀತಾನದಿಯ ಬಡಗಣತಡಿಯ ಪುಷ್ಕಳಾವತೀವಿಷಯದ ಪುಂಡ ರೀಕಿಣಿಯ—

ಕುಸುಮಿತ ಬಹಿರುಪವನ ಭೂ
ಪ್ರಸರದೊಳಿರ್ದಮಿತ ಕೀರ್ತಿಕೇವಳಿಯಂ ಬಂ
ದಿಸಿ ಮದ್ಭವಪದ್ಧತಿಯಂ
ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ ‖ ೪೬ ‖

ನೀನತೀತಭವದೊಳ್ ಉಪಾರ್ಜಿತೋರ್ಜಿತ ಪುಣ್ಯನೆಯಾಗಿ ಸೌಧರ್ಮ ಕಲ್ಪದೊಳ್ ದೇವನಾದೈ, ನಿನ್ನ ಮೂವರ್ಮಗಳ್ದಿರೊಳಗಿರ್ವರಲ್ಲಿಯೆ ದಿವಿಜ ರಾದರ್, ಒರ್ವಳನಂಗರಾಗರಸರಸಿಕತೆಯಿಂದಮಪ್ಸರಃ ಸಮುದಯದೊಳಮರ ವಾರವನಿತೆಯಾದಳ್, ಎಂದು ಕೇವಳಲೋಚನಂ ಬೆಸಸುವುದುಂ ಎನಗಾಮೂ ವರುಂ ಮಗಳ್ದಿರಾದಂದಮುಮಂ ನಾನಾಭವದಿಂದ ಮತ್ತಣಭವದೊಳೆಲ್ಲಿ ಪುಟ್ಟಿಬಂದೆನೆಂಬುದುಮಂ ಬೆಸಸುವುದೆ[ನೆ] ಸೌಧರ್ಮಕಲ್ಪ ಸಮುತ್ಪತ್ತಿವರ ಮಲ್ಲಿಂದತ್ತಣ ಭವ ಪ್ರಾದುರ್ಭಾವಮುಮಂ ಭವಾವನೀರುಹವಿದಾರಕುಠಾರಂ ಬೆಸಸಿದಂ. ಪುಷ್ಪವರದ್ವೀಪದ ಪಡುವಣ ಮಂದರದ ಅಪರವಿದೇಹದ ಸೀತಾ ನದಿಯ ತೆಂಕಣತಡಿಯ ವಿಷಯದ ಸರಿದ್ವರದ ವೀತಶೋಕಪುರಮನಾಳ್ವೊಂ ಚಕ್ರಧರನೆಂಬೊಂ ಸಕಲಚಕ್ರವರ್ತಿ, ತದಗ್ರಕಾಂತೆಯರ್ ವಿದ್ಯುನ್ಮತಿಯುಂ

ಕನಕಶ್ರೀಯುಮೆಂಬವರೊಳಗೆ ವಿದ್ಯುನ್ಮತಿಗೆ ಪದ್ಮಾವತಿಯೆಂಬಳ್ ಮಗಳ್,
ಮತ್ತಿನ ಕನಕಶ್ರೀಗಂ ಪದ್ಮಲತೆಯುಂ ಕನಕಲತೆಯುಮೆಂಬ ಮಗಳ್ದಿರಾಗಿ—

ದಂಡಿತ ವೈರಿ ಚಕ್ರಧರನೆಂಬ ನೆಗೞ್ತೆಯ ಚಕ್ರವರ್ತಿ ಷ
ಟ್ಖಂಡಮನೇಕ ಭೋಗ್ಯಮನನಾಕುಳಮಾಳೆ ಜಿನಾಗಮೋಕ್ತಿ ಕೈ
ಯ್ಕೊಂಡಿರೆ ಚಿತ್ತಮಂ ಸುತೆಯರುಂ ನೃಪಕಾಂತೆಯರುಂ ವ್ರತಂಗಳಂ
ಕೊಂಡೊರೊಡರ್ಚಿ ಸುವ್ರತ ತಪೋಧನೆ ತಮ್ಮನಣುವ್ರತಂಗಳಂ ॥ ೪೭ ॥

ಅಂತು ನೃಪನಗ್ರಮಹಿಷಿಯರಿರ್ವರುಂ ಮಗಳ್ದಿರ್ ಮೂವರುಂ ಶ್ರಾವಕ
ವ್ರತಂಗಳಂ ಕೆಯ್ಕೊಂಡರಲ್ಲಿ ಕನಕಶ್ರೀಯುಂ ಕನಕಲತೆಯುಂ ಪದ್ಮಲತೆಯುಂ
ಸಮ್ಯಗ್ದರ್ಶನಮನಸ್ಖಳಿತಮಾರಾಧಿಸಿ ನಿಜಾಯುರವಸಾನದೊಳ್ ಸಮಾಧಿ
ವಡೆದು ಮುಡುಪಿ ಸೌಧರ್ಮಕಲ್ಪದೊಳ್ ಸಾಮಾನಿಕದೇವರಾದೊರ್, ಆ
ವಿದ್ಯುನ್ಮತಿಯುಂ ಪದ್ಮಾವತಿಯುಂ ಸುದರ್ಶನೋತ್ತರಮಪ್ಪುಪಾಸಕ ವ್ರತೋ
ಪಪನ್ನೆಯಪ್ಪುದಱಿಂ ಪದ್ಮಾವತಿ ಮೊದಲನಾಕದೊಳಚ್ಚರಿಸಿಯಾದಳ್, ಆ
ಕನಕಶ್ರೀಯೆ ನೀಂ ಬಂದಿಲ್ಲಿಯೆ ನೀಂ ಮಣಿಕುಂಡಳನಾದೆಯೆಂಬುದುಮೆನ್ನ
ಮೂವರ್ ಮಕ್ಕಳುಮೆಲ್ಲಿ ಪುಟ್ಟಿದರೆಂಬುದಂ ಎನಗೆ ಬೆಸಸುವುದೆನೆ ಜಂಬೂ
ದ್ವೀಪದ ದಕ್ಷಿಣಭರತದ ಮಳಯದೇಶದ ರತ್ನಪುರಮನಾಳ್ವೊಂ ಶ್ರೀಷೇಣನರಸಿ
ಯಪ್ಪ ಸಿಂಹನಂದೆಗಮನಿಂದಿತೆಗಂ ಕನಕಲತೆಯಪ್ಪಂದಿನ ದಿವಿಜನುಮಾ
ಪದ್ಮಲತೆಯಪ್ಪ ದೇವನುಮಿಂದ್ರನುಮುಪೇಂದ್ರನುಮೆಂಬ ಮಕ್ಕಳಾದರಿನ್ನಾ
ಪದ್ಮಾವತಿಯೆಂಬಚ್ಚರಸಿಯೆ ತತ್ಪುರದೊಳ್ ವಸಂತಸೇನೆಯೆಂಬ ಪಣ್ಯಾಂಗನೆ
ಯಾಗಿರೆ ತದೀಯಾಗ್ರಹಸ್ತಗ್ರಹಗ್ರಸ್ತರಿಂದ್ರನುಮುಪೇಂದ್ರನುಮಿಾಗಳ್
ಕಾದಿದಪರೆಂಬುದಂ ಬೆಸಸಿದ ಜಿನೇಂದ್ರಪಾದಾರವಿಂದಂಗಳ್ಗೆಱಗಿ ಸ್ನೇಹಪಾಶ
ಪಾಶಿತನೆಮಾಗಿ ನಿಮ್ಮಜ್ಞಾನವಿಳಸನಮಂ ಬಾರಿಸಲ್ ಬಂದೆನಲ್ಲದೆಯುಂ—

ಮಗಳಕ್ಕಂ ತಂಗೆ ತಾಯ್ನಾದಿನಿ ಸೊಸೆ ಮದವಳಜ್ಜಿ ಮುತ್ತಬ್ಬೆ ಮತ್ತ
ತ್ತಿಗೆ ಕೂಸತ್ತತ್ತೆಯೆಂಬೀ ಮೊರೆಯ ವನಿತೆಯರ್ ಜನ್ಮ ಜನ್ಮಂಗಳೊಳ್ ತಾ
ಮೆ ಗಡಂ ಬೇಱಾಗಿ ಪುಟ್ಟಿರ್ದನುಭವಿಸುವರೆಂದಂದೆ ಸಂಸಾರದೊಳ್ ಪೇ
ಸುಗೆಗೆಟ್ಟೀ ನಾಣಪುತ್ತಸ್ಪಟಿಜಗಳದೊಳೇನಮ್ಮ ತರ್ಕ್ಕೂರ್ಮೆಯುಂಟೇ
॥ ೪೮ ॥

ಎಂಬಿನಿತನಾತನಱಿಪಲೊ
ಡಂ ಬಿಲ್ಲುಂಬೆಱಗುವಮಾಗಿ ತಮ್ಮ ಮನಂ ಕ
ಯ್ಯಂಬೇಱಿನಥಟುವಸ್ತ್ರ ಕ
ದಂಬಕಮುಂ ಸೋರೆ ತಮ್ಮ್ಮತಿರ್ವರುಮಾಗಳ್ ॥ ೪೯ ॥

ಗಟಿಗಟಿ ಪುರಿವಶ್ರುವ ಕೊರ
ಲಿಱುವಿಗಮುಗಿಮಟ್ಟಿದಟ್ಟಿ ವೊಟಗಿಂಗಂ ಪೊಂ
ಪುಱುಯೆನಿಸಿದಾತ್ಮ ನಿಂದೆಗ
ಮಟಿಲ್ಲಮಿಂದ್ರನುಮುಪೇಂದ್ರನುಂ ಪದನಾದರ್ ॥ ೫೦ ॥

ಆಗಿ–

ಆ ಭವದೊಳ್ ತಾಯಾಗಿಯು
ಮೀ ಭವದೊಳ್ ತಂದೆಯಾಗಿಯುಂ ನೀನೆಮ್ಮಾ
ರಾಭಸಿಕವೃತ್ತಿಯಂ ವಾ
ಗ್ವೈಭವದಿಂ ಕಳೆದು ಪೊರೆದೆಯೆಮ್ಮನನಿಂದ್ಯಾ ॥ ೫೧ ॥

ಅಂತುಮಲ್ಲದೆಯುಂ ಸೌಜನ್ಯಜ್ಞಾನಾಧೀನ ಮಾನಸನೆಯಾಗಿ ನೀನಿಲ್ಲಿವರಂ ಬಂದೆಮ್ಮಂ ಪ್ರಭೋಧಿಸಿದೆಯಲ್ಲದಂದು ಗಭೀರ ಘೋರ ಸಂಸಾರ ಪಾರಾವಾರಪಾತಕ್ಕೆ ಪಕ್ಕಾಗಲೀಯದಾವೊಂ ಕಾವೊನದಱಿಂದಮೆಮಗೆ ನೀನೆ ಕಲ್ಯಾಣಮಿತ್ರನೈ, ನಿನ್ನಿಂದಗ್ಗಳಮಪ್ಪೊಡಮರ್ಹತ್ಪರಮೇಶ್ವರನಲ್ಲದೆ ಪೆಱರಿಲ್ಲೆಂದಷ್ಟಾಂಗವೆರಸಿ ಪೊಡವಟ್ಟು ಖಚರೇಶ್ವರನಂ ವಿಸರ್ಜಿಸಿ ಸಕಲ ಕರ್ಮನಿರ್ಜರಾಕರಣ ಕಾರಣ ನಿರಂಜನದೀಕ್ಷೆಯಂ ಸುಧರ್ಮಮುನಿನಾಥ ಪಾದಪದ್ಮೋಪಕಂಠದೊಳಿಂದ್ರೋಪೇಂದ್ರರ್ ತಾಳ್ದಲೊಡಂ–

ಬೇಗಂ ಜಿನಚಂದ್ರನ ಮೊಗ
ರಾಗಂ ಬೇಸಗೆಯ ಬಿಸಿಲೊಳಟಿದ ಹರಿದ್ರಾ
ರಾಗದ ತೆಱದಿಂ ತನಯುವಿ
ಯೋಗದಿನೋರ್ವೊದಲೆ ಕಂದಿಕುಂದಿದುದಾಗಳ್ ॥ ೫೨ ॥

ಅಂತು ಪ್ರಿಯಪುತ್ರವಿಯೋಗ ವಿಹ್ವಲೀಭೂತ ಚೇತನೆಯಿಂ ಮೆಯ್ಯ
ನಿಱಿಸಲಾಱದೆಯುಂ ಪರಿಣತವಯಸನಾಗಿಯುಂ ಬಾಳಮರಣಮನ
ಕೊಂಡು–

ನಂಜಿನೊಳೂಡಿದ ಕಂಜವು
ನೆಂಜಲಿಸಿದ ಮಧುಪನಂತೆ ವಿಷವಿಷಮಕನ
ತ್ಕಿಂಜಲ್ಕ ಮನುತ್ಪಲವೊಂ
ದಂ ಜನಪತಿ ಕಂಪುಗೊಂಡು ತೂಂಕಂಗೊಂಡಂ || ೫೩ ||

ಬಾಯಟಿಾದಟ್ಟಿಮೆಟ್ಟಿಡುವಡಂಬಿಸ ರಂಡೆತನಕ್ಕೆ ಪೂಣ್ದಭಿ
ಪ್ರಾಯಮೆ ಸಿಂಹನಂದೆಗಮನಿಂದಿತೆಗಂ ಮೃಗಕಂತಮಾದ ತ
ತ್ನಾಯಕಮುರ್ಚೆ ಪೋಗದೆ ಮೃಗೀಯುಗಳಂ ಮಡಿವಂತೆ ಸತ್ತರಾ
ಘ್ರಾಯಿಸಿ ನೀಲನೀರಜಮನಿಷ್ಟವಿಯೋಗಮನಾರೊ ಸೈರಿಪರ್ || ೫೪ ||
ಮತ್ತಂ ಪುರೋಹಿತನ ಮಗಳಪ್ಪಾ–

ಸತಿ ಸತ್ಯಭಾಮೆ ವಿಕಸಿತ
ಶತಪತ್ರಪರಾಗಮಾತ್ಮ ನಾಸಾಪುಟ ನಿ
ಷ್ಪತಿತಂ ಕೊಳೆ ಮಡಿದಳ್ ಮಹಿ
ಪತಿಯೊಳಮರಸಿಯರೊಳಂ ಪೊದಟ್ದಿರೆ ಮೋಹಂ || ೫೫ ||

ಪಱಿದೆಳಲತೆಯುಮನಿಭಪತಿ
ಪಱಿದ ನವಾಮ್ರಮುಮನೆಯ್ದೆ ಪೋಲ್ತುವು ಜೀವಂ
ಪಱಿಸಟ್ಟು ಪೋಗೆ ತನುವಿಂ
ಕಱಿಂಗಿ ಕಾಂತಾಶರೀರಮುಂ ನೃಪವಪುವುಂ || ೫೬ ||

ಆದಿತ್ಯವಿರಹದೊಳಮು
ಕ್ಷೋದತಮಂ ಪರ್ವವಂತೆ ಜಗಮಂ ಜೀವಂ
ಪೋದೊಡಮುದಂಗರುಚಿ ಬೇ
ಱಾದುದು ನಡೆಜಂತ್ರಮಲ್ತೆ ನರರ ಶರೀರಂ || ೫೭ ||

ಆಗಳ್ ಮಂತ್ರಿಪುರೋಹಿತ ಸೇನಾನಾಯಕಾಂತಃಪುರಾವರೋಧ ಜನಂಗಳ್ ಹಾಹಾಕರುಣಧ್ವನಿ ಬಧಿರಿತಾಶಾವಳಯರರಸಂಗಮರಸಿಯರ್ಗಂ ಸತ್ಯಭಾಮೆಗಂ ಶರೀರಪೂಜೆಯಂ ಮಾಡಿ ಶರೀರ ಸಂಸ್ಕಾರವಿಧಿಯಂ ವಿಧಿ ಪೂರ್ವಕಂ ನಿರ್ವರ್ತಿಸಿ ರಾಜ್ಯಾರ್ಹನಪ್ಪಿಂದ್ರನ ಮಗಂ ಚಂದ್ರನಂ ಧರಾ ಭಾರಾಧುರಂಧರಂ ಮಾಡಿದರಿತ್ತ ಶ್ರೀಷೇಣಂಗಮಾಮೂವರುಮಂಗನೋತ್ತ ಮೆಯರ್ಗಮುತ್ತಮಪಾತ್ರದಾನದ ದಾನಾನುಮೋದದಭೂತಪುಣ್ಯದಿಂ ಧಾತಕೀಷಂಡದ ಮೂಡಣ ಮಂದರದುತ್ತರ ದಿಗ್ಭಾಗದೊಳುತ್ತರ ಕುರುವೆಂಬು ತ್ತಮ ಭೋಗಭೂಮಿಯೊಳು–

ಪ್ರಮುದೆಯರಾ ನೃಪದಾನಾ
ನುಮೋದದಿಂದಲ್ಲಿ ಬಂದು ಪುಟ್ಟಿದರೇನು
ತ್ತಮಮೊ ಮುನಿದಾನ ದಾನಾ
ನುಮೋದ ಸುಕೃತಾಗ್ರಗಣ್ಯಪುಣ್ಯಮಗಣ್ಯಂ ॥ ೫೮ ॥

ಅಂತಲ್ಲಿ ಜೀನಚಂದ್ರ(ನೆನಿಪ) ಶ್ರೀಷೇಣನುಂ ಸಿಂಹನಂದೆಯುಂ ಮಿಥುನರಾದರ್, ಭಾವಶುದ್ಧಿವಿಶೇಷದಿಂದಮನಿಂದಿತೆಯುಮಾರ್ಯನಾಗೆ ಸತ್ಯಭಾಮೆ ತದಾರ್ಯೆಯಾದಳಿಂತು–

ತವದ ಪುರಾತನ ಭವಬಂ
ಧವಿಸ್ಫುರತ್ಪ್ರೇಮಮಂತೆ ಬಂದವರ್ಗೆ ಪುನ
ರ್ನವಮಾದುದು ಪರಕಾಯ
ಪ್ರವೇಶದುಪಯೋಗ ಯೋಗಿಯಂತಾಭವದೊಳ್ ॥ ೫೯ ॥

## ೭. ಏಪ್ರೊಗೆಟ್ಟಿಸಿದೋ ಜಿನಚಂದ್ರ ವಿಭೂತಿಲೀಲೆಯಂ

ಶ್ರೀಕುರುಭೂಮಿ ಭವಂ ದಿ
ವ್ಯಾಕೃತಿ ಜಿನಚಂದ್ರದೇವನಿರೆ ಪರಸಲ್ ಬಂ
ದಾಕಾಶಚಾರಣರ್ ತಪ
ದಾಕಾರಮೆ ರೂಪುಗೊಂಡು ಬಂದಂತಾಗಳ್ ॥ ೧ ॥

ತಾಗೆವರೆ ಗಗನಚಾರಣ
ರಾಗಮನಮನಱಿದು ನಾಲ್ವರು ನಡೆದಿದಿರಂ
ಪೋಗಿ ಜಿನಪಾದಪದ್ಮ ಪ
ರಾಗಪರಾಗತ ಲಲಾಟತಟಮಂ ತಳೆದರ್ ॥ ೨ ॥

ಅಂತು ಯಶೋಧರ ಗುರು[ಗಳಂ] ಸಮುತ್ತುಂಗಾಸನದೊಳಿರಿಸಿ ಧರ್ಮಮಂ ಬೆಸಗೊಳೆ, ಸಂಕ್ಷೇಪದೊಳ್ ಪ್ರತಿಬೋಧಿಸಿ—

ನಿಟಿಲನ್ಯಸ್ತ ಕರಾಬ್ಜ ಸಂಪುಟವಿನಮ್ರಾತ್ಮಾಂಗರಂ ಭಕ್ತಿಲಂ
ಪಟರಂ ತನ್ಮುನಿ ಧರ್ಮವೃದ್ಧಿ ನಿಮಗೆಂದಾ ನಾಲ್ವರಂತಸ್ತಮಃ
ಪಟಮಂ ಪಿಂಗಿಸಿ ಭೋಗಭೂಮಿಜರ ಕಣ್ಣಾಗಳ್ ನಭೋಮಾರ್ಗ ಪ
ರ್ಯಟನಂ ಶಿಕ್ಷಿಸಿಪೋದರಾತ್ಮನಿಯಮಕ್ಕತ್ತಾರ್ಯರಿತ್ತನ್ನೆಗಂ ॥ ೩ ॥

ಪಲವುಕಾಲಮನಂಗರಾಗರಸೈಕ ನಿಷ್ಠಿತರುಂ, ಮದನಾದ್ವೈತವಾದ ಸಮಯಯುಗಳಂಗಳಂ ಕಂತುವೆ ಪರಮಾತ್ಮನಾಗೆ ತನ್ಮತಮೆ ಸಿದ್ಧಾಂತವಾಗೆ ಕಾಮುಕೀಕಾಮುಕರೆ ಸಧರ್ಮರಾಗೆ ಮುಂಪುಟ್ಟಿದಾಚಾರ್ಯರಾಚಾರ್ಯರಾಗೆ ಸುರತಸುಖಮೇ ಸಂಸಾರನಿರತಸುಖಮಾಗೆ ಪ್ರಾಣೇಶ್ವರರ ಸಂಸರ್ಗಮೆ ಸ್ವರ್ಗಮಾಗೆ ನಿಜಾಯುಃ ಪಲ್ಯೋಪಮತ್ರಯಾವಸಾನಮೆಯ್ದುತ್ತಿರೆಯುಂ ಕಾಮಾಂಧರಾಗಿ—

ಬಗೆಯದಿರೆಯಿರೆ ಕೃತಾಂತಂ
ಬಗೆದಂ ಪೆಱತೊಂದನಾರ ಪುಳುವಗೆಯುಮವಂ
ಬಗೆಯದಿರೆ ನಿಮಿರ್ಗುಮಾತಂ
ಬಗೆದೊಡೆ ಬಗೆದಂತೆ ಬಗೆದ ಬಗೆ ನಿಮಿರ್ದಪುದೇ ॥ ೪ ॥

ಅಂತು ಪರಲೋಕಪ್ರಾಪ್ತರಾಗಿ —

ಬನದಿಂದಂ ಬನದಾನೆಗಳ್ ಪಿಡಿಗಳಂ ಮುಂದಿಟ್ಟು ಪೋಪಂತೆ ಕಾ
ಮಿನಿಯರ್ಕಳ್ಪಿರಸಾರ್ಯರಾತ್ಮತನುಗಳ್ ತತ್ಕಾಲದೊಳ್ ಮಾಯಮಾ
ಗೆ ನೆಳಲ್ಪೆಚ್ಚಿಯ ರೂಪಿನಂತೆ ತಳರ್ದರ್ ಸೌಧರ್ಮಕಲ್ಪಕ್ಕೆ ಭಾ
ವನೆ ಜೈನೋಕ್ತಿಯೊಳಾಗೆ ದುರ್ಗತಿಗಮಾಜೀವಕ್ಕಮೇಂ ಸಮ್ಮದಂ ॥ ೫ ॥

ಅಂತು ಮೊದಲಕಲ್ಪದ ಶ್ರೀನಿಳಯ ವಿಮಾನದೊಳ್ ಶ್ರೀಷೇಣಾರ್ಯ ಶ್ರೀದೇವನಾಮಮಂ ತಾಳ್ದಿ, ಅವ್ಯಕ್ತಕಾಲದೊಳೋದಿ ಮಱೆದ ವಿಷಮ ಶಾಸ್ತ್ರದ ಮೂಲಗ್ರಂಥಕ್ಕೆ—

ವಿವರಣೆ ಬರ್ಪವೊಲಿರದವ
ಧಿವಿಬೋಧದೆ ಬರೆ ಮನಕ್ಕೆ ಬಗೆಯೊಳ್ ಕಂಡಂ
ದಿವಿಜಪತಿ ತನ್ನ ಮುನ್ನಿನ
ಭವಮಂ ಪೊಲಗೆಟ್ಟ ಬಟ್ಟೆಗಾಣ್ಬಂತಾಗಳ್ ॥ ೬ ॥

ತಿಳಿದಂ ಮೂಱನೆಯೆನ್ನತೀತಭವದೊಳ್ ಶ್ರೀಷೇಣನೆಂ ಕೊಟ್ಟನಾ
ಱಳಮಾಹಾರದ ದಾನಮಂ ಮುನಿಯುಗಕ್ಕಾಪುಣ್ಯದಿಂ ಭೋಗಭೂ
ತಳದೊಳ್ ಪುಟ್ಟಿ ಕಷಾಯಮಿಲ್ಲದುದಱಿಂ ದೇವತ್ವಮಂ ಪೆತ್ತೆನು
ಜ್ಜ್ವಳದಾನಂ ಕಿಱಿದುಂ ಕರಂ ಪಿಱಿದೆ ದಲ್ ಸತ್ಕ್ಷೇತ್ರ
ಬೀಜೋಪಮಂ ॥ ೭ ॥

ಎಱಗಿ ಮಹತ್ತರಾಮರರಣಂ ಕರಮಂ ಮುಗಿದಿರ್ದು ಮುಂದೆ ನಿಂ
ದಱಿಪಿದರಿಂತಿವರ್ ನಿನಗೆ ದೇವಿಯರೀ ಗಣಿಕಾಳಿ ನಿನ್ನ ಕ
ಣ್ಣೆಱದು ವಿನೋದಮಂ ಸಲಿಸುಗುಂ ನಿನಗೀ ಸುರರಾಳ್ಗಳಿತ್ತ ನೋ
ಡೆ[ಱ]ಯನೆ ಯಿಾವಿಮಾನತತಿಗಿಂದ್ರ ವಿಭೂತಿಗಮದ್ವಿತೀಯನೈ ॥ ೮ ॥

ದೇವಭವತ್ಸುಕೃತಾವಿ
ರ್ಭಾವಿತ ನುತಪುಣ್ಯನಾಮದಿಂದಂ ನೀಂ ಶ್ರೀ
ದೇವನೆ ಯಿಂತೀಕ್ರಮದಿಂ
ಶ್ರೀವಿಜಯ ಭವದ್ವಿಮಾನಮುಂ ಶ್ರೀನಿಳಯಂ ॥ ೯ ॥

ಇದೆ ಸಾರಂ ಸ್ವರ್ಗಲೋಕಕ್ಕಿದೆ ಸುರಸಮಿತಿ ಪ್ರಾರ್ಥಿತಂ ಯೌವರಾಜ್ಯಾ
ಸ್ಪದಮಿಂದ್ರಪ್ರಾಜ್ಯರಾಜ್ಯಕ್ಕಿದೆ ಬೆಳಸು ಸುಖಕ್ಕಾನವಶ್ರೀಗೆ ಚಿತ್ತಾ
ಭ್ಯುದಯಕ್ಕುತ್ಪತ್ತಿ ರಾಗಕ್ಕಿರಲೆಡೆ ವಿಭವಕ್ಕಾಲಯಂ ಲೀಲೆಗುದ್ಯ
ನ್ಮದನಾವಾಸಂ ವಿಲಾಸಕ್ಕನವರತ ಮನೋಭಾಗ ಭಾವ್ಯಕ್ಕೆ ನಿಚ್ಚಂ ॥ ೧೦ ॥

ಅದಱಿಂದಂ ನಿನಗೀ ಪರಾರ್ಥ್ಯನಿಲಯಂ ಶ್ರೀಪ್ರಾಭವಂ ಜೈನ ಪಾ
ದದುಪಾಸಾಸ್ತವದಿಂದಮಾದುದು ಜಿನಾನಿಂದ್ಯಾಲಯಂಗಳ್ಗೆ ಮಾ
ಟ್ಪುದು ಪೂಜಾವಿಭವೋತ್ಸವಂಗಳನವಂ ಮುಂದಿರ್ದು ನಂದೀಶ್ವರಾ
ದ್ಯುದಿತದ್ವೀಪ ನಮಸ್ಕ್ರಿಯಾವಿಧಿಗಳಂ ನೀಂ ಮಾಡು ದೇವಾಧಿಪಾ ॥ ೧೧ ॥

ಎಂದು ಮಹತ್ತರದೇವರಿ
ದಂ ದೇವಂಗಂದು ಬಿನ್ನಪಂಗೆಯ್ದೊಡೆ ನೀ
ಮೆಂದಂತೆ ಧರ್ಮದಿಂ ದಮೆ
ಯಿಂ ದಾನದಿನಲ್ಲದಾಗವಖಿಳಸುಖಂಗಳ್ ॥ ೧೨ ॥

ಎನೆ ಎನೆ ತತ್ಕ್ಷಣದೊಳ್ ಸಿಂ
ಹನಂದೆ ತತ್ಕಲ್ಪದೊಳ್ ನಿದಾನದಿನಾದೇ
ವನ ದೇವಿಯಾಗಿ ಪುಟ್ಟಿದ
ಳನಂತರಂ ಶ್ರೀಪ್ರಭಾಭಿದಾನಸಮೇತಂ ॥ ೧೩ ॥

ಇನಿಯನ ವಿಯೋಗಭರದಿಂ
ಮುನಿದಿರಲಣಮಾಜಿಳೀಕೆ ತಡೆದಿರ್ಕುಮೆ ಮಿಂ
ಚಿನ ಬಟಿಯ ಮೊಟಗುವೊಲ್ ಬೆ
ನ್ನನೆ ಬಂದಳ್ ಸಿಂಹನಂದೆಗದು ಸಂದೆಯಮೇ ॥ ೧೪ ॥

ಪೊಸಮುದದಾನೆಯಂ ನಸೆಯ ಪೆರ್ಬಿಡಿ ಜಂಗಮಕಲ್ಪವೃಕ್ಷಮಂ
ಮಿಸುಗುವನಲ್ಪ ಕಲ್ಪಲತೆ ನೀರದಮಂ ಕುಡುಮಿಂಚು ಪೊರ್ದಿ ಶೋ
ಭಿಸುವವೊಲಾ ಸುರಾಧಿಪನನಾ ಪರಮೇಶ್ವರಿ ಪೊರ್ದಿ ನಾಡೆ ಕ
ಣ್ಗೆಸೆದಳತೀತ ಜನ್ಮಕೃತಪುಣ್ಯಸಮಾನ ಮನಃ ಪ್ರವೃತ್ತಿಯಿಂ ‖ ೧೫ ‖

ಮತ್ತನಿಂದಿತಾರ್ಯನುಮಲ್ಲಿಯೆ ಬಂದವುಳಪ್ರಭವಿಮಾನದಮಿತಪ್ರಭ ದೇವನ್ನಾದಂ, ಆ ದಿವಿಜೇಶ್ವರಂಗೆ ಸತ್ಯಭಾಮಾರ್ಯೆ ಸುಪ್ರಭೆಯೆಂಬ ದೇವಿ ಯಾದಳಂತಾ ನಾಲ್ವರುಮಂದೋರೊರ್ವರನಗಲ್ದಿರಲಾಱದೆ ಮೋಹದಿಂದ ಮೊಂದೆ ಕಲ್ಪದೊಳ್ ಪುಟ್ಟಿದರ್, ಶ್ರೀದೇವಂ ಅಷ್ಟಾಹ್ನಿಕಮಹಾಮಹಿಮೆಯ ನೆಂಟುದಿವಸಂಬರಂ ಮಾಡಿ ಜಿನೇಂದ್ರಮಹಮಂ ನಿರ್ವರ್ತಿಸಿ ತದನಂತರದೊಳ್ ಜೈನಶಾಸನಚೂಡಾಮಣಿ ಶ್ರೀದೇವಂ ಸೌಧರ್ಮೇಂದ್ರನಿಂದ್ರಾಣಿವೆರಸು ತನ್ನ ವಿಮಾನಕ್ಕೆ ಬರ್ಪುದನಱಿದಿದಿರ್ವಂದು . ಯಥಾರೂಪಪ್ರತಿಪತ್ತಿಯಿಂದಮರ ಪರಿಷನ್ಮಧ್ಯದೊಳಮರೇಂದ್ರನನಿಱಿಸಿ ತಾನುಂ ನಿಜೋಚಿತಾಸನದೊಳ್ ಕುಳ್ಳಿರ್ದು ದೇವಾಂಗನಾಸಂಗೀತಪ್ರಸಂಗ ಪ್ರಸ್ತಾವನೆಯಂ ಪ್ರಾರಂಭಗೆಯ್ಯ ಲ್ವೇಟ್ಟುದುಂ, ವಿಚಿತ್ರ ಸುರಸೂತ್ರಧಾರನಪ್ಸರಃ ಪಾತ್ರೀಪ್ರವೇಶ ಪ್ರದೇಶ ಪ್ರರೋಚನಾನಂತರಂ ಪುಷ್ಪಾಂಜಲಿ ವಿಕ್ಷೇಪಂಗೆಯ್ಯೆ—

ಕೆದಱಿದ ಪುಷ್ಪಾವಳಿ ರಂ
ಗದೊಳೆ ನಯಂಬಡೆಯೆ ರಂಗಭೂಮಿಕೆ ಪೂತೊ
ಪ್ಪಿದಪುದೆನಿಸಿದುದು ಸಮಹ
ಸ್ತದ ಗಾಂಧರ್ವರಿನಪೂರ್ವಸಂಗೀತಕದೊಳ್ ‖ ೧೬ ‖

ಅಂತು ಕೈಶಿಕೀವೃತ್ತಿ ನರ್ತನೋಪೇತಮುಮಂಗನಾ ಕುಸುಮಕುಮಾ ರಾಂಗಸಮುಚಿತಮುಮಪ್ಪ ಲಾಸ್ಯಮನಚ್ಚರಸೆಯರಾದಿ ಸಂಧ್ಯಂಗಗತ ನೃತ್ಯಾಂ ಗರಸಭಾವಾಭಿನಯಂಗಳನಿಂದ್ರಂ ಶ್ರೀದೇವಂಗೆ ನೋಡಿಕೊಳ್ಳೆಂಬಂತೆ ಪರಿ ಸ್ಫುಟಂ ಮಾಡಿ ಕರಣಾಂಗಹಾರ ಚಾರಿಪರಿಕ್ರಮಂಗಳೊಳ್ ಪೊಸಮಸೆಯ ಮಿಂಚಿನಂತಮರಸಮಾಜದ ಕಣ್ಗಳೊಳ್ ಪಳಂಚಿ ರಂಜಿ[ಸೆ] ಆಕೆಗಳಾಡಿ ದಾಟಮನಿಂದ್ರಂ ನೋಡಿ ಮಚ್ಚಿ ಮಚ್ಚುಗೊಟ್ಟುಪಸಂಹಾರಿಸಿ ನಾಡೆಯುಂ

ಬೇಗಮಂ ಶ್ರೀದೇವನೊಳ್ ಸಂಭಾಷಿಸಿ ತದ್ದ್ವಿಜನೊಡವರೆ ವಾಸವಂ ನಿಜ ನಿವಾಸಕ್ಕೆ ಪೋಗಿ ಶ್ರೀದೇವನಂ ವಿಸರ್ಜಿಸೆ ಬಂದಾದೇವಂ ನಿಜವಿಮಾನ ದೊಳಿರ್ದು ಶ್ರೀಪ್ರಭೆಯುಮಮಿತ ಪ್ರಭೆಯುಮಮಿತಪ್ರಭನುಂ ಸುಪ್ರಭೆಯುಂ ಬೆರಸು —

ಒರ್ಮೆ ಹಿಮಾದ್ರಿಗೊರ್ಮೆ ರಜತಾದ್ರಿವನಾವಳಿಗೊ[ರ್ಮೆ]ವಾರ್ಧಿಗೋ<br>
ರೊರ್ಮೆ ಪಯೋಧಿಗೊರ್ಮೆ ಜಿನಮಂದಿರ ಸುಂದರ ಮಂದಿರಕ್ಕೆ ಮ<br>
ತ್ತೊರ್ಮೆ ಮನುಷ್ಯಲೋಕ ಜಿನಪೂಜೆಗೆ ಪೋಗೆ ದಲಟ್ಟುಗೊರ್ಮೆ ಸೌ<br>
ಧರ್ಮದೊಳಿರ್ದುದಿಲ್ಲಮನವಾ ದಿವಿಜೇಶ್ವರನೇಂ. ಸಧರ್ಮನೋ ॥ ೧೭ ॥

ಅಂತು ವಂದನಾಭಕ್ತಿಗೆ ಪೆಱವುಮಱಿಕೆಯ ಕೃತ್ರಿಮಚೈತ್ಯಾಲಯಂಗಳ್ಗೆ ವಿವಿಧಾರ್ಚನಾ ವ್ಯಗ್ರಾಗ್ರಹಸ್ತ ಸುಕ್ಷಪರಿಜನನಾಗಿ ಪೋಗಿ —

ಮುದಮಂ ಮಾಡುವ ಧೂಪಧೂಮಲತೆಯಿಂ ಕರ್ಪೂರಪಾಳಿಪ್ರದೀ<br>
ಪದಿನೆತ್ತಂ ಬಿಡುಮುತ್ತಿನಚ್ಚಗಡೆಯಿಂ ಮಂದಾರಪುಷ್ಪೋಪಹಾ<br>
ರದಿನುದ್ಗಂಧ ಸುಗಂಧದಿಂದಮೃತಸಾನ್ನಾಯ್ಯಾಜ್ಯದಿಂ ಗಂಧತೋ<br>
ಯದಿನಾಪ್ತಾಂಘ್ರಿಯನಾದಮರ್ಚಿಸಿದರಾ ಶ್ರೀದೇವನುಂ ದೇವಿಯುಂ ॥ ೧೮ ॥

ಅಂತನುಮೋದಮಾನ ಶ್ರೀಪ್ರಭಾದೇವ್ಯಾದಿಕಂ ಜಿನೇಂದ್ರಪಾದಾರ ವಿಂದಂಗಳನರ್ಚಿಸಿ ಮಗುಳ್ಟು ಬಂದು ವಿಷಯಸುಖಾಸ್ವಾದನ ರಸಾಮೃತ ತತ್ಪರನಾಗಿರೆ ಶ್ರೀದೇವಂ ಶ್ರೀಪ್ರಭೆಯುಂ ತಾನುಂ ಸುಪ್ರಭೆವೆರಸಮಿತಪ್ರಭನುಂ ಆಯ್ದು ಪಲ್ಯೋಪಮ ಪರಿಮಾಣದಾಯುಷ್ಯಮುಮಾಗೆಯುಂ ಶ್ರೀನಿಲಯ ವಿಮಾನದೊಳಗೆ ಪಲ್ಯೋಪಮ ಪಂಚಕಾವಸಾನದೊಳಱುದಿಂಗಳಾಯುಷ್ಯ ಮುಂಟೆನೆ—

ಆಱುದಿಂಗಳ್ವರೆಗಂ ಪೆಱ<br>
ಪೆಱವನನುಷ್ಠಿಸದೆ ಜಿನಪದಾಂಭೋರುಹದೊಳ್<br>
ನಿಱಿಸಿ ಮತಿಯಂ ಸುರರ್ ಕ<br>
ಯ್ನಿಱಿಸಿಱಿದೊಡನೊಡನೆ ಪೊಗಱೆ ತಱಿಸಂದವರರ್ ॥ ೧೯ ॥

ಅಂತು ಷಣ್ಮಾಸಾವಧಿವರಮಾ ವಿಬುಧೇಶ್ವರನಾತ್ಮಾತೀತಭವಜ್ಞಾನವಿಳಸಿತಮನಮನವಧಾರಿಸಿ —

ಅತಿವಯನಾಗಿ ಬಾಳಮೃತಿಯಿಂದಟಿದಂದಿನ ಮೂರ್ಖವೃತ್ತಿ ಪಂ
ಡಿತಮೃತಿಯಿಂದಮಲ್ಲದದು ನೀಗದು ಪೋಗೆನಗೆಂಬ ಭಾವಿತಾ
ತ್ಮತೆಗಮರೇಂದ್ರನುಂ ಶಚಿಯುಮಿಾ ಮರಣಂ ನಮಗಾದೊಡಲ್ತೆ ಭ
ವ್ಯತೆ ಬಳೆದಿರ್ಕುಮೆಂದು ಬಯಸುತ್ತಿರೆ ಜೈನಗೃಹಾಂತರಾಳದೊಳ್ ॥ ೨೦ ॥

ಅಸಿತ ವಿಷೋತ್ಪಳ ಪರಿಮಳ
ದುಸಿರೊಳ್ ಮಡಿದಂದಿನೆಗ್ಗು ನೀಗೆ ಜಿನಾಂಘ್ರಿ
ಶ್ವಸವಮೃತಾಬ್ಜಮನಾಘ್ರಾ
ಯಿಸಿದಂ ಜಿನಚಂದ್ರನಾ ಸಹಾಯ ಸಮೇತಂ ॥ ೨೧ ॥

ಅಂತು ಮುಗಿದ ಕೆಯ್ಯುಂ ನಿಶ್ಚಲಿತಮಪ್ಪ ಮನಮುಂ ಎಱಗಿದ ಮಣಿಮಕುಟಮುಮುಚ್ಚಾರಿಸುವ ಪಂಚನಮಸ್ಕಾರ ಪದಂಗಳುಂ ಮೆಯ್ವೆತ್ತಿರೆ—

ಉದಯಿಸೆ ರವಿ ತಾರೆಗಳೊ
ರ್ಮೊದಲನಿತುಮದೃಶ್ಯಮಪ್ಪವೋಲ್ ಯಮನುದಯ
ಕ್ಕಿದಿರಾಗಿ ತಮ್ಮ ನಾಲ್ವರು
ಮದೃಶ್ಯರಾದರ್ ಜಿನಾಂಘ್ರಿಕಮಲದ ಮೊದಲೊಳ್ ॥ ೨೨ ॥

ಅಂತದೃಶ್ಯರಾಗಿ ಬಂದರ್ಕಕೀರ್ತಿಗಂ ಜ್ಯೋತಿರ್ಮಾಲೆಗಂ ಶ್ರೀದೇವನಾದ ನೀನಮಿತತೇಜನಯಕಳಂಕಾಚಾರಸಾರನೆಯಾಗಿ ಪುಟ್ಟಿದಯ್ ಶ್ರೀಪ್ರಭೆಯುಂ ಬಂದಿಲ್ಲಿ ನಿನಗೆ ವಲ್ಲಭೆ ಜ್ಯೋತಿಃಪ್ರಭೆಯಾದಳ್, ಅಮಿತಪ್ರಭನುಂ ಬಂದಿಲ್ಲಿ ತ್ರಿಪೃಷ್ಠಂಗಂ ಸ್ವಯಂಪ್ರಭೆಗಂ ಶ್ರೀವಿಜಯನೆಂಬ ಮಗನಾದೊಂ, ಸುಪ್ರಭೆಯುಮಿಾತಂಗರಸಿ ಸುತಾರೆಯಾದಳ್, ನೀಂ ಶ್ರೀಷೇಣನಾದಂದು ಸತ್ಯಭಾಮೆಯುಂ ಮದುವೆನಿಂದೊಡೆ ತನ್ನಂ ನಿರ್ದಾಟಿಸಿಕಳೆಯೆ ಪೋಗಿ ಸತ್ತು ವಿವಿಧ ಜವಂಜವಚಕ್ರಾಕ್ರಮಣದಿಂ ಬಂದು ಭೂತರಮಣನಾಮಕಾಂತಾರದೈರಾವತೀತೀರದ ತಾಪಸಾಶ್ರಮದೊಳ್ ಮಿಥ್ಯಾತಪಶ್ಚರಣಪರಿಣತ ತಾಪಸನಿಕಾಯದೊಳ್—

ಉಟಜ ಕುಶೈವಾಗ್ರಹ ಲಂ
ಪಟನೊರ್ವಂ ತವಸಿ ಕೌಶಿಕಾಖ್ಯಂ ಮತ್ತಾ
ಜಟಿಧರ್ಮಪತ್ನಿ ಗುಣಗಣ
ಪಟುಮಾನಿತೆ ಪೆಸರೊಳವಳರುಂಧತಿಯೆಂಬಳ್ ॥ ೨೩ ॥

ಇವರ್ಗಂ ಪುಟ್ಟಿದೊಂ ಮೃಗಶೃಂಗನೆಂಬೊಂ ತಾಪಸಕುಮಾರನಾತಂ ಬಾಲಕಾಲಪರಿಗೃಹೀತ ತಾಪಸಾಚರಣಂ ತಪೋರೂಪಮಾರ್ಗಮಂ ಮೆಚ್ಚದೆ ಮಿಥ್ಯಾಂಧಕಾರಾವಕುಂಠಿತ ಸಮ್ಯಗ್ದರ್ಶನನಾಗೆ–

ಹರಿಣಾಜಿನ ವಾಸಃಪರಿ
ಕರನಾಗಿ ವಿಚಿತ್ರ ಮೌಂಜಿಮೇಖಳೆಯನವಂ
ಧರಿಯಿಸಿ ತೊಡರ್ದಂ ಭವವಾ
ಗುರೆಯೊಳ್ ವಾಗುರೆಯ ಮೃಗದವೋಲ್ ಮೃಗಶೃಂಗಂ ॥೨೪॥

ಅಂತು ಪಲಕಾಲಂ ತಪಂಗೆಯ್ದವಸಾನ ಕಾಲದೊಳ್ ನಿದಾನ ಪೂರ್ವಕಂ ಸತ್ತಶನಿಘೋಷನಾಗಿ ಪುಟ್ಟಿ ಸತ್ಯಭಾಮೆಯಪ್ಪ ಸುತಾರೆಯಂ ಕಂಡು, ತಾಂ ಮುನ್ನೆ–

ನೆಱೆಯನುಭವಿಸಲ್ ಪಡೆಯದ
ಮಱುಕದಿನುಯ್ದು ಸುತಾರೆಯಂ ನಿನ್ನೊಳ್ ತ
ಟ್ಟಿಱಿಯಲಣಮಾಱದಕ್ಕಟ
ಪೊಱಮಾಱಿದಸೀತನೋವದಿದು ಕರ್ಮಕೃತಂ ॥ ೨೫ ॥

ಎಂದು ವಿಜಯಕೇವಲಿಗಳ್ ವಿನೇಯ ನಿಕಾಯಾಂಬುಜಭಾನುಗಯ್ವರ ಭವಾವಳಿವೆರಸು ಸುತಾರಾಹರಣಮಂ ಸವಿಸ್ತರಂ ಬೆಸಸುವುದಮಶನಿಘೋಷನ ಲ್ಲಿಯೆ–

ಆಗಳೆ ಮಳಿನಾತ್ಮಪದಾ
ಭಾಗಮನಿರದಲಸದಲೆದು ಶಿಲೆಯೊಳ್ ಪೊಯ್ವು
ದ್ಯೋಗದಿನರ್ಹದ್ದೀಕ್ಷೆಗೆ
ಪೋಗದೆ ಮೆಯ್ದಂದನೇಕೆ ತಡೆಗುಮೊ ಭವ್ಯಂ ॥ ೨೬ ॥

ಅನಂತರಂ–

ಅದಿರದೆ ಮೋಹವಿರೋಧಿಯ
ಪುದಿದೊದವಿದ ಬಳ್ಳಿವಳ್ಳಿಯಂ ಪಱಿದು ಮನೋ
ಮುದದಿಂ ಸ್ವಯಂಪ್ರಭಾದೇ
ವಿ ದೀಕ್ಷೆಗೊಂಡಳ್ ಕವರ್ತೆಗೊಂಡವೊಲಜೀವಂ ॥ ೨೭ ॥

ಅಂತಾಗಳಾಶಾಂಬರ ರಾಜಹಂಸನುಂ ಶ್ರೀವಿಜಯನುಂ ಶ್ರಾವಕವ್ರತ ಪೂತಾಂತರಂಗನನಂಗವೈರಿ ಪಾದಪಯೋಜಂಗಳ್ಗೆಱಗಿ ಪೋಗಿ ರಥನೂಪುರ ಚಕ್ರವಾಳದೊಳಂ ಪೌದನಪುರದೊಳಂ ತತ್ವಭಾವಾನ್ವಿತ ದೇಹಾಂತರಂಗರ್ ಸುಖಮಿರೆ–

ವಂದಾರು ಬಂದ ಫಾಲ್ಗುಣ
ನಂದೀಶ್ವರದೊಳ್ ತ್ರಿಪೃಷ್ಠತನಯಂ ತನುವಂ
ತಂದುಪವಾಸಕ್ಕಾ ನಿಜ
ನಂದನದ ಸಹಸ್ರಕೂಟ ಚೈತ್ಯಾಲಯದೊಳ್ ॥ ೨೮ ॥

ಇರೆ ದೇವಾಸುರಗುರುನಾ
ಮರಿರ್ವರಾಕಾಶಚಾರಣರ್ ವಂದರ್ಹ
ತ್ಪರಮೇಶ್ವರನಂ ಬಂದಿಸಿ
ನಿರಸ್ತತಮರಾ ಜಿನೇಂದ್ರಗೃಹಮಂಟಪದೊಳ್ ॥ ೨೯ ॥

ಇರೆ ಗುರುಭಕ್ತಿಯಿಂ ನೃಪತಿ ಬಂದಿಸಿ ತನ್ಮುನಿಮುಖ್ಯರಂ ಮುನೀ
ಶ್ವರ ಬೆಸಸಿಂ ಮದೀಯಜನಕಂಗಿನಿತುಂ ಭರತತ್ರಿಖಂಡದೊಂ
ದರಸಿನ ಚಕ್ರವರ್ತಿಪದದಾದ ನಿಮಿತ್ತಮನಿಂತುಟೆಂದು ವಿ
ಸ್ತರವಿಧಿಯಿಂದಮಂದು ಬೆಸಕೊಳ್ವುದುಮಗ್ರ ಮುನೀಂದ್ರನಟ್ಟಿಯಿಂ ॥೩೦॥

ಇಂತೆಂದು ಬೆಸಸಿದರೀಗಳ್ ಪೂರ್ವವಿದೇಹದೊಳ್ ಶ್ರೇಯಾಂಸರೆಂಬ ತೀರ್ಥಕರ ಪರಮದೇವರ ಗಣಧರದೇವರ್ ಭರತಕ್ಷೇತ್ರದ ತ್ರಿಷಷ್ಠಿ ಶಲಾಕಾ ಪುರುಷ ಪುರಾಣಪ್ರಸ್ತಾವದೊಳ್ ಬಂದ ಮೊದಲರ್ಧಚಕ್ರವರ್ತಿಯಪ್ಪ

ತ್ರಿಪೃಷ್ಠನ ಕಥೆಯಂ ಪೇೞ್ವೆ ಕೇಳ್ದಿವದೆಂತೆಂದೊಡೆ–ಈ ಜಂಬೂ ದ್ವೀಪದ ಭರತಕ್ಷೇತ್ರದ ಮಗಧವಿಷಯದ ರಾಜಗೃಹಮನಾಳ್ವ ವಿಶ್ವಭೂತಿಗಂ ಜೈನಿ ಯೆಂಬರಸಿಗಂ ವಿಶ್ವನಂದಿಯೆಂಬೊಂ ಮಗನಾದೊಂ ವಿಶ್ವಭೂತಿಯ ತಮ್ಮ ನಪ್ಪ ವಿಶಾಖಭೂತಿಗಂ ಸುಲಕ್ಷಣೆಗಂ ವಿಶಾಖನಂದಿಯೆಂಬೊಂ ಮಗನಾದೊಂ ಮತ್ತಾ ವಿಶ್ವಭೂತಿ ವಿಶ್ವಂಭರಾಭಾರಮಂ–

ಅಂಗದಮಂ ವಿರಚನೆಯಾ
ದುಂಗುರಮಂ ತಾಳ್ದುವಂದದಿ ತಾಳ್ದಿದನು
ತ್ತುಂಗಭುಜಂ ದಕ್ಷಿಣಭುಜ
ದಿಂ ಗೆಲ್ದು ವಿರೋಧಿಮಂಡಲಾಧೀಶ್ವರರಂ ॥ ೩೧ ॥

ಆತಂ ತನಗೆ ಸಂಸಾರ ನಿರ್ವೇಗಮುಂ ಪುಟ್ಟೆ ಪಿರಿಯಮಗಂ ವಿಶ್ವನಂದಿ ಯಿರ್ದಂತೆ ತಮ್ಮನೊಳಾದ ಸ್ನೇಹದಿಂ ವಿಶಾಖಭೂತಿಯುಮನಧಿರಾಜ ಪದವಿ ಯೊಳ್ ವಿಶ್ವನಂದಿಯಂ ಯುವರಾಜಪದವಿಯೊಳ್ ನಿಯೋಜಿಸಿ ಶ್ರೀಧರ ಗುರುಗೆ ಶಿಷ್ಯನಾಗಿ–

ದ್ವಾದಶ ರಾಜಕಮಂ ಗೆ
ಲ್ದಾದುನ್ನತಿ ಪೆರ್ಚೆ ಕರ್ಮರಿಪುವಿಜಯದೊಳಾ
ಸಾದಿತ ಕೇವಳಲೋಚನ
ನಾದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ ॥ ೩೨ ॥

ಇತ್ತ ವಿಶಾಖಭೂತಿಯರಸುಗೆಯ್ಯುತ್ತಿರೆ ಪೊೞಲ ಪೊಱವಳಯದೊಳ್ ವಿಧೃತ ಭದ್ರಶಾಳವಿಶಾಳವಿಳಾಸಮನುದ್ಯಾನಮಂ ಸಮೆಯಿಸಿ ವಿಶ್ವನಂದಿ ವನಕೇಳೀಲೀಲೆಯಿನಿರ್ಪುದುಂ ವಿಶಾಖಭೂತಿ ಮಂತ್ರಾಲೋಚನೆಯೊಳ್ ಯುವರಾಜಂಗೆ ಬೞಿಯನಟ್ಟಿ–

ಪಗೆವರ್ ಪುರ್ವಿನ ರೋಮದಂತಿರೆ ಮಿಗರ್ ಮರ್ಯಾದೆಯಂ ವಿಶ್ವಭೂ
ತಿಗೆ ಚಂದ್ರೋದಯದಬ್ಧಿಯಂತೆ ನಮಗಿಂ ಮರ್ಯಾದೆಯಂ ಮೆಲ್ಲ
ಮೆಲ್ಲಗೆ ದಾಂಟಲ್ ಬಗೆದಪ್ಪರೀಪದವಿಯೊಳ್ ನೀಮಿರ್ಪುದಾಂ ಪೋಗಿ ಕ್ರೂ
ರಗೆವಿಂಡಂ ಗಜವೈರಿ ಪೊಕ್ಕವೊಲರಿ ಪ್ರಧ್ವಂಸನಂ ಮಾಡುವೆಂ ॥ ೩೩ ॥

ಎನೆ ವಿಶ್ವನಂದಿ ವಿನಯವಿನಮಿತ ಕಿರೀಟನಿಂತೆಂದಂ–

ಕೃಪೆಯಿಂದಂ ಬೆಸಸಲ್ಕದಾವುದೆಡೆ ಪುಟ್ಟೆಳ್ಗಂತೆ ಕರ್ಯ್ ಬೇಗುವೋ
ನೃಪ ಮತ್ತಾನಿರೆ ದೇವರೇವರಿನಿತೇನೀಪೊಟ್ಟಿ ಪೊಟ್ತಾಗೆ ಪೋ
ಗಿ ಪರಕ್ಷ್ಮಾಪರನಿಕ್ಕೆ ಕೆಯ್ಯ ಬೆಸಗೊಳ್ಪಾರಂಭಿಗಂ ಬೋಲ್‌ಪಯೋ-
ಧಿಪರೀತಾವನಿಯಂ ಇವಿರ್ಚಿ ನಿನಗಾಂ ನಿಷ್ಕಂಟಕಂ ಮಾಡುವೆಂ ॥ ೩೪ ॥

ಎಂದು ಮಱುಮಾತಿಂಗೆಡೆಯಿಲ್ಲದಂತು ನುಡಿದು ಚತುರಂಗಬಲ ಸಮೇತಂ ವಿಶ್ವನಂದಿ ಪೋದನನ್ನೆಗಮಿತ್ತಲ್-

ಪರಚಕ್ರಮೆ ಕಯ್ಗೆವರಲ್
ಕರಚಕ್ರಂ ಪೂಣ್ದು ಪೋದ ಬೇಗದೊಳೆ ಪರಂ
ಪರವೋದನಾತನಿನ್ನೆಂ
ದಿರದಾನಂದಿತ ವಿಶಾಖನಂದಿ ದುರಾತ್ಮಂ ॥ ೩೫ ॥

ಆತನ ವನಪಾಲಕರಂ
ಘಾತಿಸಿ ಕೆಯ್ಕೊಂಡು ಬನಮನಿರೆಯಿರೆ ಶೌರ್ಯೋ
ಪೇತಂ ರಿಪುನೃಪರಂ ಗೆ-
ಲ್ದಾ ತಕ್ಕಿನ ವಿಶ್ವನಂದಿ ತಡೆಯದೆ ಬಂದಂ ॥ ೩೬ ॥

ಕಾಪಿನವರನಿಱಿದು ಬನಮಂ ಕೆಯ್ಕೊಂಡಿರ್ದ ವಿಶಾಖನಂದಿಯನೋಡಿಸಿ ತನ್ನ ಬನಮಂ ಕೆಯ್ಕೊಂಡುದನರಸಂ ಕೇಳ್ದು ವಿಶ್ವನಂದಿಗೆ ಬಱಿಯಟ್ಟಿ ಬರಿಸಿ ವಿಶಾಖನಂದಿಯಪ್ಪೊಡೆ ಮರುಳ್, ಎಮಗಱಿಪದೆ ನಿನ್ನ ಪರೋಕ್ಷದೊಳಿದಂ ನೆಗಳ್ದನಾದೊಡಮಾತಂಗೊರ್ಮೆಗೆ ಕ್ಷಮಿಯಿಸವೇಳ್ಪುದೆಂದು ವಿಶಾಖನಂದಿಯಂತಂದು ವಿಶ್ವನಂದಿಯ ಕಾಲಂ ಪಿಡಿಯಿಸಿ ಮುನ್ನಿನಂದದೊಳ್ ಸುಖಮರಸುಗೆಯ್ಯುತ್ತುಂ ಪಲಕಾಲಂ ಸಲೆ ಸಂಸಾರನಿರ್ವೇಗಂ ದೊರೆಕೊಳೆ ವಿಶಾಖಭೂತಿ ವಿಶ್ವನಂದಿಯುಂ —

ಮೇದಿನಿಯಂ ಕೆಯ್ಕೊಳ್ ಪದ
ನಾದುದು ಜಿನದೀಕ್ಷೆಗೆನಗೆ ಮಗನೇ ಎನೆ ನಿಂ
ಮಾದುದನಪ್ಪಂ ದುರ್ಜನ
ನಾದುದನಪ್ಪಂತು ಕಲ್ತೆನೇ ಜಿನಮತಮಂ ॥ ೩೭ ॥

ಎಂದು ವಿಶಾಖಭೂತಿಯೊಡನೆ ವಿಶ್ವನಂದಿಯುಂ ದಿಗಂಬರದೀಕ್ಷೆಯಂ ಕೈಕೊಂಡಂ. ವಿಶಾಖನಂದಿಯುಮಾಧಿರಾಜ್ಯದೊಳ್ ನಿಂದು ರಾಜ್ಯಂಗೆಯ್ಯೆ-

ಒಱೆಯಿಂದುರ್ಚಿದ ಬಾಳ್ವೊಲಾಗೆ ತಪದೊಳ್ ನಿಂದಿರ್ವರೇಱಲ್ಲದಿ
ರ್ದೊಱೆಯಂ ಪೋಲೆ ವಿಶಾಖನಂದಿ ರಿಪುಭೂಪರ್ ಪಕ್ಕುವೆತ್ತೆತ್ತಿ ತ
ಟ್ಟುಱದೆತ್ತಂ ಸೆಱೆಗೆಯ್ದುಕೊಂಡು ನೆಲನಂ ತಾಮಾಳ್ದು ಮತ್ತಿತ್ತರಂ
ದುಱದಾತಂಗಿರದೋಲೆಯೊಯ್ವ ಬೆಸನಂ ಭೀರುತ್ವಮೇಗೆಯ್ಯದೋ ॥ ೩೮ ॥

ಇತ್ತ ವಿಶಾಖಭೂತಿಯುಂ ಭೂರಿತಪೋಭಾರಮಂ ನಿರ್ವಹಿಸಿ ಶತಾರ ಕಲ್ಪದೊಳ್ ಸಾಮಾನಿಕ ದೇವನಾದೊಂ, ವಿಶ್ವನಂದಿಯುಂ ಗ್ರಾಮ ನಗರ ಖೇಡ ಖರ್ವಡ ತೀರ್ಥಪುಣ್ಯಾರಣ್ಯಂಗಳಂ ತೊಟಲ್ದು ವಿಹಾರಿಸುತ್ತುಮುತ್ತರ ಮಥುರೆಗೆ ವಂದು ಮಾಸೋಪವಾಸದ ಪಾರಣೆಯೊಳ್ ಚರಿಗೆವುಗೆ ಕಟ್ಟದಿರೊಳ್ ನಿಟ್ಟಾಲಿಯಾಗಿ ಕೆಂಗಣ್ಮಸಗಿ ಬಂದೊಂದಿಂದ ಪಸು ತನ್ನ ಮುನಿಪತಿಯನಿಱವು ದುಮದಱ ಬಸಿದು ಪೊಸಯಿಸಿದನ್ನವಪ್ಪ ಸೈಗೋಡುಗಳುರ್ಚೆ ವೀಥೀಮಧ್ಯ ದೊಳ್ ಬಿೞ್ದಿರ್ದ ವಿಶ್ವನಂದಿಮುನಿಯಂ ಪೊತ್ತುನೆಡೆಯಿಟ್ಟೋಲೆಯಡಕುವ ವಿಶಾಖನಂದಿ ಗಣಿಕಾವಾಟದೊಳ್ ಸುಟುಯುತ್ತಿರ್ದು ಪರಿತಂದು ನೋಡಿ ಕಂಡಱದು —

ಮುನಿದೆಮ್ಮಂ ಕೊಲಲೊಡ್ಡಿದಂದಿನ ಶಿಲಾಸ್ತಂಭಕ್ಕೆ ಕೆಯ್ನೀಡಿದಂ
ದಿನ ಕಿಟ್ತಿಂದಿನ ಕಾದಿದಂದಿನ ಕಪಿತ್ಥೋರ್ವೀಜದಿಂ ಮೋದಿದಂ
ದಿನ ಗೆಲ್ದಂದಿನ ಗೆಲ್ದುಬಂದು ಬನಮಂ ಕೊಂಡಂದಿನಾ ನಿನ್ನ ಗ
ರ್ಜನೆಯುಂ ಬೀರಮುಮಿಾಗಳಿಂತು ಪುಡಿಯೊಳ್ ಚಿಃ ಸೀ
ಪೊರಳ್ದಿರ್ಪುದೇ ॥ ೩೯ ॥

ಎಂದು ತನ್ನ ನೆಱೆಗೊಂಡ ಮುಳಿಸಿನೊಳ್ ನೆಱನಲ್ಲದುದಂ ನೆಱಂ ಮಾಡಿ ನೆಱನೆತ್ತೆ —

ಕಟುಯೇರ್ಪೆತ್ತಿಭವೈರಿಯ
ನೆಟಕೆ ಶಿರಂ ಮಾಟ್ಪವೋಲವಂ ಮುಳಿಯಿಸೆ ಕೆ
ಯ್ಗಟುಯೆ ಮುನಿಪತಿಯ ಕಣ್ಗಳೊ
ಳಿಟುವೋದುವು ತೀವಿ ಕೋಪರಸದ ಪೊನಲ್ಗಳ್ ॥ ೪೦ ॥

ಅಂತುತ್ಕಂಠನಾಗಿರ್ದುಮಿನ್ನೆಲ್ಲಿ ಪುಟ್ಟಿಯುಂ ನಿನ್ನಂ ಕೊಲ್ಲದಿರೆನೆಂದು ರೌದ್ರಪರಿಣಾಮದಿಂ ವಿಗತಜೀವಿತನಾಗಿ ವಿಶಾಖಭೂತಿಯೆ ಪುಟ್ಟಿದಾ ಶತಾರ ಕಲ್ಪದೊಳ್ ಸಾಮಾನಿಕದೇವನಾಗಿ ಪುಟ್ಟಿ ತಮ್ಮ ಕಿಱಿಯಮ್ಮನುಂ ತಾನುಂ-

ವಿತತಾಷ್ಟಾದಶ ಸಾಗರೋಪಮ ನಿಜಾಯುಷ್ಯಾಂತದಿಂದಂ ಪ್ರಜಾ
ಪತಿ ಭೂಚಕ್ರಿಗೆ ಬಂದು ಪುಟ್ಟಿ ಬಲದೇವಂ ವಾಸುದೇವಂ ಜಯಾ
ವತಿಯುಂ ತನ್ಮೃಗಯಾವತೀಲಲನೆಯುಂ ತಾಯ್ಮಕ್ಕಳಾಗಾಳ್ದರು
ನ್ನತಿಯಿಂ ಚಕ್ರಿಸಮೇತಮಿಾ ಭರತಭೂಶ್ರೀಯಂ ಮಹೀವಲ್ಲಭಾ ॥ ೪೧ ॥

ಅಲ್ಲಿ ವಿಶಾಖಭೂತಿಚರಂ ವಿಜಯಂ ಬಲದೇವಂ ವಿಶ್ವನಂದಿಚರಂ ತ್ರಿಪೃಷ್ಠಂ ವಾಸುದೇವನಿದವರ ವೃತ್ತಕಂ, ವಿಶಾಖನಂದಿಯುಮಾಯುರವಸಾನದೊಳ್ ಸತ್ತನೇಕಭವಗಹನ ಪರ್ಯಟನದಿಂ ಬಂದೈರಾವತ ತೀರದ-

ಕಾನನದಾಶ್ರಮದೊಳ್ ವೈ
ಖಾನಸಕುಲಪತಿ ಮಹಾಜಟಂ ತಂದೆ ಜಯಾ
ಮಾನಿನಿ ತಾಯ್ ತನ್ಮಿಥುನದ
ಸೂನುತೆಗೆ ವಿಶಾಖಾನಂದಿ ಭಾಜನನಾದೊಂ ॥ ೪೨ ॥

ಆಗಿ ಸುಜಟನೆಂಬ ಪೆಸರಂ ಪಡೆದು ಬಳೆದು —

ಜಿನದೀಕ್ಷಿತನಂತ್ಯದೊಳಮ
ರನಾಗಿ ಮುನ್ನಿನ ನಿದಾನದಿಂದಶ್ವಗ್ರೀ
ವನಭಿಖ್ಯರನಲ್ತೆ ಪುರಾ
ತನವೈರದಿನಱಿದನಾ ತ್ರಿಪೃಷ್ಠನ ಕೆಯ್ಯೊಳ್ ॥ ೪೩ ॥

ಎಂದು —

ದೇವಗುರು ಬೆಸಸೆ ಜನಕ ಭ
ವಾವಳಿಯಂ ಕೇಳ್ದು ವಿನಯ ವಿನಮಿತನಾದೊಂ
ಶ್ರೀವಿಜಯಂ ಮುದುಮೊದವೆ ತ
ಪೋವೃದ್ಧಂ ಧರ್ಮವೃದ್ಧಿಯೆಂದು ಮುನೀಂದ್ರಂ ॥ ೪೪ ॥

ಅಮರಗುರುವೆರಸು ಯತಿ ಜಲ
ದಮಾರ್ಗಗತಿಯಾದನರಸನುಸವಾಸ ಪರಿ
ಶ್ರಮಮನರಮನೆಗೆ ವಂದ
ಶ್ರಮದೊಳೆ ಕಳೆದೆಯ್ದಿ ರಜತರಾಜಿತನಗಮಂ ॥ ೪೫ ॥

ರಥನೂಪುರ ಚಕ್ರವಾಳಮಂ ಪೊಕ್ಕುರ್ವರಾಸ್ಯತಿಲಕನುಂ ತಾನುಂ ನಿದಾಘ ಸಮಯದೊಳುದ್ಯಾನಕೇಳೀರಸ[ಸ]ಕ್ತ ಚಿತ್ತರಿರೆ ತದ್ವನೈಕದೇಶದ ರಕ್ತಾಶೋಕ ಪಾದಪದಳದೊಳಿರ್ದ ವಿಪುಳರುಮಚಳರುಮೆಂಬ ಮುನಿಯು ಗಳಮಂ ಕಂಡುದ್ಯಾನ ಕ್ರೀಡೆಯೊಳಾದ ಪರಿಶ್ರಮಮಂ ತನ್ಮುನಿಪಾದ ಕಲ್ಪ ಪಾದಪಚ್ಛಾಯೆಯೊಳ್ ಕಳೆಯಲ್ಬರ್ಪಂತೆ ಬಂದು ಬಂದಿಸಿ ನಿಜಮಕುಟ ಮರೀಚಿ ನಿರ್ಮಲ ಸಲಿಲಧಾರೆಯಿಂ ತದೀಯ ಪಾದಪಂಕಜರಜಮಂ ತೊಳೆದು ಕಳೆದು ವನಕುಸುಮಸ್ತಬಕಗಳಿನರ್ಚಿಸಿ ಕುಳ್ಳಿರ್ದು ಧರ್ಮಶ್ರವಣಾನಂತರ ಮಿಂತೆಂದು ಬಿನ್ನಸಂಗೆಯ್ದರ್ —

ಪಟುವಪ್ಪಿಂದ್ರಿಯವರ್ಗದಿಂ ತನಗೆ ಮುಂ ಕಾಮಾರ್ಥಮೆಮ್ಮೊಳ್ ಪರಿ
ಸ್ಫುಟಮಿನ್ನಿಂದ್ರಿಯ ಶಕ್ತಿಯಂ ಜರೆ ಭರಂಗೆಯ್ದೆಯ್ದೆ ಬೆನ್ನಟ್ಟೆ ವಿ
ಸ್ಫುಟಮಿಲ್ಲಿಚ್ಛೆಯ ಮಚ್ಚು ಮೋಹಘನಮುಂ ಮುಂದಿಟ್ಟು ದಲ್ ತೃಷ್ಣೆ ಲಂ
ಪಟೆ ಬಿನ್ನಿಂ ಬಿಡದೊಲ್ಲೆ ಮೊಲ್ಲೆ ಮೆನೆಯುಂ ದೂದಟ್ಟೆ ದುರ್ಬುದ್ಧಿಯಂ ॥ ೪೬ ॥

ಆಕೆ ಬಿಸುಡದೊಡಮಾವಿಂ
ತೇಕಿರ್ಪೆವೊ ಬಿಸುಡದಾಕೆಯಂ ಬೆಸಸುವುದ
ವ್ಯಾಕುಳಮೆಮ್ಮಾಯುಷ್ಯ
ಸ್ತೋಕಬಹುತ್ವಮನಗಾಧ ಬೋಧಪಯೋಧೀ ॥ ೪೭ ॥

ಎಂದು ಪಾಪೇಭಕಂಠೀರವನುಂ ಶ್ರೀವಿಜಯನುಂ ಬೆಸಕೊಳೆ ವಿಪುಳಾ ಮಳ ಮುನಿನಾಥರ್ ಧರ್ಮವಾತ್ಸಲ್ಯಕಲ್ಯಾಣಾಂತರಂಗಳಿಂ ನಿಮಗಿಪ್ಪತ್ತಾಱು ದಿವಸಮಾಯುಷ್ಯಮೆಂದು ಬೆಸಸಿ ಬಿಜಯಂಗೆಯ್ವುದುಂ—

ಸೆರಗಂ ಪಾರದೆ ಮತಿಮುಱೆ
ದಿರದೆ ಮನಂಗೊಂಡೊಡಂಬಡಂ ಬಳಸಿದರ್ಾ
ಸಿರಿವಂತಿಗೆಯಂ ತೊಱೆವಂ
ತಿರೆ ಖಚರಶ್ರೀಯನುೞಿದನಾ ಜಿನಚಂದ್ರಂ ॥ ೪೮ ॥

ವಿಜಯಶ್ರೀಯುಂ ಶ್ರೀಯುಂ
ನಿಜಮೆನೆ ನೆಗಟ್ದಮಿತತೇಜನೊಡನೆ ಜಿತಾತ್ಮಂ
ರುಜೆಯಂ ಬಿಸುಡುವವೋಲ್ ಶ್ರೀ
ವಿಜಯಂ ಬಿಸುಟಂ ಧರಾಲತಾಂಗಿಯನಾಗಳ್ ॥ ೪೯ ॥

ಅಂತು ಮಯ್ದುನಿರ್ವರುಮೋರ್ರ್ವರೊಳ್ ತೆಕ್ಕೆ ತೆಕ್ಕೆಯಿಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿಚ್ಛೇದದಿಂ ತೊಱೆದು ತಮ್ಮ ಮಕ್ಕಳಪ್ಪ ಸುತೇ-ಜನುಮಂ ಶ್ರೀದತ್ತನುಮಂ ರಾಜ್ಯದೊಳ್ ನಿಱಿಸಿ ಬೞಿಯಮಿಪ್ಪತ್ತಾೞು ದಿವಸಂಬರಂ —

ಅಭಿನಂದನಮುನಿರವಿವಾ
ಕ್ಪ್ರಭೆ ತನುಮಂ ಕಳೆಯೆ ಮಯ್ದುನಿರ್ವರುಮುರೆ-ನೋಂ
ತಭಯಮನರಾಗಿಯುಂ ದುರಿ
ತಭೀತಿಯಿಂ ನಡುಗಿ ಬಡಬಡಾದಂತಾದರ್ ॥ ೫೦ ॥

ಅಂತುಪವಾಸಕೃಶೀಕೃತಾಂಗರಾಗಿ ಶರೀರಕರ್ಮ ಪರಮಾಣುಗಳನೊಡನೊಡನೆ ತವಿಸಿ ಕಾನನ ಮಧ್ಯಸ್ಥಿತರುಂದ್ರ ಗಿರೀಂದ್ರಶೃಂಗದೊಳ್ ಆತ್ಮಪರಪರ್ಯಾಪ್ತಿ ನಿರಾಪೇಕ್ಷರಾಗಿ ತಾಱಿಲಾ(ರ)ದ ಸ್ಥಳನಳಿನಗಳನೆ ಪೋಲ್ತುತ್ತರಾಶಾಭಿಮುಖರಾಗಿ ಪೋಗಿ ತದದ್ರಿಶಿಖರದೊಳೊಂದೆಡೆವೆತ್ತು—

ಮೃಗರಾಜಂ ರಾಜತ್ವದ
ಪಗೆಗಿಱಿವಂತಿಱಿದು ನಖದಿನೋವದೆ ತಿನೆಯುಂ
ಬಗೆಯದೆ ವೀರಪ್ರಾಯೋ
ಪಗಮನದಿಂದಮಿತತೇಜನೊಡಲಂ ಬಿಸುಟಂ ॥ ೫೧ ॥

ಶ್ರೀವಿಜಯನುಂ ನಿಜಜನಕಲಕ್ಷ್ಮೀಕಾಂಕ್ಷಿತ ಪ್ರಾಯೋಪಗಮನ ಮ
ಮಾರ್ಗದೊಳ್ ಶರೀರ ಪರಿತ್ಯಾಗಂಗೆಯ್ದನಮಿತತೇಜನುಂ ಪ್ರಾಣತಕಲ್ಪ

ಲಾವಣ್ಯಾಮೃತವಾರ್ಧಿಮಗ್ನದಿವಿಜ ಶ್ರೀರನ್ಯದೊಳ್ ನಂದನಂ
ದ್ಯಾವರ್ತಾಖ್ಯ ವಿಮಾನದೊಳ್ ಮಣಿಮಯಕ್ಷ್ಮಾಭಾಸಿಯೊಳ್ ಪುಟ್ಟಿ ತ
ದ್ದೇವಂ ದೇವನಿಕ್ಷೇವಣೀಯನಣಿಮಾದ್ಯೈಶ್ವರ್ಯಯುಕ್ತಂ ತ್ರಿಶ
ದ್ದೇವೇಂದ್ರಂ ಮಣಿಚೂಳನೆಂಬ ಪೆಸರಿಂ ಪೆತ್ತಂ ದಿವ್ಯೈಶ್ವರ್ಯಮಂ ॥ ೫೨ ॥

ಶ್ರೀವಿಜಯನುಂ ಸ್ವಸ್ತಿಕಾವರ್ತವಿಮಾನದೊಳ್ ಮಣಿಚೂಳನೆಂಬ
ಸಾಮಾನಿಕ ದೇವನಾದೊಂ, ಮತ್ತಮಮಿತತೇಜನಭಸ್ವರಚರ ಸುರೇಶ್ವರಂಗೆ

ಪರಿವೆಸವೋಗಲಚ್ಚರಸಿಯರ್ ಶ್ರುತಿಯೊಳ್ ಸಮನಾಗೆ ಪಾಡಲ
ಚ್ಚರಸಿಯರಟ್ಟಿಯಿಚ್ಚೆಯಱಿದುಂ ಪರಿವಾರಿಸಿ ಪಾಟಮೋದಲ
ಚ್ಚರಸಿಯರಾಡಲಚ್ಚರಸಿಯರ್ ಮನದಿಚ್ಚೆಯನಿಚ್ಚೆಗೆಯ್ಯಲ
ಚ್ಚರಸಿಯರೆಂದೊಡೇವೊಗಟ್ಟುದೋ ಜಿನಚಂದ್ರ ವಿಭೂತಿಲೀಲೆಯಂ ॥ ೫೩ ॥

ರಮಿಯಿಪುದಮರಿಯರೊಳ್ ತೆಗ
ಟಿಮರಿಯರೊಳ್ ತವದ ಮೇಳಮಪುರಿಯರೊಳಲಂ
ಪಮರಿಯರೊ[ಳ್ನಗೆಸಬ್ಬವ]
ಮಮರಿಯರೊಳ್ ನಡೆವುದಮರನೇಂ ಸುಖಮಯನೋ ॥ ೫೪ ॥

ಅಂತಪರಿಮಿತಾಮರಾಮರೀ ಲಲಿತಾಪ್ಸರಸ್ಸಂದೋಹ ಸುಂದರಾರವಿಂದ
ಮಿತ್ರಂ ಮಣಿಚೂಳ ದಿವಿಜಂ ಮಿತ್ರಮಣಿಚೂಳಂ ಬೆರಸು ಕುಂದದೆ—

ಬಗೆ ಧರ್ಮೋತ್ಸವಮೆಲ್ಲಿತಲ್ಲಿಗೆ ಜಿನಶ್ರೀಗೇಹದೊಳ್ಪೆಲ್ಲಿತ
ಲ್ಲಿಗೆ ಯೋಗಿವ್ರಜಮೆಲ್ಲಿತಲ್ಲಿಗೆ ಮಹಾತೀರ್ಥೌಘದಿಂಬೆಲ್ಲಿತ
ಲ್ಲಿಗೆ ತನ್ನಂ ತಡವಿಲ್ಲದುಯ್ಯೆ ಪಲವುಂಕಾಲಂ ಸಲುತ್ತಿರ್ಪಿನಂ ॥ ೫೫ ॥

ದೋಷಧಾತು ಮಲವಿಹೀನನುಂ ನಖರೋಮಶ್ಮಶ್ರು ಕೇಶವಿರಹಿತನುಂ
ನಿದ್ರಾಲಸ್ಯಾಕ್ಷಿಪಕ್ಷ್ಮಪಾತೇತರನುಂ, ದಶಮಾಸಾವಧಿ ನಿರ್ಯತ್ಸುರಭಿ ನಿಶ್ವಾ

ಸನುಂ, ವಿಂಶತಿ ಸಹಸ್ರವರ್ಷಪರ್ಯಂತ ಸ್ಮೃತಾಹಾರನುಂ, ವಿಂಶತಿ ಸಮು
ದ್ರೋಪಮಾಯುಷ್ಯನುಮಖಿಳಾಮಯ ವಿದೂರನುಂ ನಿತ್ಯಯೌವನನುಮಾಗಿ
ಮಣಿಚೂಳಾಮರೇಶ್ವರನಿರೆ ತದೀಯದಿವ್ಯಶರೀರಂ—

ಹಿಮರುಚಿ ಕುಂದೆ ಕುಂದೆ ನೆಱೆದೊಪ್ಪುವ ಚಂದ್ರಿಕೆ ಕುಂದುವಂತೆ ಬಂ
ಹಿಮವದಪಾರಸಾಗರಮಿತಾಯುವ ಲೆಕ್ಕದ ಕುಂದೆ ಕುಂದೆ ದೈ
ನ್ಯಮನೊಳಕೊಂಡುದಂತಕನ ಸಾಮ್ಯಮನಂತಕವೈರಿಯಲ್ಲದುಂ
ತಮರಮನುಷ್ಯರಾರ್ಪರೆ ನಿರಾಕರಿಸಲ್ ಭುವನತ್ರಯಂಗಳೊಳ್ ॥ ೫೬ ॥

ಇನ್ನಱುದಿಂಗಳುಂಟಿನೆ ನಿಜಾಯು ಸುರಪ್ರಕರಂ ಮೊಗಂಗಳಂ
ಬಿನ್ನಗೆ ಮಾಡೆಯುಂ ತಮಗೆ ಶಂಕೆಯುಮಿಲ್ಲ ವಿಭೂಷಣ ಪ್ರಭಾ
ಭ್ಯುನ್ನತಿ ಮಾಣೆಯುಂ ಮುಖರಸೋನ್ನತಿ ಮಾಣದೆ ಜೈನತತ್ತ್ವ ಸಂ
ಪನ್ನರನಾ ಜವಂಜವಭಯಂ ಗೆಲಲಾರ್ಕುಮೊ ಮೀರಲಾರ್ಕುಮೋ ॥ ೫೭ ॥

ಇಂತು ಮಣಿಚೂಳದೇವಂ ತನ್ನ ಸಹಾಯಂ ಮಣಿಚೂಳನುಂ ತಾನುಂ—

ಜಿನಚರಣದೊಳಿರೆ ನತಿ ಮತಿ
ಜಿನಗುಣಸಂಪತ್ತಿಯೊಳ್ ಪೊದಟ್ದಿರೆ ತನು ತ
ಜ್ಜಿನಗೃಹದೊಳಿರೆ ಸುರೇಂದ್ರರ್
ಜಿನೇಂದ್ರ ಮಹಿಮೆಗೆ ಸಮಾಧಿಯೊಳ್ ಮೊದಲಿಟ್ಟರ್ ॥ ೫೮ ॥

ತಳಮುಳಗಾಗದ ತನು ಪೆ
ಪ್ಪಳಿಸದ ನೆಲೆ ತೊಲಗದಱಿವು ಪೆಳರದ ಚೇಷ್ಟಾ
ವಳಿ ಪಂಚನಮಸ್ಕಾರದ
ಕಳರುತಿ ತಮಗಮರೆ ಮುಡಿಪಿದರ್ ಮಣಿಚೂಳರ್ ॥ ೫೯ ॥

ಅಂತು ಮುಡಿಪಿ ಶರೀರಸಮೇತಂ ನಿರಾದಾನವಿದಾನದಿಂ ಗಾಳಿವೆಱಗಿ
ನೊಳಿರ್ದಮಳದೀಪಿಕೆಯಂತಿರ್ದರುಮೊಡನದೃಶ್ಯರಾಗಿ ಬಂದು ಜಂಬೂದ್ವೀಪದ
ಪೂರ್ವವಿದೇಹದ ವತ್ಸಕಾವತೀ ವಿಷಯದ ಪ್ರಭಾಕರೀಪುರಾಧಿಪಂ ಸ್ತಿಮಿತ
ಸಾಗರಂಗಂ ವಸುಂಧರೆಗಂ ಮಣಿಚೂಳಚರನಪರಾಜಿತನೆಂಬ ಪೆಸರೊಳಾಂ

ಬಲದೇವನಾದೆಂ. ತದ್ಧರಾಧೀಶ್ವರಂಗಂ ವಸುಮತಿಗಂ ಮತ್ತಿನ ಮಣಿಚೂಳ ಚರನಯ್ ನೀನನಂತವೀರ್ಯನಾಮದಿಂ —

ಅತಿಕಾಂಕ್ಷಿತನೈ ಬಗೆಗೆ
ಟ್ಟತೀತ ಭವಜನಕಲಕ್ಷ್ಮಿಯೊಳ್ ಮತಿ ನಿಲೆ ದು
ರ್ಗತಿಗೆಳಸಿ ಯಾಮತಿಸ್ಸಾ
ಗತಿಯೆಂಬುದನಱಿಪಿ ವಾಸುದೇವನೆಯಾದಯ್ ॥ ೬೦ ॥

ಅಂತು ನಾಮಿರ್ವರುಂ ಬಲದೇವ ವಾಸುದೇವರಾಗಿ ಬಳೆಯುವಳೆಯ ನಮ್ಮ ತಂದೆ ಸ್ತಿಮಿತಸಾಗರಮಹೀನಾಥನುಂ ಜಿನೇಂದ್ರಪಾದಾಭ್ಯರ್ಚನ-ದೊಳ್ ನಿರ್ಗ್ರಂಥರೂಪಧಾರಿಯಾಗಿ ವಂದನಾಭಕ್ತಿಗೆ ವಂದ ಧರಣೇಂದ್ರನಂ ಕಂಡು ತತ್ಸೌಂದರ್ಯಮಹಿಮೆಗೆ ನಿದಾನಂಗೆಯ್ದು ಭವನಾಮರಲೋಕದೊಳ್ ಧರಣೇಂದ್ರನಾಗಿ ಪುಟ್ಟಿದನಾನುಂ ನೀನುಂ ನಿಜಗುರು ಪರೋಕ್ಷದೊಳಧಿ ರಾಜನುಂ ಯುವರಾಜನುಮಾದೆವು ದಮಿತಾರಿವಧಾನಂತರದೊಳರ್ಧಚಕ್ರ ವರ್ತಿಯಾಗಿ ನೀಂ ನಿಜಾಯುರವಸಾನದೊಳ್ ರತ್ನಪ್ರಭೆಯೆಂಬ ಮೊದಲ ನರಕದ ಪದಿಮೂಱುಮಿಂದ್ರಕಂಗಳೊಳಗೆ ಚಂದ್ರಕಮೆಂಬ ಮೊದಲಿಂದ್ರಕ ದೊಳ್ ನಾಲ್ವತ್ತಿರ್ಛಾಸಿರವರ್ಷಂ ಮಧ್ಯಮಾಯುಷ್ಯನಾಗಿ ಪುಟ್ಟಿದಯ್. ಆನುಂ ನಿನ್ನ ವಿಯೋಗದುಃಖದೊಳ್ ಜಿನೇಶ್ವರ ತಪಶ್ಚರಣಕ್ಕೆ ತಱಿಸಂದು ನೆಗಟ್ಟು ಕಡೆಯೊಳ್ ಪ್ರಾಯೋಪಗಮನದಿಂ—

ತೊಱೆದು ಪರೀಷಹತತಿಯಂ
ಪಱಿವಱಿಯಾದೊಡಲನಾತ್ಮನಿರಪೇಕ್ಷತೆಯಿಂ
ನಿಱಿಸಿ ದುರಿತಾರಿಯೊಡಮುಡಿ
ದೆಱೆವಿಡಿದಘಹರನನಚ್ಯುತೇಂದ್ರನೆನಾದೆಂ ॥ ೬೧ ॥

ನಿನ್ನುಮಂ ಸ್ತಿಮಿತಸಾಗರಚರಧರಣೇಂದ್ರಂ ತೀವ್ರದುಃಖಮನನು ಭವಿಸುವುದನಱಿದು ದುರ್ಮೋಹದಿಂ ಸಮ್ಯಗ್ದರ್ಶನಮುಂ ಕೆಯ್ಕೊಳಿಸಿದನಾ ನಾರಕ ಪಟಲಂಗಳೊಳ್. [ರತ್ನಪ್ರಭೆಯಿಂದಾಪತ್ತುವಟ್ಟು ಬಂದೀ ದ್ವೀಪದ ಭರತ ಪ್ರಸಿದ್ಧರಜತಾಚಳದೊಳ್]ಉತ್ತರಶ್ರೇಣಿಯ ಗಗನವಲ್ಲಭಪುರಮನಾಳ್ವ ಖಚರ

ರಾಜಂ ಸಿಂಹನಾದಂಗಮಾತನ ಮನೋಜವೃತ್ತಿ ಜನ್ಮಭೂಮಿ ಮೇಘಮಾಲಿನಿಗಂ ಮಗನ್ನೈ, ನೀಂ ಮೇಘನಾದನಾಗಿ ನಿಜಜನಕಪರೋಕ್ಷದೊಳ್ ವಿಯಚ್ಚರಚಕ್ರವರ್ತಿತ್ವಮಂ ಪಡೆದು, ನಿನ್ನಚ್ಯೋತ್ರಿದನ್ನರುಂ ಪಱಿದು ಪತ್ತಿಸಿದನ್ನರುಮ ಪೂರಯ್ಯೊರ್ವರ್ ಮಕ್ಕಳ್ಪೆರಸಿನ್ನೆವರಮರಸುಗೆಯ್ದು ನೀನಿಂದು ವಂದನಾಭಕ್ತಿಗೆ ವಂದುದಱಿಂದಮೊಂದೊರ್ವರ ಕಂಡತಿಪ್ರೀತಿಯಾದುದು. ಪ್ರಥಮ ಭೂಮಿಯೊಳ್ ಧರಣೇಂದ್ರಂ ಕೆಯ್ಕೊಳಿಸೆ ನಿನ್ನ ಕೊಂಡ ಸಮ್ಯಗ್ದರ್ಶನ ದೀಪಕಾ ಪ್ರದ್ಯೋತಮನವಲಂಬಿಸಿ ಮೋಹಾಂಧತಮಸಾಧೀನ ಮಾನಸನಾಗದೆ–

ಒಡಹುಟ್ಟಿಯುಮೊಡವಳಿದುಂ
ಕಡೆಯೊಳ್ ನೀನೆನ್ನನಿಂತು ಕಂಡುಂ ಬಂದಿ
ರ್ದೊಡೆಯುಡಿದೀ ನಮ್ಮಿರ್ವರ
ತೊಡರ್ಪಿಂದಂ ನೀ ಪುನರ್ನವಂ ಮಾಡಿನ್ನುಂ ॥ ೬೨ ॥

ಎಂದು ಪುನರ್ದರ್ಶನಮು
ಕ್ಕೆಂದುಂ ಯಶಮುಕ್ಕೆ ವಿಜಯಮುಕ್ಕೆಂದೊಳ್ವ
ಕ್ಕೆಂದಘವಿಘಾತಿಯಕ್ಕೆಂ
ದಂದಚ್ಯುತಕಲ್ಪಕಚ್ಯುತೇಂದ್ರಂ ಪೋದಂ ॥ ೬೩ ॥

ಇತ್ತ ನಿಜಾಲಯಕ್ಕೆ ವಿಭು ಬಂದು ಮನಂಬಿಡೆ ಮೇಘನಾದನ
ತ್ಯುತ್ತಮ ಮೋಕ್ಷಲಕ್ಷ್ಮಿಗಿರದಾಟಿಸಿ ನಿಶ್ಚಿತನಾಗಿ ನಂದನಂ
ಗಿತ್ತದನಂಬರೇಚರ ವಿಭೂತಿಯನಂದಭಿನಂದನಾಖ್ಯ ವೃ
ದ್ಧೋತ್ತಮ ಯೋಗಿಗಳ್ಗೆಱಗಿ ಕೊಂಡನಖಂಡಿತ
ಜೈನದೀಕ್ಷೆಯಂ ॥ ೬೪ ॥

ಅಂತು ಮೇಘನಾದಂ ತನ್ನ ಮಗಂ ಸಿಂಹನಾದಂಗೆ ರಾಜ್ಯಭಾರಮನಿತ್ತು ತಪೋಭಾರದೊಳ್ ತಾಂ ನಿಂದು ಶುಭಭಾವನಿತಾಂತಶುದ್ಧಾಂತರಂಗನನಶನಾದಿ ತಪೋವೃದ್ಧಿವರ್ತಿತಾದ್ಯಾವಸಾನನೊರ್ಮೆ ಗಿರಿನಂದನ ಗಿರಿಶಿಖರಾಯಮಾನಂ–

ಕಲ್ಮೆಲೆ ನಿಂದು ಯೋಗದ ನಿಯೋಗದಿನಿರ್ಪುದುಮೊರ್ವನತ್ತಲಿ
ತ್ತಲ್ ನಭದೊಳ್ ತಳರ್ವಸುರನಾ ಮುನಿರಾಜನಮೇಲೆ ಕೀಱ ಪಾ
ಱಲ್ ನಿಜಯಾನವಾಱದದು ಕೀಲಿಸಿದಂತಿರೆ ನೋಡಿ ಕಂಡವಂ
ದಲ್ ನೆನೆದಂ ವಿಭಂಗದಿನತೀತಭವಾಂತರಭೂರಿವೈರಮಂ ॥ ೬೫ ॥

ಆತಂ ಮುನ್ನಿನ ಭವದೊಳ್ ದಮಿತಾರಿಪಕ್ಷವಾಗಿ ಬಂದಾಮುನೀ ಶ್ವರನನಂತವೀರ್ಯನಪ್ಪ ಭವದೊಳಿದಿರ್ಚಿ ತನ್ನ ಸತ್ತಂದಿನ ವೈರಮಂ ಬಗೆದು ಸುಕಂತಂ ಮುಕ್ತಕಂತನೊದಱ ಬಯ್ದು ಮೂದಲಿಸಿ ಮಹೋಪಸರ್ಗಂಗೆ ಯ್ವುದುಮದಂ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನ ವಿಧಿಯೊಳ್ ಶುಭಪರಿಣಾಮ ನಿಕಾಯಕಮುನೀಯಾಂತರಂಗಂ ತದುಪ ಸರ್ಗದೊಳ್ಮುಡಿಪಿ

ಸುರರಾಜಂ ಜಿನಚಂದ್ರಂ
ಬರಮಾವನುಮಿಲ್ಲ ಕಲ್ಪದಚ್ಯುತಕಲ್ಪಂ
ಬರಮಾವುದುಮಿಲ್ಲಾ ದೊರೆ
ಧೊರೆವಿಡಿದಿರೆ ತತ್ಪ್ರತೀಂದ್ರಪದಮಂ ಪಡೆದಂ ॥ ೬೬ ॥

ಅತಿಮೋಹನಿಗಳ ನಿಯಮಿತ
ನುತರೊಡನೊಡನಖಿಲ ಸುಖಮನುಂಡರ್ ದ್ವಾವಿಂ
ಶತಿಜಲಧಿವರೆಗಮಿಂದ್ರ
ಪ್ರತೀಂದ್ರರಿದು ಕೆಳೆ ವಿಭಿನ್ನತರರುಚಿ ಕೆಳೆಯೇ ॥ ೬೭ ॥

ಅಂತು ಕ್ರಮದಿಂದಿಪ್ಪತ್ತು ಸಾಗರೋಪಮಮುಂ —

ನೆಱೆವುದುಮಂತಕನೊಳ್ ತ
ಳ್ತಿಱಿಯಲ್ ಕಳವುಗುವವೋಲ್ ಜಿನಾಲಯಮಂ ಪೊ
ಕ್ಕಱವಂ ಮೆಱೆದೊಡಲಂ ತೊಱೆ
ದಱಿಪಿದನಾಸನ್ನಭವ್ಯನಪ್ಪುದನಿಂದ್ರಂ ॥ ೬೮ ॥

ಕೆಯ್ವೊವರದಿಂದಮರ್ಚಿಸಿ
ಮೆಯ್ವೆರಸಸು ಪೋಗೆ ಕೊಡದ ನೀರಂ ಕೊಡದೊಳ್
ಪೊಯ್ವಂತೆ ತನ್ನ ಸಂಚಯ
ಮುಯ್ವುದುಮುತ್ತಮ ಮನುಷ್ಯಗತಿಗಮರೇಂದ್ರಂ ॥ ೬೯ ॥

ಪೋಗಿ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ತೆಂಕಣ ತಡಿಯ ಮಂಗಳಾವತೀವಿಷಯದ ರತ್ನ ಸಂಚಯಪುರಮನಾಳ್ವ—

ಕಿಂಕರನರಾಮರಂ ಕ್ಷೇ
ಮಂಕರ ತೀರ್ಥಕರ ನೃಪಕುಮಾರಂಗಂ ಧ
ನ್ಯಂ ಕನಕಚಿತ್ರೆಗಂ ವ
ಜ್ರಾಂಕಿತ ತಳವಿಳಸಿತಂ ಪವಿತ್ರಂ ಪುತ್ರಂ ॥ ೭೦ ॥

ವಜ್ರಾಂಕಿತಂ ಪುಟ್ಟಿ ತಾಯ ತಂದೆಯ ಪರಮಾನಂದಮೆ ತನಗಮಳಾಗೆ ಬಳೆಯುತ್ತುಂ —

.ಬಾಲಕನಮೃತಮೆ ಕೆಯ್ಯುಂ
ಕಾಲುಂ ಬಳೆವಂತೆ ಮಧುರ ಗಂಭೀರಂ ಪ
ದ್ಮಾಲಿಂಗಿತನಂತ ಶ್ರೀ
ಲೋಲತೆಗಂ ದೂರಮೆನಿಸಿದಂ ಕಿಱಿಯಂದುಂ ॥ ೭೧ ॥

ಆ ನಿತ್ಯೋದಯನ ತಂದೆ ತಾಂ ತೀರ್ಥಕರನಪ್ಪುದಱಿಂ ಮಗಂಗೆ ಕಿಱಿಯಂದೆ ರಾಜ್ಯಂಗಳಂ ಸಂಗತಂ ಮಾಡಿ ಸಾರವಸ್ತುಗಳೊಳ್ ನಿಸರ್ಗದಿಂದೆ ತಾಂ ನಿರಾದರನಾಗಿ ಶುಭಭಾವನೆಯೊಳ್ ರಾಜ್ಯಕಾಲಮಂ ಸಲಿಸುತ್ತುಮಿರೆ

ಆ ವಿಭು ಜಿನಚಂದ್ರಂ ಲ
ಕ್ಷ್ಮೀವತಿಯಂ ಮದುವೆನಿಂದು ಪೊಸಮದವಣಿಗಂ
ದೇವೇಂದ್ರನ ಶಚಿಯ ವಿಳಾ
ಸಾವಿಷ್ಕೃತ ವಿವಿಧವಿಭವಮಂ ಮಸುಳಿಸಿದಂ ॥ ೭೨ ॥

ಅಂತು ದಿವ್ಯಮನುಷ್ಯೋದಯಾದಿತ್ಯಾಚಳನಾಗಿ —

ಸುಖಮಿರ್ಪನ್ನೆವರಂ ಪ್ರತೀಂದ್ರದಿವಿಜಂ ವಜ್ರಾಯುಧಂಗಂ ಹಸ
ನ್ಮುಖಿ ಲಕ್ಷ್ಮೀಮತಿಗಂ ಪುರಾತನ ಭವಸ್ನೇಹಕ್ಕೆ ಪುಣ್ಯಂ ಮಹಾ
ಸಖಮಾಗುತ್ತಿರೆ ಬಂದು ಪುಟ್ಟಿ ಗುರುವುಂ ತಾನುಂ ಮನಂಗೊಂಡರಾ
ನಖಮಾಂಸಸ್ಥಿತಿಯಪ್ಪ ಪತ್ತುಗೆಗಳಿಂ ಕ್ಷೇಮಂಕರಾಧೀಶನಂ || ೭೩ ||

ಅಂತು ಸೌಜನ್ಯಕಂದಾಂಕುರಂ ಮಹಾಮಹೀಪಾಲಕಂಗೆ ಸಹಸ್ರಾಯುಧಂ ಪುಟ್ಟುವುದುಂ —

ಉತ್ತಮ ನಿಮಿತ್ತಮಂ ನೈ
ಮಿತ್ತಿಕಮುಂ ಪೋಲ್ಕುಮೆನಿಸಿ ಸೊಡರಿಂ ಸೊಡರಂ
ಪೊತ್ತಿಸಿತಂದುಪಮೆಯೊಳ
ಚ್ಚೊತ್ತಿದುವವರಂತರಂಗ ಬಹಿರಂಗಂಗಳ್ || ೭೪ ||

ಅಂತು ಯುವಕೇಸರಿಯುಂ ಕಿಶೋರಕೇಸರಿಯುಂ ಬಳೆವಂತೆ ಜಿನಚಂದ್ರನಪ್ಪ ವಜ್ರಾಯುಧಕುಮಾರನುಂ ಸಹಸ್ರಾಯುಧ ಬಾಲಕನುಮೊಡವಳೆಯೆ ವಳೆಯೆ —

ಸಕಳೋರ್ವೀಧರನಂದನಾವಳಿಗಳಂ ಮೆಯ್ವಿಟ್ಟು ಕೆಯ್ವಿಟ್ಟು ಸೈ
ನಿಕರಪ್ಪನ್ಯಭೃತಾಳಿ ಕೀರಸುಭಟರ್ ಕಯ್ಕೊಳ್ವಿನಂ ತದ್ವಸಂ
ತಕನೆಟ್ಟಿರ್ಪುದುಮುರ್ವರಾಸ್ಯತಿಲಕಂ ವಜ್ರಾಯುಧಂ ಬೇಗಮು
ತ್ಸುಕನಾದಂ ವನಕೇಳಿಲೀಲೆಗನಘಂ ಸೌಜನ್ಯಕಂದಾಂಕುರಂ || ೭೫ ||

## ೮. ಅಸಾರದೊಳ್ ಸಾರಮಂ ಮಹೀಪತಿ ಕೊಂಡಂ

ಆಯುಧಮಂ ಜಯಾಂಗನೆಯೊಳಾವಗಮೋತೊಡಗೂಡುವಂತೆ ವ
ಜ್ರಾಯುಧನರ್ಥದಿಂ ತಣಿಪಿ ವಂದಿಗಳಂ ನಿಜಪುತ್ರನಂ ಸಹ
ಸ್ರಾಯುಧನಂ ಮನೋಹರಿಯೊಳೋತೊಡಗೂಡಿ ನಿಜಾನ್ವವಾಯ ಪಾ
ರಾಯಣನಿಂತು ಸಂತತಿಗಡರ್ಪಸೊಡರ್ಚಿದನುತ್ತರೋತ್ತರಂ ॥ ೧ ॥

ಅಂತುರ್ವರಾಸ್ಯತಿಲಕನಪ್ಪ ವ ಜ್ರಾ ಯು ಧ ಂ ಸಹಸ್ರಾಯುಧಂಗಂ ಮನೋಹರಿಗಂ ಮನೋಹರಮಾಗಿ ಮದುವೆಮಾಡೆ ತತ್ಪುಣ್ಯದಂಪತಿಗೆ —

ಮಗನಗರಾಜಧೈರ್ಯ ನಿಭರಾಜಮನಂ ಮೃಗರಾಜಸತ್ವನ
ರ್ಥಿಗೆ ಭಯವಿಲ್ಲ ಬಾಟಿತ್ತಗೆ ವೃಥೋಕ್ತಿಗಳಿಲ್ಲ ನೆಗಱ್ತಗಂ ಪೊಗ
ೞ್ತಗವೆಣೆಯಿಲ್ಲಿಭೇಂದ್ರರಿಪುವುಂ ಮೃಗವೆಂಬವೊಲಾ ಕುಮಾರನೊಳ್
ಮೃಗನೊನೆಯೆಂಬಿನಂ ಕನಕಶಾಂತಿ ಕುಲೋನ್ನತಿ ಪುಟ್ಟೆ ಪುಟ್ಟಿದಂ ॥ ೨ ॥

ಅಂತು ಪುಟ್ಟೆ ಬಳೆಯೆ ಮತ್ತೊಂದು ದೆವಸಂ ಪವಿತ್ರರಾತ್ರಿ ಸಮಯಾವಸಾನದೊಳ್ —

ಪರಮಶ್ರೀಪತಿ ದೇವವಂದ್ಯನಮಿತ ಕ್ಷೇಮಂಕರಂ ಘೋರಸಂ
ಸರಣಾಂಬೋಧಿಯನೀಸುವಟ್ಟು ಮನದೊಳ್ ಕೆಯ್ಗಣ್ಮೆ ಭಾವಕ್ಕೆ ಬಂ
ದಿರೆ ಬಯ್ತಿಟ್ಟ ವಿಶೋಧಿದುರ್ದಮತೆಯಿಂ ಮೋಹಾಧಿರಾಜಂಗನಾ
ದರನಾದಂ ದೊರೆಯಲ್ಲರೆಂದುಮುಳಿದಕ್ಕೋಪಕ್ಕಘಧ್ವಂಸಿಯಾ ॥ ೩ ॥

ಅಂತು ಕ್ಷೇಮಂಕರಂ ದುರಿತಾರಿಸೈನ್ಯಮಂ ಬೆಂಕೊಳಲ್ ಬಗೆವಂತೆ ಪರಮ ದೀಕ್ಷೆಯಂ ಕೆಯ್ಕೊಳಲ್ ಬಗೆದು ಪರಿನಿಷ್ಕ್ರಮಣೋದ್ಯುಕ್ತನಾದುದಂ ಬ್ರಹ್ಮಕಲ್ಪ ನಿಳಯರಾದಿತ್ಯಾದಿಗಳಪ್ಪ ಲೋಕಾಂತಿಕರವಧಿಜ್ಞಾನದಿಂದಱಿದು ಬಂದು ಪರಮೇಶ್ವರನ ಮನೋಗತಮಂ ವಚೋಗತಂ ಮಾಡಿ ನಿಜಾಧಿಕಾರ ವಶದಿಂ —

ಪಾರಾವಾರಕ್ಕೆ ಜಡರ್
ನೀರಡಕುವ ತೆಱದೆ ಬಿನ್ನಪಂಗೆಯ್ದೆಂ ಸಂ
ಸಾರದ ಮೋಕ್ಷದ ಪಕ್ಷದ
ಸಾರೇತರಸುಖಮನೀಶ ನಿನಗಾರ್ ಪೇೞ್ವರ್ ॥ ೪ ॥

ಈ ಬಗೆ ಸಂಸಾರ ಮತಿ
ಕ್ಲೀಬಂಗೇತಕ್ಕುಮಪ್ಪೊಡಕ್ಕುಂ ನಿನಗ
ಕ್ಲೀಬಂಗೆ ಚರಾಚರಗುರು
ಗೀ ಬಗೆ ಬಗೆದಂತೆ ಬಗೆಗೆವರ್ಪುದು ಪಿಱಿದೇ ॥ ೫ ॥

ಎಂದು ಪರಮನಂತಃಕರಣಜಾತಮನನುವಡಿಸಿ ಮಾಣ್ದರನ್ನೆಗಂ ಸೌಧರ್ಮೇಂದ್ರರ್ಸಮೇತಂ ಚತುರ್ವಿಧವಿಬುಧನಿಕಾಯಂ ತೃತೀಯ ಕಲ್ಯಾಣ ಕರಣೋತ್ಸುಕತ್ವದಿಂ ಬಂದು ಭಗವತ್ಪಾದ ಪಯೋರುಹಕ್ಕೆಱಗೆ ತದನಂತರಂ ಕ್ಷೇಮಂಕರಾಧೀಶ್ವರಂ ವಜ್ರಾಯುಧನುಮಂ ಸಹಸ್ರಾಯುಧನುಮಂ ಬರವೇೞ್ದು–

ಈ ರತ್ನಸಂಚಯಂ ನಿನ
ಗೀ ರಾಜಿತ ರತ್ನಸಂಚಯಂ ತನಗೆಂದು
ರ್ವೀರಕ್ಷಕನಾಗಳ್ ಬಗೆ
ದಾರಯ್ದಾ ಪುರುಷರತ್ನಯುಗಳಕ್ಕಿತ್ತಂ ॥ ೬ ॥

ಅಂತು ನಿಜಾನ್ವಯರಾಜಧಾನಿಯಪ್ಪ ರತ್ನಸಂಚಯಮುಮಂ ಕುಲಧನಸಾರಮಪ್ಪ ರತ್ನಸಂಚಯಮುಮಂ ಮಗಂಗಂ ಮಮ್ಮಗಂಗಮಧಿರಾಜಯುವರಾಜ ಪದವಿವೆರಸು ದಯೆಗೆಯ್ದು ಬೞಿಯಂ ಸುದರ್ಶನಮೆಂಬ ಸಿವಿಗೆಯಂ ಕ್ಷೇಮಂಕರಾಧೀಶನೇಱುವುದುಂ —

ದೇವಾರಣ್ಯಂ ದೇವರ
ದೇವನ ಮನಕಿಂಬನೀಯೆ ತನ್ನಂದನದೊಳ್
ದೇವರ್ ಸಿವಿಗೆಯನಾ ಪ್ರ
ಸ್ತಾವನೆಯಂ ಕೞಪದಿೞಿಪೆ ಪುಳಿನಸ್ಥಳದೊಳ್ ॥ ೭ ॥

ತತ್ಸಮೀಪಸ್ಥಿತ ರಕ್ತಾಶೋಕಮಹೀರುಹತಳ ವಿಶಾಳಶಿಳಾಪಟ್ಟಕದೊಳ್ ಉತ್ತರಾಭಿಮುಖನಾಗಿ ಕುಳ್ಳಿರ್ದು ಸಮುತ್ಸಾರಿತ ವಸ್ತ್ರಾಭರಣನಾಗಿ ಪರ್ಯಂಕಾಸನ ಪರಿಗ್ರಹದಿಂ —

ಸಕಳೋರ್ವೀಶ್ವರ ನಾಕಿನಾಯಕಚಮೂಪರ್ಯುಷ್ಟಿಪಾತ್ರಂ ತ್ರಿಸಾ
ಕ್ಷಿಕನಾಗಳ್ ಬಲಗೆಯ್ ನೊಸಲ್ಗಿಡದ ಕೆಯ್ ಪರ್ಯಂಕಮಪ್ಪಂತು ಸಾ
ರ್ಚಿ ಕಳಾಳಾಪದಿನಾ ಜಗತ್ಪತಿ ನಮಸ್ಸಿದ್ದೇಭ್ಯ ಎಂದಾತ್ಮ ಕೇ
ಶಕಳಾಪಂ ಬರೆ ಪಂಚಮುಷ್ಟಿಗೆ ಜಿನಶ್ರೀದೀಕ್ಷೆಯಂ ತಾಳ್ದಿದಂ ॥ ೮ ॥

ಅಂತಾಪರಮೇಶ್ವರನ ಪಱಿದು ಬಿಸುಟ ಮಧುಪಕಳಭಕುಳ ಮಸೃಣ ಕುಟಿಳ ಸಹಸ್ರಕುಂತಳಂಗಳನುತ್ತರ ದಕ್ಷಿಣೇಂದ್ರರ್ ಪಂಚರತ್ನದ ಪಡಲಿಗೆಗಳೊಳಾಂತು ಪಂಚಮಾಬ್ಧಿಯೊಳಿಕ್ಕಿದರಂತು ಪರಿನಿಷ್ಕ್ರಮಣ ಕಲ್ಯಾಣಾವಸಾನದೊಳ್ ನರೇಂದ್ರದೇವೇಂದ್ರರ್ ತಂತಮ್ಮಾವಾಸಂಗಳ್ಗೆ ಪರೆದು ಪೋದರಿತ್ತ ವಜ್ರಾಯುಧನರಸುಗೆಯ್ಯುತ್ತಿರ್ದು ತನ್ನ ರಾಜ್ಯಾಭಿವೃದ್ಧಿಯೊಳ್—

ಕಸವರದೊಳ್ ಜಸಮಂ ಮಾ
ನಸವಾಟಿೞೊಳ್ ಧರ್ಮಮಂ ಶರೀರದೊಳಱಿವಂ
ಸಸಿಯೊಳ್ ಬೆಳಸಂ ಕೊಳ್ವವೊ
ಲಸಾರದೊಳ್ ಸಾರಮಂ ಮಹೀಪತಿ ಕೊಂಡಂ ॥ ೯ ॥

ಪಾಪೇಭಕಂಠೀರವನಪ್ಪ ವಜ್ರಾಯುಧಂ ಸುಖದಿನರಸುಗೆಯ್ಯುತ್ತಿರ್ಪುದುಮೊಂದು ದೆವಸಮೋಲಗದೊಳಾಯುಧಾಧ್ಯಕ್ಷಂ ಬಂದುಮಱಸನಿದಿರೊಳ್ ನಿಂದು —

ಆಯುಧಶಾಲೆಯೊಳ್ ಶತಸಹಸ್ರರವಿಪ್ರವಿಭಾಸಿ ದೇವ ಚ
ಕ್ರಾಯುಧಮಿಂದು ಬಂದು ನೆಲಸಿರ್ದುದು ಯಕ್ಷಸಹಸ್ರರಕ್ಷಿತ
ನ್ಯಾಯಮಿದಂ ವಿಧಿಕ್ರಮದಿನರ್ಚಿಸಿ ದಿಗ್ವಿಜಯಕ್ಕೆ ಪೋಪುದ
ತ್ಯಾಯತಪುಣ್ಯ ಮುಂನ್ನಮಧಿರಾಜನೆ ಯಿಂ ಸಲೆ ಚಕ್ರವರ್ತಿಯೈ ॥ ೧೦ ॥

ಎಂದು ಬಿನ್ನಪಂಗೆಯ್ದು ಮಾಣ್ದು ಬೇಗದೊಳಾನಂದನೆಂಬೊಂ ಋಷಿ ನಿವೇದಕನಿಂತೆಂದು ಬಿನ್ನಪಂಗಯ್ದಂ, ಶ್ರೀನಿಲಯೋದ್ಯಾನದೊಳ್—

ಸುರಪೂಜ್ಯಂಗಾಕ್ಷೇಮಂ
ಕರಂಗೆ ಪುಟ್ಟಿದುದು ತನ್ಮನಃಪರ್ಯಯದಿಂ
ದೆರಡನೆಯ ಸಮಯದೊಳ್ ಕ್ರಮ
ಕರಣವ್ಯವಧಾನರಹಿತ ಕೇವಳಬೋಧಂ ॥ ೧೧ ॥

ಎಂದು ಬಿನ್ನವಿಸುವುದುಮಿಭೇಂದ್ರಾರಾತಿಪೀಠದಿಂದಮೆರ್ದೇಟಡಿಯಂ ನಡೆದು ಚರಾಚರಗುರುವಿರ್ದ ದೆಸೆಗೇಟಡಿಯಂ ನಡೆದೆರಗಿ ಪೊಡೆವಟ್ಟೆರಡೊಸಗೆಯೊಳಂ ಮುಖ್ಯಂಗರುವೆಂಬುದಂ ಬಗೆದು ಆನಂದಭೇರಿಯಂ ಪೊಯ್ಸಲ್ವೇಟ್ಟು ಋಷಿನಿವೇದಕನ ಮೊಗಮಂ ನೋಡಿ—

ರಾಗದ ಪೊಱೆಯಿರೆ ಪೊತ್ತಿರ
ಲಾಗದವೋಲ್ ತನ್ನ ತೊಟ್ಟ ತುಡುಗೆಮನಾತಂ
ಗಾಗಳೆ ಕಳೆದಿತ್ತಂ ಕುಡು
ವೀಗುಣಮೊಪ್ಪುವವೊಲೊಪ್ಪವಾಭರಣಂಗಳ್ ॥ ೧೨ ॥

ಅಂತಾತಂಗೆ ಮಚ್ಚುಗೊಟ್ಟು ವಂದನಾಭಕ್ತಿಗೆ ಪುರಾಂತಃಪುರಪರಿವಾರ ಜನಸಮೇತಮಷ್ಟವಿಧಾರ್ಚನಾಪುರಸ್ಸರಂ ಜೈನಶಾಸನಚೂಡಾಮಣಿಯಪ್ಪ ವಜ್ರಾಯುಧಂ ಪೋಗಿ ಸಮವಸರಣಭೂಮಿಯನೆಯ್ದಿ ಪಟ್ಟವರ್ಧನದಿಂದ ಮಿಱಿಯೆ—

ಮಾನಸ್ತಂಭದಿನಭವಾ
ಸೀನ ಶ್ರೀಮಂಡಪಂಬರಂ ಕ್ರಮದಿಂದಂ
ಭೂನಾಥಂ ಪೊಕ್ಕಂ ಭ
ವ್ಯಾನಂದನ ಸಮವಸರಣ ಭೂಮಂಡಳಮಂ ॥ ೧೩ ॥

ಜಿತವಿಶ್ವಕರ್ಮಪರಿ ನಿ
ರ್ಮಿತಕೃತಿಯಂ ತ್ರಿಃಪ್ರದಕ್ಷಿಣಂಗೆಯ್ದು ಮಹೀ
ಪತಿ ಗಂಧಕುಟಿಯನಾ ಜಿನ
ಪತಿಯಿದಿರೊಳ್ ನಿಂದು ವಿನಯವಿನಮಿತಮುಕುಟಂ ॥ ೧೪ ॥

ಪಗೆವಂಗಂ ಕೆಳೆಯಂಗಮಾರ್ದ್ರಮತಿಯಂ ತ್ವನ್ಮೂರ್ತಿ ತೀರ್ಥೇಶ ಮಾ
ಡುಗುಮಾಳೋಚಿಸೆ ನಿನ್ನ ತತ್ವಮ[ವಿ]ಸಂವಾದಂ ದುರಾಪಂ ಗುಣಾ
ಬ್ಧಿಗಭೀರಂ ಭವದೀಯಮೆಂದವಿತಥಾಳಾಪೋತ್ಕರಂ ರೂಪವ
ಸ್ತುಗುಣಸ್ತೋತ್ರದಿನೆಂದು ಬಂದಿಸಿದನಾ ಪಾಪೇಭಕಂಠೀರವಂ ॥ ೧೫ ॥

ಭಗವದರ್ಹತ್ಪದಾರವಿಂದವಂದನಾನಂತರಂ ಗಣಧರದೇವರಂ ಬಂದಿಸಿ ಸಮವಸರಣಮಂ ಪೊಱಮಟ್ಟು ಪಟ್ಟವರ್ಧನಮನೇಱಿ ಬಂದು ರತ್ನ ಸಂಚಯ ಪುರಮಂ ಪೊಕ್ಕು ಚಕ್ರರತ್ನಮಂ ಪೂಜಿಸಿ ತದನಂತರಂ ಪುರಾತನ ಚಕ್ರವರ್ತಿಗಳ ನಿಯಮದಿಂ ದಿಗ್ವಿಜಯಕ್ಕೆ ಪೊಱಮಟ್ಟನೇಕ ವ್ಯಂತರಾಮರರುಮಂ ರಜತಾಚಳದುಭಯಶ್ರೇಣೀನಿವಾಸಿಗಳಪ್ಪ ಗಗನಚರರುಮಂ ಬಾಯ್ಕೇಳಿಸಿ ಮಗುೞ್ದು ಬಂದು—

ಸ್ಮಯವದ್ಭೂಮಿಪರಿತ್ತ ವಿತ್ತನಿಕರಂ ಬೆನ್ನಿತ್ತ ಗೆಲ್ಲಂ ನಿಜಾ
ಜ್ಞೆಯನಾಂತೊಂದಱಿಯೋಲಿಗೇದೊರೆಯರುಂ ಮೂವಿಟ್ಟಗಂ ಪೂಣ್ದು ತೊ
ರ್ಮೆಯ ಮೆಯ್ ದಿಗ್ವಿಜಯಕ್ಕೆ ನೇರ್ಪಡುವಿನಂ ವಜ್ರಾಯುಧಂ ರತ್ನ ಸಂ
ಚಯಮಂ ಹಾರದನಾಯಕಂ ಪುಗುವವೋಲ್ ಪೊಕ್ಕಂ
ಸ್ಫುರತ್ತೇಜದಿಂ ॥ ೧೬ ॥

ಅಂತು ಸಕಳಚಕ್ರವರ್ತಿ ಷಟ್ಖಂಡಾವನಿಯಂ ಬಾಯ್ಕೇಳಿಸಿ ಪೊೞಲಂ ಪೊಕ್ಕು ಸಾಮ್ರಾಜ್ಯಶ್ರೀಯನನುಭವಿಸುತ್ತಂ ಅಸಾರಸಂಸಾರಸ್ವರೂಪ ಮನಱಿದು ತಱಿಸಂದು ನಿಜಪ್ರಿಯಸುತಂಗೆ ಪಟ್ಟಂಗಟ್ಟಿ ಕ್ಷೇಮಂಕರತೀರ್ಥಕರಪರಮದೇವರ್ ಗುರುಗಳಾಗೆ–

ಮಹಿಮತಿ ಭೋಗಪ್ರಕರಮ
ನಹಿಪತಿ ಭೋಗೋಪಮಾನಮೆಂದಱಿದಂತ
ರ್ಬಹಿರರ್ಥನಿಚಯಮಮಂ ತೊಱೆ
ದಹೀನಜೈನೇಂದ್ರರೂಪಮಮಂ ಕೆಯ್ಕೊಂಡಂ ॥ ೧೭ ॥

ಅಂತು ಮೂಸಾಸಿರ್ವರ್ ಮಹೀನಾಥರೊಡನೆ ಜಿನ(ನಾಥ)ರೂಪಮಂ ತಾಳ್ದಿ ತಪಕ್ಕುಪಯೋಗಮಪ್ಪ ಕ್ರಿಯಾಕ್ರಮಮೆಲ್ಲಮನಾತ್ಮೀಯಂ ಮಾಡಿ ಗಣಪೋಷಣಾನಂತರಂ ಏಕವಿಹಾರಿಯಾಗಿ ವಿಹಾರಿಸುತ್ತುಂ ಸಿದ್ಧಾಚಳದ ಮೇಗೆ ಸಂವತ್ಸರಾವಧಿಯಪ್ಪುತ್ಕೃಷ್ಟ ಪ್ರತಿಮಾಯೋಗದೊಳಿರೆ ತ್ರಿಪೃಷ್ಠನ ಕೆಯ್ಯೊಳ್ ಸತ್ತಶ್ವಗ್ರೀವನ ಮಕ್ಕಳಮಿತತೇಜಂಗಿದಿರ್ಚಿ ಸತ್ತಂಬರಚರರ ಭವನವಾಸಿಗಳೊಳನಂತವೀರ್ಯನುಂ ಮಹಾಬಲನುಮೆಂಬ ಪೆಸರೊಳಸುರರಾಗಿ ಪುಟ್ಟಿ ಭೌಮವಿಹಾರಾರ್ಥಂ ಪೋಗಿ ವಜ್ರಾಯುಧಮುನೀಂದ್ರನ ಮೇಗೆ ವಿಮಾನಂ ಪಾಱದಿರೆ ವಿಭಂಗಜ್ಞಾನದಿನಱಿದು ಮುನಿದು–

ಇೞಿದು ವಿಮಾನದಿಂ ಪರಮಯೋಗಿಗೆ ಯೋಗನಿಯೋಗಘಾತಮಂ
ಘಟಿಯಿಸೆ ರಂಭೆಯೆಂಬಳ ತಿಲೋತ್ತಮೆಯೆಂಬಳ ಬರ್ಪುದರ್ಕೆ ತ
ಲ್ಲಟಿಸಿ ಭಯಾಕುಳರ್ ಪೆಱಱಿ ದೇವವಿಳಾಸಿನಿಯರ್ ವಿಶೋಧಿ ಪೊಂ
ಪುೞಿಯೆನೆ ತನ್ಮುನೀಶ್ವರನನರ್ಚಿಸಿ ಪೂಜಿಸಿ ಪೋದರನ್ನೆಗಂ ॥ ೧೮ ॥

ಇತ್ತ ಸಹಸ್ರಾಯುಧಂಗೆ ವಜ್ರಾಯುಧಮುನೀದ್ರ ತಪಃಪ್ರಭಾವಮನರಣ್ಯಾನೀಚರರಱಿಪೆ ಹರ್ಷಾಶ್ರುವಿಮಿಶ್ರವಿಲೋಚನಂ ಬಂದು ಬಂದಿಸಿ–

ಸತಿ ವಿಸುಟಳಲೊಳಮೆ ಲತಾ
ಕೃತಿಯಿಂದಡರ್ವಂತೆ ಮೆಯ್ಯನಡದರ್ಪು ಪಲವುಂ
ವ್ರತತಿಗಳಪ್ಪಿದವೊಲಿಳಾ
ಸತಿ ಮೆಯ್ಯಂ ಪುತ್ತು ಪತ್ತಿ ಮೆತ್ತಿದುವೆನಿತುಂ ॥ ೧೯ ॥

ತದ್ರೂಪಾದರ್ಶನಮೆ ತನಗೆ ವೈರಾಗ್ಯನಿಮಿತ್ತಮಾಗಿ ಪ್ರೀತಿಂಕರನೆಂಬ ನಿಜತನೂಜಂಗೆ ರಾಜ್ಯಭಾರಮನಿತ್ತು ಪಿಹಿತಾಸ್ರವಗುರುಗಳ ಪಾದಪದ್ಮಸಮೀ

ಸದೊಳನೇಕ ರಾಜಸಮಾಜಂಬೆರಸು ಸಹಸ್ರಾಯುಧಂ ಜಿನೇಶ್ವರರೂಪಮಂ ತಾಳ್ದಿ ದುಶ್ಚರತಪಶ್ಚರಣಪರಿಣತನಿಹಿತವಿಹಾರನಾಗಿ ಮುನಿವೃಂದಕ್ಕೆ ಪಡಿಚಂದಮಾಗಿ ನೆಗೞುತ್ತಿರೆ ಮತ್ತಿತ್ತ ಸಿದ್ಧಾದ್ರೀಂದ್ರದೊಳ್—

ಪ್ರಾಯೋಪಗಮನದಿಂ ವ
ಜ್ರಾಯುಧಮುನಿ ತೊಱೆದು ಮುಡುಪಿ ಬಂದುಪರಿಗ್ರೈ
ವೇಯಕ ಪರಾರ್ಧ್ಯಮಣಿಕಿರ
ಣಾಯತ ದೀಪಪ್ರದೀಪ ಕಬಳಿತತಮದೊಳ್ ॥ ೨೦ ॥

ಪ್ರೀತಿಂಕರವಿಮಾನದೊಳ್ ಮೂವತ್ತೊಂದು ಸಾಗರೋಪಮಮುಮಮಿತ ವಿಕ್ರಮಾಭಿಧಾನಮುಮನಹಮಿಂದ್ರ ಪರಮೈಶ್ವರ್ಯಮುಮಂ ದೊರೆಕೊಳೆ ಸುಖಾತ್ಮನಿರೆ—

ನೆಗೞ್ದೀಷತ್ಪ್ರಾಗ್ಭಾರಾ
ಖ್ಯಗಿರೀಂದ್ರದ ಶಿರದೊಳಾ ಸಹಸ್ರಾಯುಧ ಯೋ
ಗಿಗಳುಂ ಬಿಸುಟರ್ ಪ್ರಾಯೋ
ಪಗಮನದಿಂ ತಮ್ಮ ಪೊತ್ತ ತನುವಿನ ಪೊಱೆಯಂ ॥ ೨೧ ॥

ಅಂತು ಶರೀರಭಾರಮನಿೞಿಪಿ ನೀರೊಳ್ ಮಣ್ಣಪೆಟ್ಟೆಯಂ ಪತ್ತುವಿಟ್ಟ ಕಳಮುಕಣಿಶದಂತೂರ್ಧ್ವಗತಿಸ್ವಭಾವನಿರತನಾಗಿ ಸಹಸ್ರಾಯುಧನುಂ ವಜ್ರಾಯುಧನುಂ ಪುಟ್ಟಿದ ವಿಮಾನದೊಳ್ ಕಾಂತಿಪ್ರಭನೆಂಬೊನಹಮಿಂದ್ರನಾದನಿಂತು—

ಬೞಿವೞಿಯನೆ ಪೋಗದೊಡೆ
ಪೞಿಗುಂ ಸುರಕೋಟಿ ನಗುಗುಮೆಂದಾತನ ಪೊಂ
ಪುೞಿವೋದಲಂಪುಣಲ್ ಬಂ
ದುೞಿಯೆನೆ ಬೆಂಬನ್ನನಿಂತು ಕೂರ್ತರುಮೊಳರೇ ॥ ೨೨ ॥

ಕೊರಗಿದರೆ ಮೆಯ್ಯನಿನಿಸಗಿ
ದರೆ ಅವರ್ಗಳ್ ದೇವಲೋಕಸುಖದೊಳ್ ಮನವಿ
ಟ್ಟರೆ ಮಱುಭವಕ್ಕೆ ಕಣ್ಣಿ
ಟ್ಟರೆ ಮುಡುಪಿದರಮರರಿರ್ವರುಂ ನಿರಪೇಕ್ಷರ್ ॥ ೨೩ ॥

ಅಂತಲ್ಲಿ ಪರಿಚ್ಯುತರಾಗಿ ಬಂದೀ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಲಾವತೀವಿಷಯದ ಪುಂಡರೀಕಿಣೀಪುರ ಮನಾಳ್ವೊಂ–

ಅತಿಶಯಪುಣ್ಯಂ ಗರ್ಭಾ
ವತರಣ ಜನ್ಮಾಭಿಷೇಕನುತಕಲ್ಯಾಣ
ದ್ವಿತಯಮನೆಯ್ದಿರ್ದ ಜಗ
ತ್ಪತಿ ಘನರಥನಭಿಮುಖಂ ವಿಮೋಹಾಂತರಥಂ ॥ ೨೪ ॥

ಪರಮೇಶ್ವರಂಗೆ ಬಗೆಗೊಂ
ಡರಸಿಯರವರಿರ್ವರತ್ಯಪೂರ್ವಾಕೃತಿ ಭಾ
ಸುರೆಯರ್ ಪಿರಿಯರಸಿ ಮನೋ
ಹರೆ ಕಿಱಿಯಳ್ ಪ್ರೀತಿಮತಿ ಪತಿವ್ರತೆ ಧರೆಯೊಳ್ ॥ ೨೫ ॥

ಅಪ್ರಮಿತಪುಣ್ಯರಮರರ
ತಿಪ್ರಿಯರಂದಗಲದಮಿತವಿಕ್ರಮನುಂ ಕಾಂ
ತಿಪ್ರಭನುಂ ಘನರಥ ತೀ
ರ್ಥಪ್ರಭುಗಂ ತತ್ಪ್ರಿಯಾದ್ವಯಕ್ಕಮುದಾತ್ತರ್ ॥ ೨೬ ॥

ಕ್ರಮದೆ ಮನೋಹರೆಗಂ ಪ್ರೀ
ತಿಮತಿಗಮಱಿವೊಡನೆ ಪುಟ್ಟಿ ಪುಟ್ಟಿದರಮರೋ
ತ್ತಮರಗ್ರತನೂಭವರಾ
ಗಿ ಮೇಘರಥ ದೃಢರಥಾಭಿಧಾನಾನೂನರ್ ॥ ೨೭ ॥

ಅಂತು ಘನರಥತೀರ್ಥಕರ ರಾಜ್ಯಕಾಲಕಲ್ಪಭೂರುಹಕ್ಕೆ ಪುಟ್ಟಿ ತಂದೆಯ ಪರಮೌದಾರಿಕ ಶರೀರ ಬಾಹುಯುಗಳದಂತೆ ಜವ್ವನಂ ನೆಱೆದಿರೆ ಪಿರಿಯ ಮಗನಂ—

ಘನರಥನಂದು ಮೇಘರಥನಂ ಪ್ರಿಯಮಿತ್ರೆಯೊಳಂ ಮನೋಹರಾ
ವನಿತೆಯೊಳಂ ವಿವಾಹವಿಧಿಯಿಂದೊಡಗೂಡಿ ಸುರೇಶ್ವರಂ ವಿಲೋ
ಕನದಿನಹೇಶ್ವರಂ ವಿಭವವರ್ಣನೆಯಿಂದೆ ಧನೇಶ್ವರಂ ವಿನೂ
ತನ ಧನದಾನದಿಂ ನೆರೆದರೇಂ ಸಲೆ ಮೇಘರಥಂ
ಸಪುಣ್ಯನೋ ॥ ೨೮ ॥

ಅಲ್ಲಿಂ ಬೞಿಯಂ—

ಸುಮತಿಗತಿ ಸುಮತಿ ಪುನರು
ಕ್ತಮೆನ್ನದರೆ ಸುಮತಿಯೆನಿಪ ದೃಢರಥನುಮನಾ
ಸುಮತಿಯೊಡನೆರಪಿದಂ ಗುರು
ಸುಮತಿಯ ಮತಿ ದೃಢರಥಂಗಮಿರ್ಮಡಿಸುವಿನಂ ॥ ೨೯ ॥

ಅಂತು ಪಿರಿಯಮಗಂಗೆ ಪ್ರಿಯಮಿತ್ರೆಯುಂ ಕಿಱಿಯ ಮಗಂಗೆ ಸುಮತಿಯುಮಗ್ರಮಹಿಷೀಪದದೊಳ್ ನಿಲೆ, ಸುಖದಿನಿರ್ಪನ್ನೆಗಂ—

ನೆಗಟ್ದಿ ಪಯೋಂಬುಧಿಗಂ ಗಂ
ಗೆಗಮಮೃತಂ ಪುಟ್ಟುವಂತೆ ಮೇಘರಥಂಗಂ
ಮೃಗಲೋಚನೆ ತತ್ಪ್ರಿಯಮಿ
ತ್ರೆಗಂ ಮಗಂ ನಂದಿವರ್ಧನಂ ಪುಟ್ಟುವುದುಂ ॥ ೩೦ ॥

ಮತ್ತಾ ದೃಢರಥನ ಸುತ
ತ್ವೋತ್ತಮನಾತನ ಮನೋಜ್ಞೆ ಸುಮತಿಯುಮಜೀವಂ
ಪೊತ್ತುವವೊಲನ್ವಯಂ ದೊರೆ
ವೆತ್ತಿರೆ ವರಸೇನನೆಂಬ ಮಗನಂ ಪೆತ್ತಳ್ ॥ ೩೧ ॥

ಆ ಸಕಳಾಮರೋರಗ ನರಾವನತಂ ಖಳಕರ್ಮಸೈನ್ಯಂ ಸಂ
ತ್ರಾಸಿಮನೋರಥಂ ಘನರಥಂ ಘನಘಾತಿವಿಘಾತನಾತ್ಮನು
ಗ್ರಾಸಿ ಸಮಾನ ಬೋಧಿಪದದೊಳ್ ನಿಲಲೆಂದಪವರ್ಗಮಾರ್ಗದ
ಗ್ರೇಸರನಾಗಲೆಂದು ಬಗೆದಾತ್ಮಗತಂ ಬೆಳಗಪ್ಪ ಜಾವದೊಳ್ ‖ ೩೨ ‖

ಪರಿನಿಷ್ಕ್ರಮಣಕಲ್ಯಾಣಮನನಾಗಿ ಘನರಥಂ ನೇಸಱ್ ಮೂಡೆ—

ಅಭಿಷೇಕಪೂರ್ವಕಂ ಭೂ
ತಭವಿಷ್ಯದ್ವರ್ತಮಾನ ಜಗತೀತಳಮಂ
ಪ್ರಭು ಮೇಘರಥಂಗಿತ್ತಂ
ವಿಭೂತಿವೆರಸಖಿಳ ರಾಜ್ಯಮಂ ದಯೆಯಿಂದಂ ‖ ೩೩ ‖

ತದನಂತರಂ ಸುದರ್ಶನಾಭಿಧಾನಶಿಬಿಕಾರೂಢನಪ್ಪುದುಂ—

ಅತಿವಿನಯದಿಂದಮವನೀ
ಪತಿಗಳ್ ಮುಂ ಬೞಿಕೆ ಕಲ್ಪವಾಸಿಗರತ್ಯು
ನ್ನತರುಯ್ದರಾಗ[ಳಾ ಕುಸು
ಮಿತ ವರ]ನಂದನವನಕ್ಕೆ ಪೊತ್ತುತ್ಸವದಿಂ ‖ ೩೪ ‖

ಅಲ್ಲಿ ದೇವೇಂದ್ರರಿೞಿಪೆ ಘನರಥ(ಭೂ)ನಾಥಂ—

ಆ ವನದಶೋಕತರು ನುತ
ಪಾವನಸಿಕ ತಿಳತಳ ಪ್ರದೇಶ ಪವಿತ್ರ
ಗ್ರಾವದೊಳಂತರ್ಮುಖಚಿಂ
ತಾವಿಷ್ಕೃತತತ್ವನುಲ್ಲಸತ್ಪಲ್ಯಂಕಂ ‖ ೩೫ ‖

ವಸ್ತ್ರಾಭರಣಂಗಳಂ ಕಳೆದು ನಮಸ್ಸಿದ್ಧೇಭ್ಯ ಎಂದು ಪಂಚಮುಷ್ಟಿಯಿಂದೆ—

ಅಪವರ್ಗಪ್ರಿಯೆಯುಂ ಏ
ಷ್ಟಪಲಕ್ಷ್ಮಿಯ ಮೋಹದಿಂದಮೆಯ್ದುವುದಱಿಂ
ದಪಗತದುರಿತಂ ತನ್ಮೋ
ಹಪಾಶಮುಂ ಪಱಿಗ ಕೆಱಿದೆ ತಲೆಯುಂ ಪಱಿದಂ ‖ ೩೬ ‖

ಅಂತಭವನ ಕೇಶೋತ್ಪಾಟಿತ ಕೋಮಳಾಳಿಮಾಳಾಳಂಕೃತಂಗಳನಮ ರೇಂದ್ರರ್ ಮಣಿಪಡಿಗಂಗಳೊಳಾಂತು ಕೊಂಡು [ಪಂಚಮಸಮುದ್ರದೊಳ್ ಕೂಡಿ ಮುನೀಂದ್ರನನಭಿವಂದಿಸಿ ಬಲಗೊಂಡು ದಿವಕ್ಕೆ ತಳರ್ವುದುಮಾಗಳ್] ಮೇಘರಥನುಂ ದೃಢರಥಾದಿಗಳ್ವೆರಸು ತನ್ಮುನೀಂದ್ರಪಾದಂಗಳ್ಗೆಱಗಿ ಬಂದು ಪುಂಡರೀಕಿಣಿಯಂ ಪೊಕ್ಕರಸುಗೆಯ್ಯುತ್ತಿರೆ, ಮತ್ತಿತ್ತ ಘನರಥನಾಥಂಗೆ—

ಪುಟ್ಟೆ ಮನಃಪರ್ಯಯಮೊಡ  
ವುಟ್ಟೆಯುಮುಮಳಲ್ತು ತನ್ನ ಮಳಮಂ ಕಿಡಿಸಲ್  
ಪುಟ್ಟಿದುದೆನೆ ಶುಭದಿನದೊಳ್  
ಪುಟ್ಟಿದುದಖಿಳಾವಬೋಧಿ ಕೇವಳಬೋಧಂ ॥ ೩೭ ॥

ತದನಂತರಂ ಜೈನಶಾಸನಚೂಡಾಮಣಿಯಪ್ಪ ಮೇಘರಥ ಧರಾಧೀಶ್ವರನುಂ ವಂದನಾಭಕ್ತಿಗೆ ಪೋಗಿ ಸಮವಸರಣಮಂ ಪೊಕ್ಕು ಪ್ರಥಮ ದ್ವಿತೀಯ ತೃತೀಯ ಪೀಠಂಗಳುಮನನುಕ್ರಮದಿನರ್ಚಿಸಿ ಗಂಧಕುಟೀಮಧ್ಯಾಧ್ಯಾಸಿತ ಸಿಂಹಾಸನಾಸೀನಂ ತ್ರಿಜಗಚ್ಚೂಡಾಮಣಿಯಂ ಕರಣತ್ರಯ ಶುದ್ಧಿಯಿಂದೆಱಗಿ ಪೊಡೆವಟ್ಟನಿತಾನುಂ ಸ್ತುತಿಗಳಿಂ ಸ್ತುತಿಯಿಸಿ ಬಂದು ಗಣಧರ ದೇವರ ಗುರುಭಕ್ತಿಪೂರ್ವಕಂ ತನಗೆಡೆಮಾಡಿದ ಕೋಷ್ಠಾಸನದೊಳ್ ಕುಳ್ಳಿರ್ದು—

ಜಿನವಚನರಸಾಯನಮಂ  
ಜಿನಾಧಿಪಂ ಶ್ರೋತ್ರಪಾತ್ರದೊಳ್ ತೀವಿ ಚಿರಂ  
ವಿನಮಿತಮಕುಟಂ ಬಂದಿಸಿ  
ಜಿನೇಂದ್ರ ಗಣಧರರನೆಸೆದನು ಕ್ರಮದಿಂದಂ ॥ ೩೮ ॥

ಸಮವಸರಣದಿಂದ ಪೊಱಮಟ್ಟು ಬಂದರಮನೆಯಂ ಪೊಕ್ಕು ರಾಜ ಲೀಲಾವಿಲಾಸವಿನೋದಂ ನಾನಾನೂನವಿಭವಸಂಭವ ಸುಖಾನುಭವನಿರತಂ ಸೌಜನ್ಯಕಂದಾಂಕುರನಪ್ಪ ಮೇಘರಥಂ ರಾಜ್ಯಂಗೆಯ್ಯುತ್ತಿ[ರ್ದಂ] ಅರಸನುಂ ನಂದೀಶ್ವರಮಹಿಮೆಯ ಮಹಾತ್ರಿರಾತ್ರದ ಪಾರಣೆಗೆ ವಂದು ಪಾರಣಾವ್ಯಾಪಾರ ಮುನಿನಿಸಾನುಂ ಮಾಣಿಸಿ ದ್ವಾರಾಪೇಕ್ಷೆಗೆಯ್ಯುತ್ತಿರ್ಪಿನಮಾ ವೇಳೆಯೊಳ್ ಮಾಸೋಪವಾಸಮಂ ನೆಱಪಿ—

ಚರಿಗೆವುಗೆ ಬೋಧನಿಧಿ ದಮ
ವರಮುನಿಯಂ ಭುವನನಾಥನಿದಿರ್ಗೊಂಡು ಮನೋ
ಹರ ಪಾತ್ರ[ದಾನಮಂ ಮೇ]
ಘರಥಂ ಕುಡೆ ನೆಗೞ್ದುವೊಡನೆ ಪಂಚಾಶ್ಚರ್ಯಂ ॥ ೩೯ ॥

ತದನಂತರಂ ಭಟ್ಟಾರಕರರಸನಂ ಪರಸಿ ಬಿಜಯಂಗೆಯ್ದರ್ ಉರ್ವ ರಾಸ್ಯತಿಲಕನಪ್ಪ ಮೇಘರಥನರೇಂದ್ರನುಪ[ವಾ]ಸದ ಮೇಗೆ ದೊರೆಕೊಂಡು ತ್ತಮ ಪಾತ್ರದಾನದ ಸಂತಸದಿಂ ತಣಿದುದಂ ಪುನರುಕ್ತಂ ಮಾಡ್ಪಂತೆ ದಿವ್ಯಾ ಹಾರಮಂ ಪಾರಿ ಸುಖಮಿರೆ ಮತ್ತೊಂದು ಚತುರ್ದಶೀವಾಸರ ರಜನೀಸಮಯ ದೊಳ್ ಮೇಘರಥಂ ಮನಃಪ್ರೀತಿರಥನುಪವಾಸ ನಿರತಂ ಜಿನಮಂದಿರದ ಮುಂದಣ ಮಂದಿರದಲ್ಲಿ ರಾತ್ರಿ ಪ್ರತಿಮಾಯೋಗದೊಳಿರೆ—

ಸಾಂ[ದ್ರಾ]ತಿವಿತತನೀಶಾ
ನೇಂದ್ರಂ ಪೊಡೆವಡೆ ನೆಲಕ್ಕೆ ದಿವಿಜರ್ ನುತದೇ
ವೇಂದ್ರ ಭವನ್ನಮನಕ್ಕೆ ಜಿ
ನೇಂದ್ರಂ ದೊರೆ ಬೆಸಸದೇಕೆ ನೆಲನೆೞಗಿದಪ್ಪೈ ॥ ೪೦ ॥

ಎಂಬುದುಮಿಾಶಾನೇಂದ್ರಂ—

ಅಪ್ರತಿಮಂ ನೃಪೇಂದ್ರನುಪವಾಸವಿಧಾನದಿನಿರ್ದನಲ್ತೆ ರಾ
ತ್ರಿಪ್ರ[ಮಿ]ತಂ [ಮಹಾ] ಜಿನಗೃಹಾಗ್ರದ ಮಂದರದಲ್ಲಿ ಸರ್ವಲೋ
ಕಪ್ರಿಯನಪ್ಪ ಮೇಘರಥ[ನಾ ಮುನಿ]ಗಾನತನಾದೆನಿಂ ತ್ರಿಲೋ
ಕಪ್ರಭುವಪ್ಪನಾತನೆನೆ ಗರ್ವದಿನಿರ್ವರಪೂರ್ವ ರೂಪೆಯರ್ ॥ ೪೧ ॥

ಅಮರಿಯರಾತನ ನಿಯಮಮ
ನಮೋಘನವಯವದಿನೞವೆವೆಂದಿೞತಂದು
ತ್ತಮಯೋಗಭಂಗಮಂ ಮಾ
ಡೆ ಮಂದರಾಚಳ ನಿರಾಕುಳಂ ಜಿನಚಂದ್ರಂ ॥ ೪೨ ॥

ಆ ದಿವಿಜವನಿತೆಯರೆನಿತಾನುಂ ತೆಱದ ಶೃಂಗಾರಚೇಷ್ಟೆಗಳನುಪಯೋಜಿಸಿಯುಮೆಂತುಮೇಗೆಯ್ದುಮಾ ಜಂಗಮಮೇರುವೆನಿಸಿದ ಸೌಜನ್ಯಕಂದಾಂಕುರನಂ ಸಂಚಳಿಸಲಾಱದೆ ಸಿಗ್ಗಿನನುಕಂಪೆಯುಂ ತಱಿ ವಿನಯವಿನಮಿತೋತ್ತಮಾಂಗೆಯರ್ ಬಿಚ್ಚಳಿಯುಂ ಮೆಚ್ಚಿಯುಂ [ಪ್ರವ್ರ]ಜ್ಯಾಶ್ರಮ ಗುರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳಮೃತಾಹಾರಮನಾರೋಗಿಸಿ–

ಪೊರೆಯದವೋಲ್ ಕೀರಂ ನೀ<br>
ರರುಹಂ ಸಪ್ತಾಂಗರಾಜ್ಯಭರದೊಳ್ ನಿಲೆ ಮೇ<br>
ಘರಥಂಗೆ ತಪಂ ಗೆಯ್ವಂ<br>
ತಿರೆ ರಾಜ್ಯಂಗೆಯ್ಯೆ ಪೋಯ್ತುಮೇಯಂ ಪ್ರಾಯಂ ॥ ೪೩ ॥

ಅಂತು ರಾಜ್ಯಂಗೆಯ್ಯುತ್ತಿರೆ—

ದಯಿತಾಸೌಂದರ್ಯದ ಲೀ<br>
ಲೆಯ ಕಾಂತೆಯ ಮಾತು ಪುಟ್ಟೆ ಮೇಘರಥಮನಃ<br>
ಪ್ರಿಯೆಯಾಗಿರ್ದಾ ಪ್ರಿಯಮಿ<br>
ತ್ರೆಯ ರೂಪಂ ಸಭೆಗೆ ಪೊಗಟ್ದನೀಶಾನೇಂದ್ರಂ ॥ ೪೪ ॥

ಅಂತಿಂದ್ರನ ಪೊಗೞ್ತೆಯಂ ಕೇಳ್ದೞ್ತಿಯಿಂದಿರ್ವರ್ ದೇವಿಯರಾಕೃತಿಯ ಪರಾವರ್ತನದಿಂ ಮಾನವಸ್ತ್ರೀರೂಪದಿಂ ಪ್ರಿಯಮಿತ್ರೆಯಂ ನೋಡಲ್ಬಂದರಮನೆಯ ಬಾಗಿಲೊಳ್ ನಿಂದು ದೌವಾರಿಕ ನಿವೇದಿತ ನಿಜಾಗಮನೆಯರ್ ಪ್ರಿಯಮಿತ್ರೆ ಮಜ್ಜನಂಬುಗುವಿನಮಲ್ಲಿರ್ದು ತದವಸಾನದೊಳಶೇಷಭೂಷಣಭೂಷಿತೆಯಂ ಪಡಿಯಱಂ ಕಾಣಿಸೆಯುಂ ಕಂಡೀಶಾನೇಂದ್ರನ ಪೇೞ್ದ ವಿವರವಿಾಕೆಯ ರೂಪಳುಂಬಮಾದೊಡಂ ನಮ್ಮ ಮುನ್ನ ನೋಡಿದಾಲಿಗೀಗಳ್ ಕಿಂಚಿನ್ಮಾತ್ರಂ ಕುಂದಿರ್ದುದೆಂದು ತಮ್ಮೊಳ್ ನುಡಿವರನದೇನೆಂದಱಿಪಿರೆಂದರಸಿ ಬೆಸಗೊಳೆ ಮುಗುಳ್ದುಮದನೆ ನುಡಿದೊಡೆ ನೀವೊಂದಂ ಮುನ್ನೇಗಳ್ ಕಂಡಿರೆಂಬುದಮಿಾಶಾನೇಂದ್ರಂ ಬಣ್ಣಿಸೆ ತಮ್ಮ ಬಂದುದನದೃಶ್ಯರೂಪದಿನಭ್ಯಂಗನ

ಕಾಲದೊಳ್ ಕಂಡುದುಮಂ ಸಪ್ರಪಂಚನುಱಿಪಿ ರೂಪಂ ಬಣ್ಣಿಸಿ ಪೋಪುದು ಮಲ್ಲಿ—

ಮಾನಿಸರೊಳ್ಪಂ ಬಾಳಿನು
[ದೇನೊ]ಪ್ಪಮದೇನಸಾರ ನಿಸ್ಸಾರಮದೇಂ
ಮಾನಮದೇಂ ವಿಪುಳನುದೇಂ
ದೀನಮದೇಂ ಸ್ತೋಕಸುಖಮದೇನಧ್ರುವಮೋ ‖ ೪೫ ‖

ಎಂದು ದೀನಜನದುರ್ಲಭಬುದ್ಧಿಯಪ್ಪ ಪ್ರಿಯಮಿತ್ರ ತನ್ನಂತರಂಗ ದೊಳ್ ಬಗೆದದುವೆ ಪೊಟ್ಟಾಗೆ ಪೋಗಿ ನಿಜಾಧಿಪತಿಗದೆಲ್ಲಮನಱಿಪುವುದುಮಾ ಮಹಾನುಭಾವಂ—

ಮನದೊಳ್ ನಿರ್ವೇದಮಾದಂ ದೊರೆಕೊಳೆ ಭವಸಂಬಂಧದೊಳ್ ತೊಟ್ಟಸಂಭಾ
ವನೆ ಚಿತ್ತಂಬೊಕ್ಕು ಹಸ್ತಾಮಳಕದ ತೆಱದಿಂ ತೋಱಿ ಪಾಱೇೞಿ ದುರ್ಭಾ
ವನೆ ಲಕ್ಷ್ಮೀವಲ್ಲಭಂ ಪೊಲ್ಲದು ತಡೆದೊಡದಕ್ಕಿನ್ನೆಗಂ ಕೆಮ್ಮಗಿರ್ದಂ
ದನವದ್ಯೋದ್ಯೋಗನಾಗಳ್ ಪಿಡಿದು ದೃಢರಥಂಗೆಂದನಾ
ರಾಜರಾಜಂ ‖ ೪೬ ‖

ಗುಣನಿಧಿ ನಂದಿವರ್ಧನನ ನಾಡುವನಾಳ್ವಿಸಕೆಯ್ಸಿ ವಿಶ್ವಧಾ
ರಿಣಿಯನವಜ್ಞೆಗೆಯ್ಯದೆನಗಂ ಬೆಸಕೆಯ್ವೊಡೆ ಪಾಳಿಸಾಂತ ಬ
ಲ್ಕಣೆಯನಘಾರಿಯಂ ತವಿಪಕಾಲಮದಿನ್ನೆನಗೆಂದು ಪುಂಡರೀ
ಕಿಣಿಗೆಣೆ ಪುಂಡರೀಕಿಣಿ ಭವದ್ಭುಜರಕ್ಷಿತೆಯಕ್ಕೆ ನಿಕ್ಕುವಂ ‖ ೪೭ ‖

ಎನೆ ದೃಢರಥನೆಂದಂ ನಿಮ
ಗೆನಿತುಂ ಬೆಸಕೆಯ್ಸಿದೀಕುಲಶ್ರೀ ಮತ್ತಂ
ತೆನಗೆ ಹಿತಂ ಮಾಟ್ಪೆಳನಿಂ
ತನಿಷ್ಟಮಂ ಕೂರ್ಪರಿಂತು ಕೆಯ್ಕೊಳಿಸುಗಮೇ ‖ ೪೮ ‖

ಎಂಬುದುಮಾತನ ಮನದ ಪರಿಚ್ಛೇದಮನಱಿದು ನಿಜಕುಲನಂದನ ವರ್ಧನ ನಿಮಿತ್ತಂ ನಂದಿವರ್ಧನಂಗೆ ವಸುಂಧರಾಭಾರಮನಿತ್ತು ಮೇಘರಥಂ

ದೃಢರಥಸಮೇತಮನೇಕರಾಜನಿಕುರುಂಬಬಲಂಬೆರಸು ದೀಕ್ಷಾಪರಿಗ್ರಹನಾದಂ. ಪ್ರಿಯಮಿತ್ರೆಯುಮನೇಕ ರಾಜಕುಲಸ್ತ್ರೀಸಮನ್ವಿತೆ ಸುವ್ರತಾರ್ಯಿಕಾ ಸನ್ನಿಧಾನದೊಳಂ ಗುಣರೂಪ ಸಮನ್ವಿತೆಯಾದಳ್. ಮೇಘರಥಮಹಾಮುನೀಂದ್ರಂ ತೀರ್ಥಕರಪುಣ್ಯಮಂ ನೆರಪಿಕೊಂಡು ಮುಡುಪಿ ಪಂಚಾಣುತ್ತರೆಗಳ ನಾಭಿಯಪ್ಪ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಂ. ಅಲ್ಲಿ ಮೇಘರಥಯತೀಂದ್ರನಹಮಿಂದ್ರನಾದೊಂ. ದೃಢರಥ ಯತೀಂದ್ರನುಮಾತ್ಮಿಕಾಸಂಸಾರ ಕಾಲದೊಳ್ ಬೞಿಯಂ ಯಮನಿಯಮಮದೇಕ ವಿಹಾರದಿನಗ್ರಮುನೀಂದ್ರ ಚಾರಿತ್ರ ನಿರ್ವಿಶೇಷ ಶುಭಭಾವನಾಭಾವಿತಾತ್ಮಂ ನಿಜಾಯುರವಸಾನದೊಳ್ ಪ್ರಾಯೋಪಗಮನೋತ್ತಮ ಮರಣದಿಂ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳ್—

ಸ್ಫುರಿತರುಚಿ ರುಚಿರ ನವಪ
ದ್ಮರಾಗ ವೈಢೂರ್ಯ ವಜ್ರ ಮರಕತ ಕಿರಣೋ
ಚ್ಚುರಣಸ್ತಬಕಿತತನು ಸುಂ
ದರ ವಿಭ್ರಮನಿಂದ್ರಚಂದ್ರನೆಂಬಹಮಿಂದ್ರಂ ॥ ೬೯ ॥

ಆಗಿ ಪುಟ್ಟುವುದುಮಿಂದ್ರಚಂದ್ರನೊಳ್ ನೆರೆದು ಮಹೇಂದ್ರಾಮರೇಶ್ವರನಭೂತೋಪಮ ದಿವ್ಯಸುಖಮನನುಭವಿಸಿ—

ಕೞಿದ ಭವಕ್ಕೆ ಪೇಸುವಡೆ ವಾಸುರಪರ್ಮದ ತಲ್ಪನರ್ಥಿಸು
ತ್ತೞಿವೊಡನಿರ್ದೊಡಂಬಡುವ ಯೋಜಿಪ ಬಾಜಿಪ ತತ್ವಗೋಷ್ಠಿಯೊಂ
ದುೞಿಯದೆ ಭಾವಿತಾತ್ಮರಹಮಿಂದ್ರರೊಡಂಬಡೆದಿಚ್ಛೆ ರೂಪಮಂ
ನೆೞಲುಮನೆಯ್ದೆ ಪೊಲ್ತಗಲರಲ್ಲಿ ಮಹೇಂದ್ರನುಮಿಂದ್ರಚಂದ್ರನುಂ ॥ ೫೦ ॥

ಮತ್ತಿತ್ತ ಜಂಬೂದ್ವೀಪದ ಭರತಕ್ಷೇತ್ರಕ್ಕೆ—

ಲಲಿತಾಮ್ರತರುಗೆ ಪೊಸಗೊಂ
ಚಲಂತೆ ಗಗನಕ್ಕೆ ಶಿಶಿರನಂತೆ ಕೊಳಕ್ಕು
ಳ್ಪಲರ್ದಬ್ಜದಂತೆ ಕುರುಜಾಂ
ಗಲವಿಷಯಂ ನಯನವಿಷಯಸುಖಮಂ ಪಡೆಗುಂ ॥ ೫೧ ॥

ನಾಕಸುಖಶೇಷಮಂ ನಾ
ಕೌಕರ್ ಬಂದದಱೊಳನುಭವಿಪ್ಪುದಱಿಂದೇ
ಕಾಕೃತಿ ಕುರುಜಾಂಗಲಮಂ
ನಾಕಮುಮದು ಕಿಱುಕುಳಂಗೆ ಬಣ್ಣಿಸಲಱಿದೇ ॥ ೫೨ ॥

ಧರಿಣೀಹಾರಂ ಹಸ್ತಿನ
ಪುರಮಮರ ಪುರೋಪಹಾಸಿ ಭೂವನಿತೆಯ ಕ
ರ್ಪುರದ ಕರಂಡಗೆ ಸೌಖ್ಯದ
ಪರವರಿ ಪೊಸನೇಟದಿರ್ಕೆ ಸಯ್ಪಿನ ತಾಣಂ ॥ ೫೩ ॥

ಅಲ್ಲಿ—

ಕರುಮಾಡಂ ರಮ್ಯಹರ್ಮ್ಯಾಚಳದಳಿವಿಗಳುಂಬಂ ಹಿಮಾದ್ರೀಂದ್ರಸಾನೂ
ತ್ಕರಕಾಂತಂ ಬಳ್ಳಿಮಾಡಂಗಳ ಬಳಗಮದೇನೆಂಬ ಪೆಂಪುರ್ವದೇನೆಂ
ಬಿರವಿಂದೊಳ್ಪಿಂಬದೇನೆಂಬ ದಳಬೆಸನದೇನೆಂಬ ವಿಕ್ಕೊಕ್ಕಳ್ಪದೇನೆಂ
ಬರಸಂಬೆತ್ತೊಳ್ಪದೇನೆಂಬಮಿತಗುಣಮದೇನೆಂಬ ಚಿತ್ರಪ್ರಪಂಚಂ ॥ ೫೪ ॥

ವಿವಿಧವಿನೋದಸುಖಂ ವೈ
ಶ್ರವಣಂ ಧನದಾದ್ರಿಯೊಳ್ ಸುಖಂ ವಸಿಯಿಸುವಂ
ತವನಿಪನಾ ಮಾಡದೊಳು
ದ್ಭವಾಂಬುನಿಧಿ ವಿಶ್ವಸೇನನುವಿನಮಿರ್ಕುಂ ॥ ೫೫ ॥

ಆ ವಿಜಯಾಂಗನಾನಿಳಯಬಾಹುಗೆ ರಾಜಮುನೀಶ್ವರಂಗೆ ಮಾ
ದೇವಿ ಮದೇಭಗಾಮಿನಿ ಜಗತ್ತ್ರಿತಯಾಂಬಿಕೆ ನಾಮದಿಂದಮೈ
ರಾವಧು ಚಕ್ರವರ್ತಿಯ ಜಿನೇಂದ್ರನ ಕಾಮನ ಜನ್ಮಭೂಮಿ ಲೀ
ಲಾವಿಲಸನ್ನಿಧಾನಮಭಿರಾಮತೆಯೊಡ್ಡು ವಿಲಾಸದಾಲಯಂ ॥ ೫೬ ॥

ಗುಣಶೀಲವ್ರಾತದ ಮೇ
ಗಣಾಯಮಾಯತಿಯ ಮೇಗಣಱಿವಱಿವಿನ ಮೇ
ಗಣ ರೂಪುಂ ರೂಪಿನ ಮೇ
ಗಣ ಕಾಂತತೆಯಾ ತ್ರಿಲೋಕಜನನಿಗೆ ಸಹಜಂ ॥ ೫೭ ॥

ಸುರಪತಿ ಸೂತ್ರಧಾರನಮರಾಳಿ ಶಿಲ್ಪಿಗಣಂ ಧನೇಶ್ವರಂ
ಬರೆದು ಪವಣ್ಗೆ ಜಾಣ್ಗೆವರೆ ನಿರ್ಮಿಸಿದಂ ಪುರಮಂ ನೃಪಂ ಜಗ
ದ್ಗುರುಜನಕಂ ನೃಪಾಂಗನೆ ಜಿನಾಂಬಿಕೆ ಬಣ್ಣಿಸಲಾರ್ಪೊನಾವೊನಾ
ಪುರಮುಮನಾ ನೃಪೇಂದ್ರನುಮನಾ ನೃಪಕಾಂತೆಯುಮಂ ಕವೀಶ್ವರಂ ‖ ೫೮ ‖

ಅಂತು ವಿಶ್ವಸೇನಾವನೀನಾಥನುಮೈರಾಮಹಾದೇವಿಯುಂ ಧರ್ಮಾನು ರಾಗದೊಳಂ, ದಾನವಿನೋದದೊಳಂ, ಪರೋಪಕಾರವ್ಯಸನದೊಳಂ, ಅರಿಷ ಡ್ವರ್ಗ ವಿಜಯದೊಳಂ, ತತ್ವಭಾವನೆಯೊಳಂ ಕೃತವ್ಯಾಪಾರರುಮುದಿತಾಭ್ಯು ದಯ ಪರಂಪರರುಮಾಗಿ ರಾಜ್ಯಸುಖಮನನುಭವಿಸುತ್ತಿರೆ—

ಆ ಜನಪದದವರಮರ ಸ
ಮಾಜದ ನೆಗಲ್ದುದನೆ ನೆಗಟೆ ನೆಲನುಂ ದಿವಮುಂ
ರಾಜೇಂದ್ರನುಮಿಂದ್ರನುಮಧಿ
ರಾಜಾಂಗನೆಯುಂ ಪುಳೋಮಸುತೆಯಂ ಪೋಲ್ಕುಂ ‖ ೫೯ ‖

ಪೂರ್ವೋಕ್ತ ಸರ್ವಾರ್ಥಸಿದ್ಧೀಶ್ವರಂ ಮಹೇಂದ್ರಾಮರಂ ಮೂವತ್ತು ಮೂಱು ಸಾಗರೋಪಮಾಯುಷ್ಯಂಬರಮನನ್ಯ ಸಾಮಾನ್ಯದಿವ್ಯ ಸುಖಮನನು ಭವಿಸುತ್ತುಮಿರೆ ಪರಮಾಯುರವಶೇಷಮಱುದಿಂಗಳುಂಟೆನೆ—

ಸುರವಿಜ್ಞಾನೋಪಯೋಗಂ ಸುರಪತಿಗುಪವಿಷ್ಟಾಸನಾಕಂಪದಿಂದಂ
ಬರೆ ಕಂಡೈರಾಮಹಾದೇವಿಯುದರದೊಳಂ ಬರ್ಪ ಲೋಕೇಶನಂ ಬೆ
ಚ್ಚರಮಾ ವಿತ್ತೇಶನಂ ಪೇಟ್ಟುದುಮೊಸೆದಱುದಿಂಗಳ್ವರಂ ಪಂಚರತ್ನೋ
ತ್ಕರದಿಂ ಸಾರ್ಧತ್ರಿಕೋಟಿಪ್ರಮಿತಿಯ ಮಟೆಯಂ ಪಣ್ಣಿದಂ
ಲೋಕಪಾಳಂ ‖ ೬೦ ‖

ಆ ರತ್ನದ ಮಟೆ ಪಟ್ಟಣ
ಭಾರಮಿದೆನೆ ವಿಶ್ವಸೇನನರಮನೆಯೊಳ್ ಭೋರ್
ಭೋರೆನೆ ಪಂಚಾಶ್ಚರ್ಯ ಸ
ಮಾರಂಭಯುತಂ ತಗುಳ್ದು ಕಱೆದುದು ನಭದಿಂ ‖ ೬೧ ‖

ಮತ್ತಂ ಸೌಧರ್ಮೇಂದ್ರನಖಿಲಜಗದ್ಗುರು ಜನನಿಯಪ್ಪೈರಾವತೀ ಮಹಾದೇವಿಯಂ ಕೆಯ್ಗೆಯ್ಯಲ್—

ಅತಿಶಯ ಪದ್ಮಾದಿ ಸರ
ಸ್ಥಿತಿಯೊಳ್ ವಸಯಿಸುವರಂ ವಿನೂತ್ನ ಶ್ರೀ ಹ್ರೀ
ಧೃತಿ ಕೀರ್ತಿ ಬುದ್ಧಿ ಲಕ್ಷ್ಮೀ
ಪ್ರತಿತರ್ ದೇವಿಯರನಱುವರಂ ಬೆಸವೇೞ್ದಂ ॥ ೬೨ ॥

ಮತ್ತಂ ವಿಜಯೆ ವೈಜಯಂತಿ ಜಯಂತೆ ಯಪರಾಜಿತೆಯಾನಂದೆ ನಂಪೋತ್ತರೆ ನಂದೆ ನಂದವರ್ಧನೆಯರೆಂಬ ಮಹತ್ತರದಿಕ್ಕುಮಾರಿಯರೆಣ್ಬರುಮಂ, ಪ್ರಸವೋತ್ಸವದೊಳ್ ತುಂಗ ಭೃಂಗಾರುಗಳಂ ಪೊತ್ತು ನಡೆಯಲಿಂದ್ರಂ ಬೆಸಸಿದಂ. ಅಂತಮರೇಂದ್ರನಿಂದ್ರಾಣಿಯ ದೊರೆಯರಾದೆಲ್ಲರು (ಮಂ) ರಮಣಿಯ ರಹಸ್ಯವ್ಯಾಪಾರಕ್ಕಂ ಪರಿಚಾರಿಕಾಕೃತ್ಯಕ್ಕಮಟ್ಟುವುದು ಮನಿಬರುಂ ಬಂದು—

ಸಂಗತಸುರಸುದತಿಯರ
ಷ್ಟಾಂಗಂ ಬೆರಸೆಱಗೆ ಜಿನನ ಜನನಿಯ ಪದಪ
ದ್ಮಂಗಳೊಳೊಪ್ಪಿದುವಳಿಕುಳ
ಮಂ ಗೆಲ್ದು ತದೀಯ ಕುಟಿಳಚಳದಳಕಂಗಳ್ ॥ ೬೩ ॥

ಅಂತನಿಬರಮರಿಯರಲಸದೈರಾಮಹಾದೇವಿಯನೋಲಗಿಸುತ್ತಿರೆ—
ಅನುದಿನಮಾಱುದಿಂಗಳಮರಾಂಗನೆಯರ್ ದಿವಿಜೇಂದ್ರಲೋಕಸಂ
ಜನಿತ ಮಹೌಷಧಿಪ್ರಕರದಿಂ ಜಿನಮಾತೆಗೆ ಮಾಡೆ ಗರ್ಭಶೋ
ಧನೆಯನದೇನಮಾನುಷಮೆನಲ್ದೊರೆಯಾಗೆ ಶರೀರಮಬ್ಜಜ
ನ್ಮನೆ ಸಮೆದಿಂದುಕಾಂತವನಕಾಂತೆವೊಲೇಂ ತಿನೆತೆಳ್ಪವೆತ್ತುದೋ ॥ ೬೪ ॥

ಮತ್ತಮಮರಮಹತ್ತರಿಕಾನಿವಹಂ ಪ್ರತ್ಯೇಕನಾಮಗ್ರಹಣದಿಂ ನಿಪುಣಿಕೆ ಚಂದ್ರಿಕೆಯಮೃತಮತಿ ಲವಲಿಕೆ ಪದ್ಮಿನಿ ಮನೋಹರಿ ಮಾಳತಿಕೆ ಉತ್ಪಳಿಕೆ ಮಂದಾರಿಕೆ ಯವನಿಕೆ ಪ್ರಭಾವತಿ ಚಿತ್ರಲೇಖೆ ಮಯೂರಿಕೆ ಚೂತಲತಿಕೆ

ಮೃಣಾಳಿಕೆಯೆಂಬವರ್ಗೆ ತಕ್ಕ ಪೆಜಿವುಮೊಳಗಣಬೆಸಂಗಳಂ ನಿಯೋಜಿಸುವುದುಂ, ಅಂತೊಂದು ಪುಣ್ಯದಿನದೊಳ್—

ಅವಿರಳ ಪಾಣಿಪಲ್ಲವೆ ಕುಚೋನ್ನತಮಂಜರಿ ಬಾಹುಶಾಖೆ ಸು
ಚ್ಛವಿದಶನಾವಳೀಮುಕುಳೆ ಷಟ್ಪದಕುಂತಳೆ ಪತ್ರಭಂಗಪ
ಲ್ಲವಿತ ಕಪೋಲಪತ್ರೆ ತನುಮಧ್ಯೆ ವಚಃಪರಪುಷ್ಟನಾದೆ ಪು
ಣ್ಯವತಿ ನೃಪೇಂದ್ರಕಾಂತೆ ನವಕಲ್ಪಲತಾಕೃತಿಯಿಂದಮೊಪ್ಪಿದಳ್ ॥ ೬೫ ॥

ಅಂತಳವಲ್ಲದೊಪ್ಪಿ ತಲೆನೀರ್ಮಿಂದು ರಜನೀಸಮಯದೊಳ್ ಪವಡಿಸಿ ಮನೋಹರ ಮುಹೂರ್ತದೊಳ್—

ಐರಾವತಕರಿಯಂ ಮದ
ಮೈರೇಯಕಭಾರಚಂಚರೀಕಮನಿಂದು
ಕ್ಷೀರರುಚಿಯಂ ವೃಷೇಂದ್ರನ
ನಾ ರಮಣೀರತ್ನಮಿರುಳ ಕಡೆಯೊಳ್ ಕಂಡಳ್ ॥ ೬೬ ॥

ಅಗರಾಜಸಾನುಗತನಂ
ಮೃಗರಾಜನ ನಿಭಯುಗಾಭಿಷೇಕ ಜಲೌಘ
ಸ್ಥಗಿತೆಯನಬ್ಜಾಸನೆಯಂ
ಮೃಗಾಕ್ಷಿ ಬೆಳಗಪ್ಪ ಜಾವದಾಗಳ್ ಕಂಡಳ್ ॥ ೬೭ ॥

ಲೋಳದಳಿನೀಲಕುವಳಯ
ಮಾಳೆಗಳೆರಡಂ ತದೀಯ ಮೈತ್ರೀರಸ ಸಂ
ಪಾಳ ಸಮನ್ವಿತ ಹಿಮರುಚಿ
ಮಾಳೆಯನಂಬಿಕೆ ನಿಶಾಂತದೊಳ್ ವೀಕ್ಷಿಸಿದಳ್ ॥ ೬೮ ॥

ಪೊಸತಲರ್ದಂಭೋರುಹದೆಸೆ
ವೆಸಳಂತಳವಡಿಸಿ ಕಿರಣಮೊಗೆದರುಣನನಾ
ಗಸಗಂಗೆಯ ಮಡುವಿನೊಳೊಪ
ನೆಸೆವೆಳವಾಳೆಗಳನೆರಡನಂಬಿಕೆ ಕಂಡಳ್ ॥ ೬೯ ॥

ತಳದಳಿಸುವ ಕೆಂಬೊನ್ನಮು
ಳ್ಗಳ ಸಮುನಮೃತೋದಭಾನುಚುಂಬಿತ ಗಗನ
ಸ್ಥಳಮಂ ಸೊಗಯಿಪ ತಾಮರೆ
ಗೊಳನಂ ಪ್ರತ್ಯೂಷದೊಳ್ ಜಿನಾಂಬಿಕೆ ಕಂಡಳ್ ॥ ೨೦ ॥

ಧೃತವಿದ್ರುಮಕಂಬುಲತಾ
ಪ್ರತಾನನೀಳೋರ್ಮಿಮಾಳೆಯಂ ಜಳನಿಧಿಯಂ
ನುತಹರಿಪೀಠಮನಂಬಿಕೆ
ನಿತಂಬಭರಚಲಿತಚಲನೆ ಕನಸಂ ಕಂಡಳ್ ॥ ೨೧ ॥

ಪ್ರಚುರನವ ವೈಜಯಂತೀ
ವಿಚಿತ್ರಮಂ ಸುರವಿಮಾನಮಂ ನಾನಾರ
ತ್ನ[ಚಯ]ಮನಹಿಗೃಹಮಂ ಘನ
ಕುಚೆ ರಜನೀಚರಮದ್ರೊಳ್ ಜಿನಾಂಬಿಕೆ ಕಂಡಳ್ ॥ ೨೨ ॥

ಪಸರಿಸಿದ ಪಂಚರತ್ನದ
ಪಸರದ ಪೃಥುರಾಶಿ ಗಗನಮಂ ತಾಗೆ ಪೊದ
ಟ್ದೆಸೆದಿರೆ ಕೃಶಾನುಶಿಖೆ ದೆಸೆ
ದೆಸೆಯೊಳ್ ಜಿನಪತಿಯ ಜನನಿ ಪರಿವೀಕ್ಷಿಸಿದಳ್ ॥ ೨೩ ॥

ತದನಂತರಮಭ್ಯುದಯ ನಿಶ್ರೇಯಸಸುಖನಿಮಿತ್ತಂಗಳುಮುದಿತೋದಿತನುಂ, ಶಲಾಕಾಪುರುಷನುಂ, ಚಕ್ರವರ್ತಿಯುಂ, ಮನ್ಮಥನುಂ, ತೀರ್ಥಕರ ಪರಮದೇವನುಮಪ್ಪ ಸುಪುತ್ರೋತ್ಪತ್ತಿ ಹೇತುಭೂತಂಗಳುಮಪ್ಪ—

ಈ ಪದಿನಾಱುಮೊಳ್ಗನಸನಂಬಿಕೆ ಕಂಡು ನಿಶಾಂತದೊಳ್ ಪಯೋ
ಜೋಪಮವಕ್ತ್ರೆ ತಳ್ಪತಳದಿಂದೊಸೆದೆೞ್ದು ದಿನಾದಿ ಸತ್ಕ್ರಿಯಾ
ವ್ಯಾಪೃತಿಯೆಲ್ಲಮಂ ನೆಱೆಯನುಷ್ಠಿಸಿ ಪೋಗಿ ನೃಪಂಗೆ ಪೇೞ್ಕೆ
ಳ್ದಾ ಪುರುಷೋತ್ತಮಂ ತಿಳಿಪಿದಂ ಕನಸಂ ನೆನಸಾಗೆ ರಾಗದಿಂ ॥ ೨೪ ॥

ಗಜದಿಂ ಗಂಭೀರಭಾವಂ ವೃಷಭದಿನಭನಂ ಸಿಂಹದಿಂ ಬಂಹಿಮಸ್ಯಾ
ದ್ರಿಜನಬ್ಜಾವಾಸೆಯಿಂ ಶ್ರೀಗಧಿಪನಮಳದಾಮಂಗಳಿಂ ಭೋಗಿ ನೀಲಾಂ
ಬುಜಲೀಲಾಕಾರದಿಂ ಕಾಂತಿಯುತನಿನನಿನತ್ಯೂರ್ಜಿತಂ ಬಾಳೆಯಿಂದಂ
ಗಜಜೈತ್ರಂ ಕುಂಭದಿಂದುತ್ತಮನನಮಲಪಯಸ್ಸದ್ಮದಿಂ ಶುದ್ಧವೃತ್ತಂ ॥ ೭೫ ॥

ವಾರಿಧಿಯಿಂ ಸುಖನಿಧಿ ಕಂ
ಠೀರವವಿಷ್ಟರದಿನಧಿಕನಮರಾಲಯದಿಂ
ಧೀರಂ ಫಣಿಗೃಹದಿಂದಂ
ವೀರಂ ಮಣಿಗಣದಿನಜರನನಲನಿನಘಂ ॥ ೭೬ ॥

ಕನಸು ಪದಿನಾಱುಮಂ ಕಂ
ಡನಂತರಂ ವದನವನಜಮಂ ಪುಗುವ ಮೃಗೇಂ
ದ್ರನುಮಂ ಕಂಡುದಱಿಂ[ದಂ]
ನಿನ[ಗುದಯಿ]ಪನಘವಿಘಾತಿ ಘಾತಿ ಜಿನೇಂದ್ರಂ ॥ ೭೭ ॥

ಎಂದರಸಿಗವೋಘಂಗಳಪ್ಪ ಕನಸಿನ ಫಲಂಗಳುಮಂ ನಿವೇದಿಸುವುದುಂ, ಪಗಲ ಪದ್ಮಸರಸಿಯಂತರಸಿ ವಿಕಸಿತ ಮುಖಾರವಿಂದೆಯಾಗಿ ನಿವಾಸಕ್ಕೆ ಪೋಗಿ ಸಂತಸದಿನಿರ್ಪುದುಂ ಸರ್ವಾರ್ಥಸಿದ್ಧಿಯಿಂದಂ ಮಹೇಂದ್ರಾಮರಂ ಜಿನಚಂದ್ರಂ ಫಾಲ್ಗುನಶುದ್ಧ ಪಂಚಮಿಯುಂ ಭರಣಿನಕ್ಷತ್ರಮುಂ ದೊರೆಕೊಳೆ ತ್ರಿಲೋಕಾಂಬಿಕೆಯ ಗರ್ಭಕ್ಕವತರಿಸಿ ಪ್ರವರ್ಧಮಾನದಶಾಧೀಶನಿರೆ—

ಬಸಿರ ತೆಳ್ಪುಮಂ ತ್ರಿವಳಿಗಳೊಳ್ಪುಮಂ ಕುಚಚೂಚಕಂಗಳ ಬಣ್ಣಮುಮ
ನಸಿಯ ಬಾಸೆಯ ಮುನ್ನಿನ ರುಚಿಯುಮಂ ಮುಖಪೂರ್ವಚ್ಛವಿಯುಮಂ
ಕಿಡಿಲೀಯದೇ
ನೆಸೆದು ಸೊಗಯಿಸಿ ತೋಱುತೋ ಜಗದೀಶನಿರೆ ಗರ್ಭಂ ಬಳೆದು ಶಾರದ ನೀರದ
ಪ್ರಸರದೊಳಗಣ ಚಂದ್ರಬಿಂಬದವೋಲ್ ಚೆಲ್ವುವೆತ್ತೈರಾಮಹಾ
ದೇವಿಯಾ ॥ ೭೮ ॥

ಅತಿದೀಪ್ತಿಬೋಧಮಯನಾ
ಗಿ ತಣ್ಣಿದೊಂ ಜನನಿಯುದರದೊಳ್ ರತ್ನಸ್ತ್ರೀ
ಪ್ರತಿಕೃತಿಯೊಳರ್ಕಬಿಂಬ
ಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡುಗುಮೇ || ೭೯ ||

[ಅಂತು] ಶುದ್ಧಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ ನವಮಾಸಾವಸಾನದೊಳ್ ಕಾರ್ತಿಕಶುದ್ಧ ಚತುರ್ದಶಿಯುಂ ಭರಣಿ ನಕ್ಷತ್ರಮುಮಾಗೆ ಬೆಳಗಪ್ಪ ಜಾವದ ಬ್ರಾಹ್ಮಮೆಂಬ ಮುಹೂರ್ತದೊಳ್—

ಸುರವೃಂದಾರಕವೃಂದಮರ್ತ್ಯಪತಿ ನಾಗಾಧೀಶ ಚೇತೋಮುಖಾಂ
ಬುರುಹಂಗಳ್ ಮುದಿತಂಗಳಾಗೆ ಕುಮುದಧ್ವಾಂತೈಕನಿರ್ಭೇದನ
ಸ್ಥಿರ ವಿಜ್ಞಾನಮರೀಚಿ ಸಂದ ಜಿನಚಂದ್ರಾರ್ಕೋದಯಂ ಲೋಕದೊಳ್
ಕರಮೊಪ್ಪಿರ್ದುದಾತ್ತಜೈನಸಮಯೋತ್ತುಂಗೋದಯಾ
ದ್ರೀಂದ್ರದೊಳ್ || ೮೦ ||

## ೯. ಹರಿ ತಾನಾಡಿದನೊಸಗೆಯೆಸಕವಿರ್ನುಡಿಸುವಿನಂ

ಶ್ರೀಮಜ್ಜಿನಚಂದ್ರ ಸುಧಾ
ದಾಮೋದಯ ವಿಭ[ವ]ಮಂ ನೆಱಂಬಡೆದವೊಲಂ
ದಾ ಮಹಿಯುತ್ಸವಮೆಂಬುದ
ಸಾಮಾನ್ಯಮದೃಷ್ಟಪೂರ್ವಮಶ್ರುತಪೂರ್ವಂ ॥ ೧ ॥

ಅಂತಾ ತ್ರಿಲೋಕಚೂಡಾಮಣಿಯುದಯದೊಳ್—

ಆಸನಕಂಪದಿಂದಮಿಟಿ‌ದಾಸನದಿಂ ಕರಪದ್ಮ ಕುಟ್ಮಲೋ
ದ್ಭಾಸಿಲಲಾಟಪಟ್ಟರತಿಸಂಭ್ರಮದಿಂ ಪೊಡೆವಟ್ಟು ನೂಱನೂ
ರ್ಭಾಸಿರಮಂ ವಿಗುರ್ವಿಸಿ ವಿಮಾನದ ಯಾನದ ವಾಹನಂಗಳ
ಗ್ರೇಸರದ್ವಿಮಾನಮುಮನರ್ಚನೆಯೊಳ್ ದೊರೆಕೊಂಡ ಚೆಲ್ವುಮಂ ॥ ೨ ॥

ಅವಗಯಿಸಿ—

ತಳರ್ದಗಳ್ ಜಿನಪುಣ್ಯಾ
ನಿಳಚಳಿತ ಚತುರ್ವಿಧಾಮರೇಂದ್ರಾಂಬುಧಿ ಕ
ಲ್ಲೋಳಿಸಿದುದು ದೇವಸಮಿತಿಯ
ವಿಳಾಸಮಂ ನೆಱೆಯೆ ಪೊಗೞಲಾವಂ ನೆಱೆವೊಂ ॥ ೩ ॥

ಅಂತು ಮೂವತ್ತಿರ್ವರಿಂದ್ರರುಂ ಪರಿವೇಷ್ಟಿಸಿ ಬರೆ ಸೌಧರ್ಮೇಂದ್ರ ನೈರಾವಣ ಕರೀಂದ್ರಮನೇಱಿ ಸಾಮಾನಿಕತ್ರಯಸ್ತ್ರಿಂಶಲ್ಲೋಕಪಾಲ ಪಾರಿಷ ದಾತ್ಮರಕ್ಷಕಾಭಿಯೋಗ್ಯ ಕಿಲ್ಬಿಷಿಕಾದಿ ಪರಿವಾರ ಪರೀತರಾಗಿ ಹಸ್ತ್ಯಶ್ವರಥ ಪದಾತಿವೃಷಭಗಂಧರ್ವನರ್ತಕೀವಾರಸಪ್ತಾನೀಕಂ ಬೆರಸು ಜಿನೇಂದ್ರ ದ್ವಿತೀಯ ಕಲ್ಯಾಣೋತ್ಸುಕರಾಗಿ ಬರೆವರೆ—

ರಾಗಂ ಮೆಯ್ಯೊಳ್ ಪೊಂಪುಟಿ.
ವೋಗೆ ಪೊನಲ್ವರಿಯೆ ನೃತ್ಯವಾದನ ಗೀತೋ
ದ್ಯೋಗದ ಸಂಗೀತಕರಸ
ಮಾಗಳ್ ಸುರಗಗನಗಮನಮೇನೊಪ್ಪಿದುದೋ ॥ ೪ ॥

ಆಗಸದೊಳಡರ್ದು ಪರೆದಿರೆ
ದೀಗಡೆ ನಿರ್ವಾಣರೇಖೆಗೊಂಡನೊ ಬಿದಿಯಿಂ
ಬೀ ಗಮನಿಕೆಯಂತಾ ದೇ
ವಾಗಮ[ನ]ದ ಚೆಲ್ವುವಾಗಗೋಚರಮಲ್ತೇ ॥ ೫ ॥

ಎಂಬಿನಂ ಬಂದು ಹಸ್ತಿನಪುರಮನೆಯ್ದಿ ವಿಶ್ವಸೇನ ಮಹಾರಾಜನ ರಾಜಮಂದಿರದೊಳಮರೇಂದ್ರಸಮೇತಮಮರನಿಕಾಯಮಿರೆ ಪರಮಪವಿತ್ರ ಪುಲೋಮಸುತೆ ಪರಿವಾರದೇವೀಸಮನ್ವಿತೆ ಪೋಗಿ ಮಹಾದೇವಿಯ ಪ್ರಸೂತಿಕಾ ನಿಕಾಯಮಂ ಪೊಕ್ಕು—

ಗಂಗಾಸಿಕತಿಳತಳದು
ತ್ಸಂಗದೊಳೆವೊಂದು ಹೇಮಪದ್ಮಮೆ ಗೆತ್ತಿಂ
ದ್ರಾಂಗನೆ ನೋಡಿದಳಂಬಿಕೆ
ಯಂಗೋಪಾಂತದ ಜಿನೇಂದ್ರದಾರಕ ರವಿಯಂ ॥ ೬ ॥

ಕಂಡು ಮೂಮೆ ಬಲಗೊಂಡೆಱಗಿ ಪೊಡೆವಟ್ಟುಮಟ್ಟಿಕ್ಕಿಱಿೊಳ್ ನಿಂದು ಭಾವಿಸಿ ನೋಡಿ—

ತೆಂಬಲರಲೆಪದ ಪೂಲತೆ
ಯೆಂಬಿನಮಂಕುರಿಸೆ ಪುಳಕಮೊರ್ಮೊದಲೊಳೆ ಬಿ
ಲ್ಲಿಂಬೆಱಗುವಾಗಿ ಸತಿ ಚೋ
ದ್ಯಂಬಟ್ಟಳಜಾತಪೂರ್ವವಿಸ್ಮಯದಿಂದಂ ॥ ೭ ॥

ಅಂತು ಜಿನಾರ್ಭಕನಂ ನೋಡಿ ತದೀಯಾಂಗಸಂಗತ ಲಕ್ಷಣವ್ಯಂಜನಂಗಳಂ ನೋಡಲರಿಯದೆಯುಂ, ಎತ್ತಿಕೊಳಲಣ್ಮದೆಯುಮಿರ್ದಿಂದ್ರನಾಜ್ಞೆಯಂ ಬಗೆದು ಕಿಱಿದು ಶಂಕೆವೆರಸು—

ಒಳ್ಳಾನೆಗೋಡಲರಿಯದ
ಬೆಳ್ಳಾಳನೊಲಗಿದು ಕಂಡು ಲಾವಣ್ಯರಸಂ
ತಳ್ಳಂಕುಗುಟ್ಟೆ ಮಿಳ್ಳಿಸಿ
ದಳ್ಳಿಱಿದಾಡುವ ಜಿನೇಂದ್ರಶಿಶುವಂ ತಳದಿಂ ॥ ೮ ॥

ನಿಡಿಯ ಬಳ್ಳಿಯ ತುಱುಗೆವೆಗಣ್ಗಳಂ ಕೆನ್ನೆಯನೆಯ್ದಿದ ಪುರ್ವುಗಳಂ
ಪೊಡವಿ ಷಟ್ಖಂಡಕ್ಕಡಿಯಿಡುವಡಿಗಳಂ ತೊಳಗಿ ಬೆಳಗುವ ಪೆರ್ಚಿನೊಸಲಂ
ಪಡೆದ ಕಾಮದೇವತ್ವಮನವಗಯಿಸುವಂತಿರ್ದ ರೂಪಿನ ಬಾಲಕನಂ
ಬಡವಂ ಮಾಣಿಕಂಬೆತ್ತಂತೆ ರಾಗದಿನೆತ್ತಿಕೊಂಡಿಂದ್ರನ ದೇವಿ
ಬಂದಳ್ ॥ ೯ ॥

ಅಂತೈರಾದೇವಿಯ ಮುಂದೆ ಮಾಯಾರ್ಭಕನನಿರಿಸಿ ಜಿನಾರ್ಭಕನನೆತ್ತಿ ಕೊಂಡು ಬರೆ—

ಜಯ ಜೀವಾಧಿಪ ನಂದ ನಂದ ಸುಚಿರಂ ವರ್ಧಸ್ವ ವರ್ಧಸ್ವಯೆಂ
ದು ಯಥಾರ್ಥಂ ಸ್ತುತಿಗೆಯ್ದು ರತ್ನಮಕುಟಂ ನಿರ್ಯಾಣಮಂ ತಾಗೆ ದಂ
ತಿಯ ಮೇಗಿರ್ದು ವಿನಮ್ರನಾಗೆ ದಿವಿಜೇಂದ್ರಂ ತನ್ಮನೋನೀತಿ ಭ
ಕ್ತಿಯ ಪೆಂಪಂ ಪವಣೆಯ್ದೆ ಪೇೞಲಱಿಯೆಂ ವಾಗ್ಗೋಚರಾತೀತಮಂ ॥ ೧೦ ॥

ಅಮರರ ದಂತಿ ನಿರ್ನವಿಸೆಯುಂ ಶಚಿ ನೀಡೆಯುಮಿಂದ್ರನಾಂತು ಸಂ
ಭ್ರಮಮನನಾಗಿ ಬಾಗಿ ಕೊಳೆಯುಂ ಜಿನಬಾಲಕನೇಱೆಯುಂ ಸಸಂ
ಭ್ರಮ ಸುರವರ್ಧಮಾನಪಟಹಧ್ವನಿ ಪೊಣ್ಮೆಯುಮುತ್ಸವಂ ಮನೋ
ರಮ ಹೃದಯಂಗಮಾನುಷಮುಮಾದುದು ಜನ್ಮದೊಳಿಂದ್ರವಂದ್ಯನಾ ॥ ೧೧ ॥

ಅಂತು ಜಿನದಾರಕನಂ ಪಾರಿಜಾತಪಲ್ಲವಾಯಮಾನ ನಿಜಕರಪಲ್ಲವಂ ಗಳಿನೆತ್ತಿಕೊಂಡೈರಾವತ ಬಂಧುರಸ್ಕಂದದೊಳಿಟ್ಟು ಸೌಧರ್ಮೇಂದ್ರನಿಂದ್ರಾಣಿಯುಂ ಪೆಱಗನೇಱಿಸಿಕೊಂಡುತ್ತರಾಭಿಮುಖನಾದಾಗಳ್—

ಜಿನನ ತನುಜ್ಯೋತ್ಸ್ನೆಯಿನಿಂ
ದ್ರನಯನಕುವಲಯ ವನಂಗಳಲರ್ದುವಿಭಂ ಕಾಂ
ಚನಶಿಖರದ ಹಿಮವದ್ಗಿರಿ
ಯೆನಿಸಿದುದಘಹರನ ಕನಕತನುಸುಚ್ಛವಿಯಿಂ ॥ ೧೨ ॥

ಸೌಧರ್ಮೇಂದ್ರನುತ್ಸಂಗದೊಳ್ ತೀರ್ಥಕರಕುಮಾರಂ ಬರೆ ಚತುರ್ವಿಧಾಮರನಿಕಾಯಂ ನಡೆಗೊಂಡಾಗಳ್—

ಸುರಕರಿಗೆ ಮೊಗಂ ಮೂವ
ತ್ತೆರಡದಱೊಂದೊಂದು ಮೊಗಕೆ ಕೋಡೆಂಟೆಂಬಾ
ಗಿರೆ ಕೋಡೊಳೊಂದು ಕೊಳನಾ
ಸರದೊಳ್ ನವನಳಿನಲತೆಗಳೋರೊಂದವಱೊಳ್ ॥ ೧೩ ॥

ಸರಸಿರುಹಲತೆಗೆ ಮೂವ
ತ್ತೆರಡಂಬುಜಮಂಬುಜಕ್ಕಮೆಸಳ್ಗಳ್ ಮೂವ
ತ್ತೆರಡವಱ ಮೇಗೆ ಕುಣಿವರ್
ಸುರವನಿತೆಯರಿಂದ್ರನಾಜ್ಞೆಯಿಂದೋರೊರ್ವರ್ ॥ ೧೪ ॥

ಎಸಳ ಮೊನೆ ಕೂರಿತಡಿಗೆಂ
ಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿದಾ
ಗಸಮೆಂಬ ರಂಗದೊಳ್ ಬ
ಣ್ಣಸರಮನಾಡಿದರನೇಕರಮರಾಂಗನೆಯರ್ ॥ ೧೫ ॥

ಸರಸಿರುಹದ ಮೇಗಾಡುವ
ಸುರಸುದತಿಯರಾಟದಂದಮೆಂತೆನೆ ಸಿರಿಯಂ
ಪರಿಭವಿಸಿ ತಂದು ಪೊಸಯಿಪ
ಸಿರಿವಂತಿಕೆಯಿಂದೆ ಕಾಲಲೊದೆದಪರೆನಿಕುಂ ॥ ೧೬ ॥

ಅಂತು ನಭೋಯಾನದಿಂದಮರವಾಹಿನಿ ಬರೆ ಪರಿಕಲಿಸಿಯುಂ, ತುಱುಂಬಿಯುಂ, ನಿಗುಂಬಿಸಿಯುಂ, ಕೇಳಿಸಿಯುಂ ನಡೆದು ದಿಗಂತಪರ್ಯಂತಮಾ ನಾಕಲೋಕಮೆಲ್ಲಂ ಕಿಕ್ಕಿಱಿಬ್ಬು ಬರೆ—

ವಸುಧೆಯೊಳೆಸೆದಿರ್ದಭಿ ವೀ
ಕ್ಷಿಸುವ ಜನಕ್ಕೆಯ್ದೆ ಜಿನನ ಜನ್ಮೋತ್ಸವಮಂ
ಬೆಸಕೆಯ್ದು ಮಣಿವಿತಾನದೊ
ಳೆಸೆದಂತೆಸದತ್ತಶೇಷ ದೇವನಿಕಾಯಂ ‖ ೧೭ ‖

ಅಂತು ಪಿರಿದಪ್ಪುದಱಿಂದನೇಕ ಮುಖದೊಳ್ ನಡೆವ ಸುರಕೋಟಿಯಂ ಕಂಡು ಸೌಧರ್ಮೇಂದ್ರಂ ಜಿನಾಭಿಷೇಕಕ್ಕೆ ನಿಂದಕೃತ್ರಿಮ ಹೇಮಪಟ್ಟಕಾಕಾರದಿಂ ಪವಿತ್ರಮಾದಮರಗಿರೀಂದ್ರಕ್ಕೆ ನಡೆಯಿಮೆಂದು ಗಿರಿದುರ್ಗಕ್ಕೆ ಕಯ್ಪೊಸುವಂತೆ ಸನ್ನೆಗೆಯ್ದು ಚಾಮರವಂ ಬೀಸುವುದುಂ [ಸುರಕೋಟಿಯೆಲ್ಲಂ] ಪೋಗಿ ಪಾಂಡುಕವನದ ಮೂಡಣದೆಸೆಯೊಳ್ ನೂಱುಯೋಜನಮಾಯಾಮದೊಳಮಯ್ವತ್ತುಯೋಜನ ವಿಸ್ತಾರದೊಳಮೆಂಟು ಯೋಜನಮುತ್ಸೇಧದೊಳಮುಮರ್ದು ಚಂದ್ರಸ್ವರೂಪದೊಳವೊಪ್ಪಿ—

ಕುಳಿಶಾವಳಿಗಳನಮರ್ದಿಂ
ತೊಳೆದಡಿಗಲ್ಲಿಕ್ಕಿ ಬೆಳ್ಳಿಯಿಟ್ಟಗೆಯಂ ಚೌ
ಪಳಿಯಿಕ್ಕಿದಂತೆ ತೊಳತೊಳ
ತೊಳಗಿ ಬೆಡಂಗಿಡಿದ ಪಾಂಡುಕಾಹ್ವಯಶಿಲೆಯೊಳ್ ‖ ೧೮ ‖

ಪೂರ್ವಾಭಿಮುಖವಾಗಿ ನಿಂದು ಮೃಗೇಂದ್ರಾಸನದೊಳ್ ಜಿನೇಂದ್ರದಾರಕನನಿರಿಸೆ ಮೃಗೇಂದ್ರವಿಷ್ಟರದೊಳ್ ಕೂಸಾಗಿಯುಂ ಪ್ರಭಾವಿಶೇಷ-ದಿಂದೆರಡನೆಯ ಮಂದರದ ಚೂಳಿಕೆಯಿರ್ಪಂತಿರಿರ್ದ ಜಿನೇಂದ್ರಂಗೆ ಸೌಧ-ರ್ಮೇಂದ್ರಂ ಜನ್ಮಾಭಿಷೇಕೋದ್ಯುಕ್ತನಾಗಿ ದಕ್ಷಿಣೇಂದ್ರಂ ಬೆರಸು ನಿಂದಿರ್ದ ಸಾಮಾನಿಕದೇವರಂ ಜಿನರಾಜಂಗೆ ಮೆಯ್ಕಾಪಾಗಿರಿಸೆ-

ಸುರಪತಿ ಶಿಖಿ ದಂಡಧರಂ
ನಿರುತಿ ಜಳೇಶಂ ಸಮೀರಣಂ ಧನದನುಮೀ
ಶ್ವರನೆಂಬ ಲೋಕಪಾಲರ
ನಿರವೇಟ್ಟು ವರವರ ದೆಸೆಯೊಳನುಚರಸಹಿತಂ ‖ ೧೯ ‖

ಮಹಿಳಾಸಹಿತಂ ವಾಹನ
ಸಹಿತಂ ಸಂಗೀತಸಹಿತಮತಿಶುದ್ಧಮನ
ಸ್ಸಹಿತಂ ನಿಜವಿವಿಧಾಯುಧ
ಸಹಿತಂ ನಿಲವೇಟ್ಟೆ ನೆಲೆಯೊಳಿರೆ ದಿಗಧೀಶರ್ ॥ ೨೦ ॥

ಪ್ರಥಮಲೋಕಾಮರೇಶನುಮಿಾಶಾನೇಶನುಂ ಚಂಚತ್ಪಂಚರತ್ನಗೋ-ಶೀರ್ಷ ಚಂದನ ನಿರ್ಮಲಾಕ್ಷತಾರ್ಘ್ಯಮನೆತ್ತಿದಿಂ ಬೞಿಯಿಂ–

ಸುರಪತಿಯುಗಳಂ ಕಳಶೋ
ದ್ಧರಣೋದಿತ ಮಂತ್ರದಿಂದನೋಂಕಾರಪುರ
ಸ್ಸರಮುಮರದ್ರುಮಪಲ್ಲವ
ಪರಿಶೋಭಿತ ಶಾತಕುಂಭಕುಂಭದ್ವಯಮಂ ॥ ೨೧ ॥

ಪದ್ಮಾದಿ ಸರೋವರವಾರಿಪೂರಿತಮನೆತ್ತಿಕೊಳ್ವುದುಮುೞಿದನಿಬರಿಂ ದ್ರರುಮಭಿಷೇಕಮಂಗಳ ದ್ರವ್ಯಂಗಳಂ ಕೂಡಿ ಶಚೀದೇವಿ (ಶಕ್ರ) ಕರತಳ-ಕ್ಕವಂ ನೋಡಿ ನೀಡೆ ಜಗದೇಕಬಂಧುವಂ ಮಜ್ಜನಂಬುಗಿಸಿ

ನೀರೊಳ್ ಪಂಚಮಜಲಧಿಯ
ನೀರೆ ಪವಿತ್ರಂ ಪವಿತ್ರಮಲ್ಲವು ಪೆಱವೆಂ
ದೋರಂತು ತದಂಬೋಧಿಯ
ನೀರಂ ತರವೇಟ್ಟನಮರರಿಂದಮರೇಂದ್ರಂ ॥ ೨೨ ॥

ತರವೇೞಲೊಡಂ ಸುರರೊ
ರ್ವರೊರ್ವರಂ ಕೞಿಯೆ ತೇನತೇನಂ ತಳರ್ದುಂ
ಭರದಿಂ ನೀರಂ ಮೊಗೆದುಂ
ಪರಿತಂದರ್ ಕನಕಕಳಶವಿಶದ್ರೋದಕಮಂ ॥ ೨೩ ॥

ಸೌಧರ್ಮೇಶಾನೇಂದ್ರರ್ ಕೆಯ್ಯೊಳ್ ನೀಡುತ್ತುಮಿರೆಯಿರೆ ಮೇರುವಿನ ಪಂಚಮಸಮುದ್ರದೆಡೆಯೊಳ್ ನಿಂದಮರಸಮಾಜಮೊಂದೋರೊರ್ವರ ಕೆಯ್ಗೆಯ್ಗೆ–

ಕುಡೆಯುಂ ಕೊಳೆಯುಂ ನಭದೊಳ್
ಬೆಡಂಗುವೆತ್ತಮರಕರದಿನಮರಕರಕ್ಕೇಂ
ನಡೆದುವೊ ಹಿಮಕರನೆಡೆಗೊಡ
ನಡರ್ವಂತಿರಲೋಳಿವೋಳಿಯಿಂ ಕಳಶಂಗಳ್ ॥ ೨೪ ॥

ಅಂತು ಕಳಧೌತ ಕಳಶಸಹಸ್ರಂಗಳಿಂದಭಿಷೇಕಂಗೆಯ್ಯೆ–

ಜಿನಚಂದ್ರಕುಮಾರಂ ಕ್ಷೀ
ರನೀರಪೂರಪ್ಲವಾಂತರಸ್ಥಂ ಪೋಲ್ತಂ
ಕನಕರುಚಿಯಿಂದಮಾ ಪಳಿ
ಕಿನ ಕೊಡನೊಳಗಿರ್ದ ನಂದದೀವಿಗೆಯಿರವಂ ॥ ೨೫ ॥

ಅಂತಾಕ್ಷೀರವಾರಿಧಿವಾರಿಯೆಲ್ಲಮನೊರ್ಮೊದಲೊಳೆ ಪೊಯ್ವಂತೆ ಪೊಯ್ದ ಪಯಃ ಪ್ರವಾಹಮಂ ಬಾಲಕನಬಲಂ ಸೈರಿಸನೆಂಬ–

ಸಂದೆಯುದ ಮನದ ನಾಕಜ
ಸಂದೋಹದ ಬಗೆಯನಘಹರಂ ಕಳೆಯಲ್ಕಃ
ಎಂದುಸಿರ ಗಾಳಿಯೊಳ್ ತಿರಿ
ತಂದರ್ ತಱಗೆಲೆವೊಲಮರರಂಬರತಳದೊಳ್ ॥ ೨೬ ॥

ಅನಂತರಂ ಪುರಂದರಂ ಪುನರಾಬ್ಧ ಜನ್ಮಾಭಿಷೇಕನಾಗಿ–

ಶ್ರೀರಮಣೀಪ್ರಿಯಂಗಮೃತಮಂಗಳಮಜ್ಜನಮಂ ಜಿನಂಗೆ ವಿ
ಸ್ತಾರಿಸೆ ಪೊನ್ನಪೊಚ್ಚಪೊಸವಪ್ಪ ಕೊಡಂಬೆರಸಾಳಿಗಟ್ಟಿ ಘೋರ್
ಘೋರೆನೆ ಪೋಪ ಬರ್ಪಮರಸಂಹತಿ ಪೋಲ್ತುದು ಮಂದರಾದ್ರಿಗಂ
ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ ॥ ೨೭ ॥

ಎನಿಸಿದಮರಸಮಿತಿಯು ತಂದ ಪಾಲ್ಗಡಲ ಪಾಲಂ ಪುಷ್ಕಲಾವರ್ತ ಬಲಾಹಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂ ದ್ರರುಂಭಗವದುಷ್ಣೀಷದೊಳ್ ಸುಱಿಯೆ–

ಜಿನನುದರದೊಳೆಸೆವ ಪಾಲಿನ
ಪೊನಲ್ ಸಯಂಬರದ ಮುಕ್ತಿಕನ್ಯಕೆ ಸುರರಾ
ಜನ ಮುಂದೆ ಮಾಲೆಯೊಡಿದ
ಮನೋಜ್ಞಸಿತ ಸಿಂಧುವಾರಮಾಲೆಯನಿಟಿಕುಂ ॥ ೨೮ ॥

ತದನಂತರಮಾದಿತ್ಯಂಗೆ ಸೊಡರಿಡುವಂತೆ ಭಕ್ತಿನಿಮಿತ್ತದಿಂ–

ಸೌರಭನಿಧಿ ತೀರ್ಥಂಕರಕು
ಮಾರಕನೆಂದಱಿದುಮಾ ಜಗತ್ಪತಿಗಿಂದ್ರಂ
ಸಾರಸುಗಂಧವಿಳೇಪನ
ಭೂರಿಜಳಸ್ನಪನವಿಧಿಗೊಡರ್ಚಿದನಾಗಳ್ ॥ ೨೯ ॥

ಅಂತು ನೆಱೆಯೆ ಜನ್ಮಾಭಿಷೇಕಮಂ ವೃತ್ರಹಂ ನಿರ್ವರ್ತಿಸಿ ದಕ್ಷಿಣೇಂದ್ರನುಂ ಶಚಿಯುಂ ಬೆರಸು–

ಜಳದಿಂದಂ ಬಳಮಂ ಸುಗಂಧರಸದಿಂ ಸೌಗಂಧ್ಯಮಂ ಪುಷ್ಪಸಂ
ಕುಳದಿಂ ಪೂಜ್ಯತೆಯಂ ಸಿತಾಕ್ಷತದಿನುದ್ಯದ್ವೃತ್ತಮಂ ಚಂದ್ರಿಕೋ
ಜ್ಜ್ವಳಸಾನ್ನಾಯ್ಯದಿನಿಂದುಲಕ್ಷ್ಮಿಯನುದಂಚದ್ದೀಪದಿಂ ಕಾಂತಿಯಂ
ವಿಳಸದ್ಧೂಪದಿನೈಶ್ಯಮಂ ಫಲದಿನವ್ಯಾಬಾಧೆಯಂ ಮಾಡುಗುಂ ॥ ೩೦ ॥

ಜಿನಪತಿಪದಪಂಕಜಮಂ
ದಿನಿತರ್ಚನೆಯಿಂದಮಿಂದ್ರನರ್ಚಿಸಿ ಮನದಿಂ
ತನುವಿಂ ವಚನದಿನೇಕಾ
ಗ್ರನಾಗಿ ಪೊಡವಟ್ಟನೆಱಗೆ ಮಕುಟಂ ಧರೆಯೊಳ್ ॥ ೩೧ ॥

ಅಂತರ್ಚಿಸಿ ಪೊಡಮಟ್ಟು ಪರಮೌದಾರಿಕ ದಿವ್ಯಶರೀರನುಂ, ತೃಣೀಕೃತ ತ್ರಿಭುವನ ಸಕಲ ಸೌಂದರ್ಯಾತಿಶಯ ಸುಂದರಾಕಾರನುಮಪ್ಪ ತೀರ್ಥಂಕರ ಕುಮಾರಂಗೆ ಸೌಧರ್ಮೇಂದ್ರಂ ಪ್ರಸಾಧಿತ ವಿಷ್ಟಪತ್ರಿತಯನಪ್ಪುದನಱಿದು ಪ್ರಸಾದನ ಪ್ರಾರಂಭಂಗೆಯ್ಯೆ—

ತೊಡವಿಂಗೆ ತೊಡವು ನಿರತಂ
ತೊಡವೇಂ ಪೆಱತುಂಟೆ ಜಿನನ ತೊಡವೆನೆ ಮತ್ತಾ
ತೊಡವೆಡ್ಡಮಪ್ಪ ರೂಪಿನ
ಬೆಡಂಗು ಭೂಷಣವಿಶೇಷಮಮಂ ಬಾರಿಸದೇ ॥ ೩೨ ॥

ಎಂದು ಪ್ರಥಮಕಲ್ಪಾಮರೇಂದ್ರಂ ಆ ಗುಣಗಣಮಣಿಭೂಷಣಂಗೆ ದಿವಿಜೇಂದ್ರಲೋಕೋತ್ತಮ ಭೂಷಣಂಗಳಂ ತುಡಿಸೆ ಅಲಂಕೃತನಾಗಿಯುಂ ನಿಸರ್ಗಸುಂದರನಪ್ಪುದಱಿಂದಮಲಂಕಾರಕ್ಕೆ ತಾನಲಂಕಾರಮಾದೊಡಂ ಲೋಕವ್ಯವಹಾರಾಪೇಕ್ಷೆಯಿಂ ಪ್ರಸಾಧಿತಂ ಮಾಡಿ ಜಿನೇಂದ್ರಭಾನುವನಟ್ಟಿಕಿರ್ತುನೋಡಿ, ಮನಂ ಸಂತಸಂಬಡೆ ಪರಿಪುಷ್ಟ ಹರ್ಷೋತ್ಕರ್ಷ ಚಿತ್ತನಾಗಿ ಪುಷ್ಪಾಂಜಳಿವಿಕ್ಷೇಪಂಗೆಯ್ದೆಱಗಿ ಪೊಡವಟ್ಟು [ತದನಂತರಂ]

ವಿಭು ಮೂವತ್ತಿರ್ವರಿಂದ್ರರ್ ತನಗೆ ವಶವಿಧೇಯರ್ ದಿವೌಕಾತ್ಮತೇಜಃ
ಪ್ರಭೆ ಮತ್ತೊಂದಿಲ್ಲ ತತ್ವಂ ಮತಿಗೆ ವಿಮಲಮೇಕಾಂತವೈರಾಗ್ಯಮಸ್ಮ
ತ್ಪ್ರಭು ಕೂಸಿಂದಿರ್ದನಿಲ್ಲುತ್ತಮ ಸಮರಸವತ್ತಾಂಡವಾರಂಭಣಕ್ಕೆ
ರಭಟೀವೃತ್ತಪ್ರವೃತ್ತಂ ಸುರಪರಿವೃಢನೆಟ್ಟಾಡಿದಂ ಭಕ್ತಿಯಿಂದಂ ॥ ೩೩ ॥

ಅಂತು ನಾಟ್ಯನಿಬಂಧನಮೆ ಸುರೇಶ್ವರರೂಪದಿಂದಮಾಡುವಂತಾಡೆ ತ್ರಿಲೋಕಾಧಿಪತಿ ನೋಡೆ ನಾಟ್ಯರಸಕೂಪಾರಂ ಮೇರೆದಪ್ಪಿ ಕಪ್ಪಂಗವಿಯಾಗಿ ಕವಿಂಪೆ—

ಆ ರಸದೊಳ್ ಬಳೆದ ಲತಾ
ಕಾರಮನನುಕರಿಸೆ ದಿವಿಜರಾಜನ ಭುಜವಿ
ಸ್ತಾರದೊಳಾಡಿದರಮರಿಯ
ರೋರೊಂದರೊಳೆಣ್ಬರೊಂದಿ ಗೊಂದಳದಿಂದಂ ॥ ೩೪ ॥

ಅಂತಾಡೆ—

ಜಂಭಾರಿ ವಿಕೃತಮಾಡುವ
ರಂಭಾನಟಿಯಂತೆ ಲಾಸ್ಯದೊಳ್ ತಾಂಡವಮು
ಜ್ಜೃಂಭಿಸೆ ಗಣಿಕೆಯರೊಡನಾ
ರಂಭಿಸಿದರಪೂರ್ವನರ್ತನಾರಂಭಣಮಂ ॥ ೩೫ ॥

ಅಂತಿಂದ್ರ ನಾನಂದನೃತ್ಯಮನಾಡಿದ ಪರಿಸಮಾಪ್ತಿಯೊಳ್ ಐರಾವತದ ಬೆಂಗೆವಂದ ನಿಜಪರಮಸ್ವಾಮಿಯಂ ನಿಜಾಂಕಮನೇಱಸಿಕೊಂಡು ಹಸ್ತಿನ ಪುರಾಭಿಮುಖನಮರಸಮಿತಿವೆರಸು ಅಮರೇಂದ್ರನಮರಗಿರೀಂದ್ರದ ಚೂಳಿ ಕೆಯಿಂ ಭದ್ರಶಾಳಂಬರಮಾದಭಿರಾಮತೆಯಂ ನೋಡುತ್ತುಂ [ಎಯ್ದಿದಂ ಹಸ್ತಿನಪುರವರಮಂ]. [ಅಂತು] ಎಯ್ದಿ ಬಹಿರ್ಭಾಗದೊಳ್ ನಿಂದು ವಿಶ್ವ ಸೇನಮಹಾರಾಜಂಗೆ ಪೊಱಲಂ ಬೇಗವಷ್ಟಶೋಭೆಯಂಗೆಯ್ಯಲ್ವೇೞ್ದಟ್ಟು ವುದುಂ—

ಪುರನಿಕರಂ ತ್ರಿವಿಷ್ಟಮೊ ಪೇೞ್ ದಿವಿಜೇಂದ್ರನಿವಾಸಮೋ ಸಮೋ
ಪುರಮೊ ವಿಮಾನಮೋ ಭವನಮೋ ಸುರಭೂರುಹರಾಜಿಯೋ ವನೋ
ತ್ಕರಮೊ ಸುರೇಂದ್ರನೋ ನೃಪನೊ ದೇವನೊ ಮರ್ತ್ಯನೊ ಪೇೞಮೆಂಬಿನಂ
ನರಪತಿ ಮಾಡಿದಂ ಪುರಕೆ ಪೊಂಪುೞಯಪ್ಪಿನಮಷ್ಟಶೋಭೆಯಂ ॥ ೩೬ ॥

ಅಂತಷ್ಟಶೋಭೆಯಂ ಮಾಡೆ—

ಹಾರದ ಲಂಬೂಷಂ ಕೇ
ಯೂರದ ಪೊಸಗಂಬಮೆಸೆವ ಮುತ್ತಿನ ಕಡೆ ವಿ
ಸ್ತಾರಿಸಿದ ಪಂಚರತ್ನದ
ತೋರಣಮೊಪ್ಪಿದುದು ನಡುವೆ ನಿಲೆ ಹರಿಪೀಠಂ ॥ ೩೭ ॥

ಆ ಹರಿಪೀಠದೊಳಪಗತ
ಮೋಹನನಿದಿರ್ವೋಗಿ ತಂದು ಕುಳ್ಳಿರಿಸಿ ಸುರ
ವ್ಯೂಹಕ್ಕಂದಾಸನ ಸಂ
ದೋಹಮನವರವರ್ಗೆ ತಕ್ಕುದಂ ತರಿಸಿ ನೃಪಂ ॥ ೩೮ ॥

ತಾನುಂ(ತನಗೆ)ತಕ್ಕಾಸನದೊಳ್ ಕುಳ್ಳಿರೆ—

ಆ ದಿನದೊಳ್ ಹಸ್ತಿನಪುರ
ಕಾದುತ್ಸವಮೆಳೆಯೊಳನಿತೆನಲ್ಕೆಣೆಗಾಣ
ಲ್ಕೋದಿದಗಾಳುಗಮಾನಿತ
ಮಾದುದಸಂಜಾತಪೂರ್ವ ವಿಸ್ಮಯದಿಂದಂ ॥ ೩೯ ॥

ಆಗಳ್ ಸೌಧರ್ಮೇಂದ್ರಂ ವಿಶ್ವಸೇನನೃಪೇಂದ್ರನುಮನೈರಾಮಹಾದೇವಿಯುಮನಮರಲೋಕಾಂಬರ ಸ್ರಗ್ವಿಲೇಪನಾಲಂಕರಣಗಳಿಂದಂ ಪೂಜಿಸಿ ಜನ್ಮಾಭಿಷೇಕವೃತ್ತಕಮನವರ್ಗೆ ತಿಳಿಯೆ ಪೇೞ್ದು, ಅನಂತರಂ ಯಥೋಕ್ತ ವಿಧಾನದಿಂ—

ಪ್ರಕಟಮುಮಪ್ಪಂತಿರೆ ಜಾ
ತಕರ್ಮದೊಸಗೆಯುಮನೊಸೆದು ಮಾಡಿಸೆ ಬಳಿಕ
ರ್ಭಕ ಜಿನಶೀತಾಂಶುಗೆ ನಾ
ಮಕರಣದುತ್ಸವದೊಳುತ್ಸವಂ ಬೆರಸಾಗಳ್ ॥ ೪೦ ॥

ವಿಶ್ವಸೇನಾವನೀನಾಥನುಮೈರಾಮಹಾದೇವಿಯುಂ ಕುರುಕುಳಾಗ್ರಗಣ್ಯರಪ್ಪ ಬಂಧುಗಳುಂ ಮುಕುಳಿತಕರಕಮಳರ್ ಬಳಸಿಯುಮಿರೆ—

ಆದಿಜಿನೇಶ್ವರಂ ಮೊದಲಚಕ್ರಿಗೆ ಭಾವಿಜಿನೇಂದ್ರನಾಮ ತೀ
ರ್ಥೋದಯಮಾಳೆಯಂ ಬೆಸಸೆ ತಜ್ಜಿನಭಾಷಿತಮಾತ್ಮಚಿತ್ತಮಂ
ಭೇದಿಸಿದಂ ಲೋಕಪತಿಗಿಟ್ಟನನುಸ್ಮೃತಮಾತ್ರ ಪಾಪವಿ
ಚ್ಛೇದನಮಂ ಜಗತ್ಪ್ರಥಮ ಮಂಗಳಮಂ ಹರಿ ಶಾಂತಿನಾಮಮಂ ॥ ೪೧ ॥

ಅಂತು ತೀರ್ಥಕರನಾಮಕರ್ಮೋನ್ನತಂಗೆ ಶಾಂತಿನಾಮಮನಿಟ್ಟು ದಿವಿಜೇಂದ್ರವೃಂದಂ ಬೆರಸಿಂದ್ರನೊಸಗೆ ಮರಳ್ದೊಂಡು ಪಿಷ್ಟಾತಕ ಕೇಳೀವಿಧಾನಾನಂತರಂ—

ಆ ನಾಮಕರಣದೊಳ್ ಪೊಸ
ತಾನಂದಂ ಬಗೆಯನುಗಿಯೆ ಪುನರುಕ್ತತೆಯಿಂ
ದಾನಂದನೃತ್ಯಮಂ ಹರಿ
ತಾನಾಡಿದನೊಸಗೆಯೆಸಕಮಿರ್ಮಡಿಸುವಿನಂ ॥ ೪೨ ॥

ಅಂತು ನಿರ್ವರ್ತಿತ ತ್ರಿಭುವನಪತಿಭವೋತ್ಸವನಾಗಿ ಸಮವಯಾದಿ ವಿಜಯವಯಸ್ಯರುಮನಮರ ಧಾತ್ರೀಜನಮುಮಂ, ದಿವಿಜಾಂಗರಕ್ಷಕರುಮಂ,

ಸುರಲೋಕಕ್ಷೀರಪಯೋರಸಂಗಳುಮಂ, ಗೀರ್ವಾಣ ಮಹಾನಸಿಕ ನಿಕರಮು ಮಂ, ದೇವಸ್ನಪನಕಾರಿಕಾ ನಿಕಾಯಮುಮಂ ನಿಯೋಜಿಸಿ ಸುರಪತಿ ಜಗತ್ಪ ತಿಗೆಱಗಿ ತತ್ಪಿತೃಗಳುಮಂ ಬೀೞ್ಕೊಂಡು ಕಲ್ಪಾಮರಪುರಸ್ಸರಂ ನಿಜನಿವಾಸಕ್ಕೆ ಪೋದನಿತ್ತ ತೀರ್ಥಕರಕುಮಾರಂ ಪ್ರತಿದಿವಸ ಪ್ರವರ್ಧಮಾನನಾಗಿ ಬಳೆ ಯುತ್ತಂ—

ಅಡಿಯಿಡುವಂತಿರಪ್ಪುದನೆಯ ಚಕ್ರಿಪದಕ್ಕೆ ಜಿನಾರ್ಭಕಂ ತಳ
ರ್ನಡೆ ನಡೆದಂ ಜಿನೋಕ್ತಿ ಮೊದಲಲ್ತು ಮದಂಗದೊಳೆಂಬವೊಲ್ ತೊದ
ಳ್ನುಡಿ ನುಡಿದಂ ಗಭೀರತರರಾಜಕವೃತ್ತಿಯನೆಂದುಮೆಯ್ದೆ ಬ
ಲ್ಪಿಡಿವಿಡಿದಂ ಜಗಜ್ಜನಕನಂ ಶಿಶುವೆಂಬುದೊ ಮರ್ತ್ಯನೆಂಬುದೊ || ೪೩ ||

ನೆರೆದೋಲಗಿಪಮರ ನರೋ
ತ್ಕರಜಲಧರವಳಯದೊಳಗೆ ಕಾಂತಿಯ ಪುದುವಿಂ
ಪರಿವೇಷಂಗೊಂಡ ನಿಶಾ
ಕರನಂ ಪೋಲ್ತಂ ಕುಮಾರನೊಡ್ಡೋಲಗದೊಳ್ || ೪೪ ||

ನಡೆಯೆ ನಡೆದುಂ ಕುಳ್ಳಿರೆ ಕುಳ್ಳಿರ್ದುಂ ನಿಲೆ ನಿಂದುಂ ಪವಡಿಸೆ ಪಕ್ಕದಿರ್ದುಂ ನುಡಿಯೆ ಜೀಯೆಂದುಂ ಬಾಯ್ಗಳಂ ಮುಚ್ಚಿರ್ದು ದಿವ್ಯನಿನಾದಮನಾಲಿಸಿಯುಂ ಮಿಡಕದುಸಿರದೆ ನುಡಿಯದೆ ಮೋನಂಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು ನಚ್ಚಿನ ನಾಕಿನಿಕಾಯಮುಮಗಲದಹೋರಾತ್ರಮೋಲಗಿಕುಂ ||೪೫||

ಅಂತು ವಯೋಬಾಲಕನುಂ ಜ್ಞಾನವೃದ್ಧನುಮಪ್ಪ ಜಗದ್ಗುರುಗೆ ಸುರ ಸಮುದಯಂ ಪರ್ಯುಪಸ್ತಿಗೆಯ್ಯುತ್ತಿರೆ, ಆ ಸೋಮವಂಶಲಲಾಮನಪ್ಪ

ಪ್ರಿಯಮೂರ್ತಿ ತಾಯುಮಂ ತಂ
ದೆಯುಮಂ ಜಿನಚಂದ್ರಶಿಶು ಮನಂಗೊಳಿಸಿದನೇ
ೞ್ಗೆಯ ಪಾಡಿವದಿಂದು ಧರಿ
ತ್ರಿಯುಮಂ ಜಳನಿಧಿಯುಮಂ ಮನಂಗೊಳಿಸುವವೋಲ್ || ೪೬ ||

ಆ ಬಾಳಕೇಳಿಗಳಿಂ ಬಳಿಯಂ ಪದವಾಕ್ಯಪ್ರಮಾಣಾನುಗತಮಪ್ಪ ವ್ಯಾಕರಣಮುಮಂ, ಜಾತಿವೃತ್ತಾರ್ಥಕಮಪ್ಪ ಛಂದಸ್ಥಿತಿಯುಮಂ, ಶಬ್ದಾರ್ಥ ವಿಷಯಮಪ್ಪಲಂಕೃತಿಯುಮಂ, ಅಭಿದಾನ ಲಿಂಗಾಂಗೀಕೃತಮಪ್ಪ ನಿಘಂಟು ಸಮಯಮುಮಂ, ತತಾರ್ಯವೃತ್ತಕಮಪ್ಪ ನಾಟ್ಯವಿದ್ಯೆಯುಮಂ, ಯೋಗ ಕ್ಷೇಮಾಧೀನಮಪ್ಪ ನೀತಿಶಾಸ್ತ್ರಮುಮಂ, ವಶ್ಯವೇಶ್ಯಾಚಾರಮನೋವೃತ್ತಿ ಯಪ್ಪ ಕಾಮತಂತ್ರಮುಮಂ, ಚಿಕಿತ್ಸಿತಾಗೂಢ ಪ್ರೌಢಮಪ್ಪ ಗದಾಂಗಮುಮಂ, ಪೆಱವುಂ ವಿದ್ಯಾಕಳಾಪಮುಮಂ ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ ಬಾಲ ಭಾವಮಂ ಪೆಱಗಿಕ್ಕಿ ಯೌವನ ಪ್ರಾದುರ್ಭಾವಕ್ಕಿದಿರಾಗಿ—

ಅಂತುಮಾ ರೂಪನೆ ಚಿಂತಿಸಿ ಚಿಂತಿಸಿ
ಕಾಂತೆಯರ್ ಪತಿಗೆ ರತಿಸೋಲ್ತ ಕೆಂದಳಿ
ರಂತಲರ್ಗಣೆಗೆ ಡೊಣೆಯಾದರ್ ॥ ೪೭ ॥

[ಇತ್ತಲ್] ಸರ್ವಾರ್ಥಸಿದ್ಧಿಯಿಂದಂ ಬಂದು ವಿಶ್ವಸೇನ ಮಹಾ ರಾಜಂಗಂ ಯಶಸ್ವತಿ ಮಹಾದೇವಿಗಮಿಂದ್ರಚಂದ್ರಂ ಚಕ್ರಾಯುಧನೆಂಬೊಂ ಮಗನಾಗಿ ಪುಟ್ಟಿ ಬಳೆಯೆ—

ಗುಣನಿಧಿಯನಾತನಂ ತತ್
ಕ್ಷಣತತ್ಪರನಕ್ಷಿಪಕ್ಷ್ಮಪಾಳಿಪವಿಕ್ಷೇ
ಪಣಮಾತ್ರಮುಮಘರುಚಿವಾಃ
ಕಣರವಿ ಜಿನಚಂದ್ರದೇವನಿಱಿಪನೆ ಮನದಿಂ ॥ ೪೮ ॥

ಅಂದಮುಮತಿಶಯಮುಂ ಬಿಸ
ವಂದಮನುಱಿದೇಕರೂಪಮಾಯ್ತೆನೆ ವಿದ್ಯಾ
ಸಂದೋಹದೊಳಣ್ಣನ ಪಡಿ
ಚಂದಂ ಚಕ್ರಾಯುಧಂಗೆ ಗುಱು ಪೆಱನೊಳನೇ ॥ ೪೯ ॥

ಕಳೆದ ಭವದೊಳ್ ವಿರಾಮಂ
ಗಳೊಳೊದವಿದ ಮೋಹದಿಂ ವಿಚಾರಕ್ಕೆ ಪವ
ಣ್ಗಳೆದ ಗುಣದಿಂ ಕರಂ ಪಳು
ಗಳಿದುದು ದಯೆ ತಮ್ಮನೊಳ್ ಜಗತ್ರಯಪತಿಯಾ ॥ ೫೦ ॥

ಅಂತುತ್ಪನ್ನ ದೋಹದ ಹೃದಯಾಯತದ್ಯುತಿಯಮಪೂರ್ವ ಗೀರ್ವಾಣ ಜಂಗಮಮಹಿರುಹಂಗಳಿರ್ಪಂತೊಂದು ಪೊಟ್ಟುಮಗಲದಿರೆ ಮತ್ತೊಂದು ಪವಿತ್ರ ದಿನದೊಳ್ ವಿಶ್ವಸೇನಮಹಾರಾಜನುಮೈರಾಮಹಾದೇವಿಯುಂ ಭವತ್ಸಿಂಹಾಸನಾಸನ್ನವರ್ತಿಗಳ್ ಮುಕುಳಿತಕರಕಮಳರಾಗಿ—

ನಿನಗೆ ಗುರುವಾದಕಾರಣ
ದಿನೆಮಗೆ ಸುರಪತಿಕಿರೀಟಮೆಱಗಿದುದಾಕಾಂ
ಚನಗಿರಿಗೆ ಸುರರಕೃತ್ರಿಮ
ಜಿನಾಲಯಸ್ಥಿತಿಯಿನೆಱಗುವಂದಮನಿಂದ್ಯಾ ॥ ೫೧ ॥

ಮಹಿಮೆ ಜಗತ್ರಯಪ್ರಭುತೆಗಾಸ್ಪದಮಾದುದಿದರ್ಕಮಗ್ಗಳಂ

ಮಹಿಮೆಯನಾರೊ ಮಾಳ್ಪರಿದು ನಿನ್ನೊಡವುಟ್ಟಿದುದೀಗಳಾದೊಡಂ
ಮಹಿತ ನಿಜೈಕರಾಜ್ಯಭರದೊಳ್ ನಿಲವೇಳ್ಪುದು ನೀನಮೋಘನ
ಪ್ರಹತಸಮಸ್ತ ನಾಕ ನರಲೋಕ ಫಣೀಶ್ವರಲೋಕಶಾಸನಾ ॥ ೫೨ ॥

ಎಮ್ಮ ನುಡಿ 'ಮುನಿಗೆ ಕಿನಿಸುವೋದಿ'ರೆಂಬ ನುಡಿಯನೆ ಪೋಲ್ತುದ ಱಿಂದಮಿದಂ ದಿವ್ಯಚಿತ್ತದೊಳವಧರಿಸಿ ಯುಕ್ತತರವಿಚಾರದೊಳ್ ನೆಗಳ್ಪು ದೆಂದ ತಂದೆಯ ತಾಯ ಮಾತಿಗೆ ದರಹಸಿತವದನಾರವಿಂದನಾಗಿರ್ದುದಱಿಂದ ಮನಕ್ಷರವ್ಯಕ್ತಮಪ್ಪೊಡಂಬಡನಂ ವಿಶ್ವಸೇನ ಪ್ರಮುಖಸೇನಾಭಿಜ್ಞಾನತೆಯಿಂ ರಾಜಲೋಕಮಱಿದತ್ಯುತ್ಸುಕರಾಗಿ ಶಶಿವಂಶಕೇತುಗೆ ರಾಜ್ಯಾಭಿಷೇಕಂ ಗೆಯ್ಯೆ—

ಎತ್ತಿದ ಪಟ್ಟಮುಮಂ ಕವಿ
ದುತ್ತಮ ಮಕುಟಮುಮನುತ್ತಮಾಂಗದೊಳಾಂತುಂ
ಪೆತ್ತರ ಬಸಿರ್ಗಂ ಪಟ್ಟಮ
ನೆತ್ತಿಸಿದಂ ಮಕುಟಬದ್ಧರಿಂ ಜಿನಚಂದ್ರಂ ॥ ೫೩ ॥

ಅರಿಭೂಪಾಳಕರಿಲ್ಲ ಮಧ್ಯಮನೃಪೋಧಾಸೀನರಿಲ್ಲಾ ಮಹೀ
ಶ್ವರನುಂತುಂ ವಿಜಿಗೀಷು ಚಾರರಹಿತಂ ವಿಶ್ವೇಕ್ಷಣಂ ವೃದ್ಧಿಗೋ
ಚರಸೇವಾನುತ ದೂರತತ್ತ್ವವಿನಯಂ ಶಾಂತೀಶ್ವರಂ ನಿತ್ಯಶಾಂ
ತರಸಂ ಭೂಮಿಪಧರ್ಮಶಾಸನಮಿದೇನನ್ಯೋನ್ಯ ವೈರುಧ್ಯಮೋ ॥ ೫೪ ॥

ಮುಂತಿರೆ ಕೂರ್ಪು ನಯಜ್ಞತೆ
ಪಿಂತಿರೆ ರಿಪುಮಂಡಳಂಗಳಂ ಕೊಂಡಿರೆ ನಿ
ಶ್ಚಿಂತಮನಸಿ ಕೂರ್ಪಂ ತ
ರ್ಪಂತುಪಶಮಮಿರ್ದುದಾ ನರೇಂದ್ರೋತ್ತಮನೊಳ್ ॥ ೫೫ ॥

ಮತ್ತೊಂದು ಶುಭದಿನದೊಳ್ ಸಿಂಹಾಸನಾ[ಸೀನ]ನಾಗಿರ್ದ ಜಿನ ಚಂದ್ರದೇವನಂ ಕಂಡಾಯುಧಾಧ್ಯಕ್ಷನಷ್ಟಾಂಗಮೆಱಗಿ ಪೊಡೆವಟ್ಟು ಮುಂದೆ ನಿಂದು ಮುಕುಳಿತ ಕರಕಮಳನಾಗಿ

ದಿವಮೆಂತಂತೆ ಶತಾರಮುಗ್ರಮುಸಹಸ್ರಾರಂ ಸಹಸ್ರಾರಮ
ಪ್ರವಿಲಕ್ಷ್ಯಂ ದಿನಪೋಪಮಾನವಳಯಂ ಜಾಜ್ವಲ್ಯಮಾನಂ ಮರು
ನ್ನಿವಹಾನಂದಕೃತಸ್ತವನಂ ಕುಸುಮವೃಷ್ಟ್ಯಗ್ರೇಸರಂ ಬಂದುದಿಂ
ದು ವಿಯಚ್ಚಕ್ರದಿನಸ್ತ್ರಶಾಲೆಗೆ ಮಹಾಚಕ್ರಂ ಮಹೀವಲ್ಲಭಾ ॥ ೫೬ ॥

ಎಂದೀ ಬಿನ್ನಪಮನವ
ಸ್ಪಂದಮನಂತೆಯ್ದೆ ಕೇಳ್ದು ಮನುಜೋಕ್ತಿ ಪರಿ
ಸ್ಪಂದಮತಿ ಕೇಳದಂತಿ
ರ್ದಂದಪಗತಚಳನಜಳಧಿಯಂ ವಿಭು ಪೋಲ್ತಂ ॥ ೫೭ ॥

ಅಂತುದಾಸೀನಮಾನಸಂ ಮಸಕಮಿಲ್ಲದ ಸಾರ್ವಭೌಮರಿ ಪೇರಡ್ಡಮಾಗಿ ಕೆಲದ ಚಕ್ರಾಯುಧನೊಳ್ ತನ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ ಮತ್ತಂ ಕುಲವೃದ್ಧರ್ ತದೀಯಾಭಿಮುಖರಾಗಿ ಬಿನ್ನಪಂಗೆಯ್ದೊಡವರುಪ ರೋಧದಿಂದೆಂತಾನುಂ ಮೊಗವಿತ್ತು ನೋಡಿ ಪೇೞಿಮದರ್ಕೇಗೆಯ್ವುದೆನೆ ಮುಕುಳಿತಪಾಣಿಪಂಕರುಹರಾಗಿ—

ಮಂಡಳಿಪತಿಯೈ ಮುಂ ಷ
ಟ್ಖಂಡಕ್ಷ್ಮಾಪತಿಯೆ ಯಿಾಗಳದಱಿಂದಮಧೇ
ಭಂಡಮೆನಗೆನ್ನದೇಬ್ ಬಗೆ
ಗೊಂಡರ್ಚಿಸು ಚಕ್ರರತ್ನಮಂ ಕುರುತಿಲಕಾ ॥ ೫೮ ॥

ಅದಲ್ಲದೆಯುಂ ಪೂರ್ವಚಕ್ರಾಯುಧರನುಕ್ರಮಮನಱಿಯೆ ಬಿನ್ನಪಂ
ಗೆಯ್ದಿವದಱಿಂದೆ ಮೇಲಪ್ಪುದಂ ದೇವರಚಿತ್ತಮಱಿಗುಂ—

ಎನೆ ದರಹಸಿತಾಸ್ಯಂ ಶಾಂ
ತಿನಾಥನೆಂತೆಂತೊ ಚಕ್ರಮಂ ಪೂಜಿಸಿ ಮು
ನ್ನಿನ ಚಕ್ರವರ್ತಿಗಳ ತೆಱ
ದಿನಾಮುಮೆಜಗುವುದು ನಿಮಗೆ ಹೃದಯಂಗಮಮೇ ॥ ೫೯ ॥

ಕುಲವೃದ್ಧರಿರೆಂದುಮನಾ
ಕುಲವೃದ್ಧಿ ವಿಶೇಷವಿದ್ಯರಿರ್ ನಿಮ್ಮ ವಚೋ
ಜಲಮಾಲವಾಲಜಲಕೃತ
ವಿಲಾಸನೃಪಭೂರುಹಕ್ಕೆ ಹಿತಕರಮೆ ವಲಂ ॥ ೬೦ ॥

ಮುದುಗಣ್ಗಳುಚಿತಮಂ ನುಡಿ
ವುದು ದಲ್ "ಸ್ವಮತೇ ನಿವಾರಕಾಭಾವಾ"ತೆಂ
ಬುದನೆ ಬಗೆದುಚಿತಮಂ ಬಗೆ
ಯದೆ ನುಡಿದೊಡಮೆಮಗೆ ಲಂಘನೀಯಮಪೇಯಂ ॥ ೬೧ ॥

ಬಗೆಗೆಱಗೆ ಸಿದ್ಧಪರಮೇ
ಷ್ಠಿಗಳಲ್ಲದೆ ರಮ್ಯರಲ್ಲರುಱಿದ ಸಮಸ್ತೋ
ರ್ವಿಗಳೆಮ್ಮಂಘ್ರಿಯುಗಕ್ಕೆಱ
ಗುಗುಂ ಸ್ಫುರದ್ವೀಪವರ್ತಿ ನಿಧಿಗೆಱಗುವವೋಲ್ ॥ ೬೨ ॥

ಅದಲ್ಲದೆಯುಮಿೀ ಶರೀರದೊಳ್ ಘಾತ್ಯಾಘಾತಿವಿನಾಶಮುಮನಂತ ಚತುಷ್ಟಯಮುಂ ಕೇವಲಲಬ್ಧಿಲಾಭಮುಮಪ್ಪುದನಱಿಡುಮಿೀ ಚಕ್ರಲೋಹ ಖಂಡಕ್ಕಂ ಕುಡುಗಲ್ಗಮೆಱಗಿಮೆಂಬೊಡದುವುಮಂ ನೀಮಱಿವಿರೆಮಗೆ ಮಹತ್ತರವಚನಮುಮೋಘಂ ಮಾನ್ಯಮೆ—

ಎನೆಯೆನೆ ಚಕ್ರರತ್ನಮುಮರಾಳಿವೃತಂ ಬಲಗೊಂಡು ಶಾಂತಿನಾ<br>
ಥನ ಪದಪಂಕಜಕ್ಕೆಱಗೆ ಮುನ್ನಿದನರ್ಚಿಸು ಪೂಜಿಸೆಂದು ಪೇ<br>
ೞ್ದನುಮೆಱಗೆಂದು ಪೇೞ್ದನುಮಿದಾದಿಯ ಚಕ್ರಿಗಳಂದಮೆಂದು ಪೇ<br>
ೞ್ದನುಮಿದು ಚೋದ್ಯಮೆಂದು ಬೆರಗಾಗಿ ನಿಜೋಕ್ತಿಗೆ ತಾಮೆ ನಾಣ್ಚಿದರ್<br>
‖ ೬೩ ‖

ಅಂತಿನಿವಿರಿದಾಶ್ಚರ್ಯಮುಂ ಜಗತ್ಕ್ಷೋಭಮುಮಾಗಿಯಾ ಚಕ್ರೋತ್ಪತ್ತಿಯಪ್ಪುದುಮಧಿರಾಜ ಯಶಶ್ಚಂದ್ರಿಕೆ ಜಿನರಾಜಚಂದ್ರೋದಯದೊಳ್ ಮಸುಳೆಯುಂ ಕನಸಿನೊಳ್ ರಥಾಂಗಧರಯಕ್ಷರೂಪಮಂ ಕಂಡು ನೆನಸೆಂದು ತಂತಮ್ಮ ನೆಲೆಗಳೊಳ್ ಪುರಸ್ಥ ರಾಜಕೋಟಿ ಪೆಳ್ವಳಿಸೆಯುಂ ಇಂತು ನಿರತಿಶಯ ಪುಣ್ಯಪ್ರಭಾವಭೂತಚಕ್ರೋತ್ಪತ್ತಿ ನಾಡೆಯುಂ ವಿಸ್ಮಯಂ ಮಾಡೆ ಮಱುದೆವಸಂ ಮುನ್ನಿನ ಚಕ್ರೋತ್ಪತ್ತಿಪೂಜಾನುಭಾಷಿಗನಪ್ಪ ಪ್ರಧಾನಂ ನಿಂದಿರ್ದು ವಿಜಯಪ್ರಸಂಗವಿಜ್ಞಾಪನಮುಖರಮುಖನಾಗಿಯುಮತೀತದಿವಸ-ಸ್ವವಚನಕೃತಾರಂಭಕ್ಕೆ ಸಿಗ್ಗಾಗಿ ಚಕ್ರಾಯುಧನಂ ಬಿನ್ನಪಂಗೆಯ್ಯಲ್ವೇೞ್ಪಿದು-ಮಾತಂ ಬಂದು—

ಶ್ರವಣೋಪಾಂತದೊಳಿರ್ದು ಹಸ್ತತಳಮಂ ವಕ್ತ್ರಾಬ್ಜದೊಳ್ ಪಾರ್ಚಿ ವೈ<br>
ಶ್ರವಣಂ ವಜ್ರಧರಂಗೆ ಬಿನ್ನವಿಸುವಂತಂಭೋಧಿವೇಳಾಪರೀ<br>
ತವನಶ್ರೇಣಿಯನುರ್ವರಾವನಿತೆಯಂ ಬಾಯ್ಕೇಳಿಸಲ್ವೇೞ್ಪಿದಂ<br>
ದವನೀವಲ್ಲಭಾನುಜ(ನು)ದಾತ್ತಂ ಬಿನ್ನಪಂ ಗೆಯ್ವುದುಂ ‖ ೬೪ ‖

ಅಪ್ರತಿಹತನಿಜಾಜ್ಞಾರೂಢ ತ್ರೈಲೋಕ್ಯಶೇಖರಂ ತನಗೆ ನಿಸ್ಸಂಶಯ-ಮಾಗಿಯುಪವನ ಪ್ರತಿಕೂಲ ಪ್ರಿಯಹಿತವಾದಿಯಪ್ಪುದಱಿನಂತೆಗೆಯ್ವೆನೆಂಬುದುಂ ಚಕ್ರಾಯುಧನಾಯುಧಾಧ್ಯಕ್ಷಾಪ್ತಪುರುಷರುಮೊಂದೆ ಸರದೊಳ್

ಮಹಾಪ್ರಸಾದಮೆಂದಾಸ್ಥಾನ ಮಧ್ಯದಿನೆಟ್ಟು ಬಂದು ಪೊೞಲ ಪೂರ್ವದಿಗ್ಭಾಗಂಗಳೊಳ್ ಶಿಬಿರನಿವೇಶೋಪಕಾರ್ಯವಿರಚನಪರರಾಗಿ ಪ್ರಾರಂಭಮಂ ಪಡೆವಳನಿಂದಂ ಮಾಡಲ್ವೇೞ್ದು ದಿಗ್ವಿಜಯಭೇರಿಯಂ ಪೊಯ್ಸಿದಾಗಳ್—

ಮದಮಂ ದಿಗ್ಗಜಮೆತ್ತಿ ಕಟ್ಟೆ ದಿಗಧೀಶರ್ ದೇವದೇವಂಗದಾ
ವುದೊ ಭೂಲೋಕದ ಸಾಧ್ಯಸಾಧನೆಗಳಿಂ ತ್ರೈಲೋಕ್ಯ ಸಾಮ್ರಾಜ್ಯ ಸಂ
ಪದುಪೇತಂಗೆನೆ ಬಂದು ಮುಂದೆ ಸಿಲೆ ಮೂವತ್ತಿರ್ವರಿಂದ್ರರ್ ಕಲಂ
ಕಿದುವಂತಬ್ಧಿಗಳಂದದೇನೆಸೆದುದೋ ಗಂಭೀರಭೇರೀರವಂ ॥ ೬೫ ॥

ಸೌಜನ್ಯಕಂದಾಂಕುರಂ ವಿಜಯಪ್ರಸ್ಥಾನೋದ್ಯುಕ್ತಂ ಮಂಗಳವಸದನಂಗೊಂಡು—

ಚಂಪಕಸಪ್ತವರ್ಣಮದಗಂಧಿಯನುತ್ತಮಪಾತ್ರವರ್ತಿ ಭೂ
ಕಂಪನಮಂ ಕನತ್ಕನಕಮಂಡನ ಮಂಡಿತಮಂ ವಪುಷ್ಮಮಂ
ಸಂಪದುಪೇತಮಂ ಶರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇ
ವಂ ಪೊಱಮಟ್ಟನೇಱಿ ಜಯಮಂ ಜಯಪರ್ವತಯಾನನಾಗಮಂ ॥ ೬೬ ॥

ತಳರೆ ಮಹೀರಜದಿಂ ಘನ
ವಿಳಾಸಗಜಘಟೆಯಿನವನಿಯಂ ನಭಕೆ ನಭ
ಸ್ಥಳಮಂ ನೆಲಕ್ಕೆ ತಂದಂ
ತಳುಂಬಮಾದುದು ತದೀಯಚತುರಂಗಬಳಂ ॥ ೬೭ ॥

[ಅವನಿಪತಿ ಮಹೋತ್ಸಾಹದಿಂದಂ ಬೀಡಂ ಪೊಕ್ಕು ವಿಶ್ರಮಿಸಿ ಇರುಳ್ ಕಳೆದು] ನೇಸಱ್ ಮೂಡುವುದುಮರಸನುಪ್ಪವಡಿಸೆ ಕೃತೋಚಿತದಿವಸ ಮುಖವ್ಯಾಪಾರನಾಗಿ ಪ್ರಯಾಣಪಟಹಂಗಳೆಸೆಯೆ ಪೂರ್ವಾಭಿಮುಖನಾಗಿ ಪಯಣಂಬೋಗಿ ಪೌರಸ್ತ್ಯರಾಜನ್ಯಕ ಸಾಧನಪರನಾಗಿ ಮುಂದಂ ನಡೆಯೆ—

ಭೂಜಾಂಗವೃತ್ತಿಯುಂ ಬಿಸು
ಟಾ ಜಗದಧಿಪಂಗೆ ವೈತಸಾವಳಿ ಪರಿವಂ
ದಾ ಜಳಕೆಱಗುವವೋಲ್ ನಯ
ಭಾಜನರೆಱಗಿದರಜಿಲಹರೆನಿಸಿದ ಸುಹ್ಮರ್ ॥ ೬೮ ॥

ಅಲ್ಲಿಂದತ್ತಂ—

ನೌಸಾಧನೋದ್ಯತರನಂ
ತಾ ಸೇನಾನಿ ತ್ರಿವಂಶರಂ ಕಿಟ್ಟಿ ಗತಾ
ಯಾಸಂ ನಟ್ಟಂ ನೃಪಜಯ
ಶಾಸನಮಂ ಗಂಗೆಯೆರಡುತಡಿಯೊಳಮೊಗದೊಳ್ ‖ ೬೯ ‖

ಅಂತು ಸರ್ವಸ್ವ ಹರಣಾನಂತರಮುವರವರ(ನವರವರ) ನೆಲೆಯೊಳ್ ನಿಱಿಸಿ ಚಕ್ರವರ್ತಿ ಕಳಿಂಗದೇಶಾಭಿಮುಖನಾಗಿ ಪೋಗಿ—

ಪ್ರವರಾಂಕುಶಮಂ ಗಂಭೀ
ರವೇದಿಶಿರದೊಳ್ ನಿಷಾದಿ ನಿಱಿಸುವ ತೆಱದಿಂ
ದವನಿಪತಿ ನಿಱಿಸಿದಂ ತೀ
ವ್ರವೈರಿಜಯಮುಂ ಮಹೇಂದ್ರಗಿರಿಮಸ್ತಕದೊಳ್ ‖ ೭೦ ‖

ಅಂತು ಪೂರ್ವಮಹೇಂದ್ರ ಪೂಜಾವಾಪ್ತಮಹಿಮಾತಿಶಯದಿಂ ಮಹೇಂದ್ರಾದ್ರಿಸಾರಮನಾತ್ಮಾಯತ್ತಂ ಮಾಡಿದುರ್ವರಾಸ್ಯತಿಲಕನ ಸೈನಿಕಂ—

ಕಡಿಯೆ ಕವುಂಗುಂ ತೆಂಗುಂ
ಪಡಲಿಟ್ಟುವು ತಮಗೆ ಸೋಲ್ತು ರಿಪುವನಿತೆಯ ಸೋ
ರ್ಮುಡಿಯನಿಱಿಪುವವೊಲಿಱಿಪಿದ
ರಡರ್ತು ಕಯ್ಪಿಟ್ಟು ನಿಮಿರ್ದ ಸೀರಿಯಕೆಯ್ಯಂ ‖ ೭೧ ‖

ಅಂತು ವಿಳಯಾನಳನಂತೆ ವನಭಂಗಂಗೆಯ್ಯೆ ಮುಳಿದು ಚಕ್ರವರ್ತಿ ದಂಡನಾಯಕನೊಳ್ ಗಜಪೇಶಲಸೇನಾಂಗನಪ್ಪ ಕಳಿಂಗರಾಜಂ ಬಂದು ಪಕ್ಷಚ್ಛೇದೋದ್ಯುಕ್ತನಪ್ಪ ಸುರರಾಜನ ಸೇನಾನಿಯೊಳ್ ತಾಗುವ ಪದದ ವರ್ಷನಗದಂತೆ ಬಂದು ತಾಗುವುದುಂ, ದಂಡನಾಯಕನುಂ ಕೆಲವು ಗಂಧಸಿಂಧುರಂಬೆರಸು ತೊತ್ತಳದುಱಿಯೆ ಕಳಿಂಗನೃಪಯೋಧರು—

ನಾರಾಚವೃಷ್ಟಿ ಮಂಗಳ
ದಾರಾಸ್ನಪನಮನೆ ಪೋಲೆ ಸೇನಾನಿಗೆ ಕೆ
ಯ್ಯಾರೆ ಜಯಲಕ್ಷ್ಮಿ ನೃಪಘಟಿ
ಗಾರಾಜಕಮಾದುದಂದು ಕಟ್ಟುಂಗವಳಂ ॥ ೭೨ ॥

ಅಂತು ಕಳಿಂಗರಾಜನ ಮದದಂತಿಗಳ್ ನುರ್ಗುನುರ್ಗಪ್ಪಿನಂ ಪರಿಯಿಸಿ ಗೆಲ್ವುದುವೊಂದೆ ಮೆಯ್ಯೊಳೋಡುವ ಕಳಿಂಗರಾಜನೇಱಿದಾನೆಯನಾನೆಗ ಳೊಳ್ ಭಂಡಾರಿಸಿ ತದೀಯ ಶೌರ್ಯಮನೆತ್ತುಂಗೋಲ್ಗೊಳ್ವಂತೆ ಮೇಗಣಂ ಮೇಗೆ ಪಿಡಿದೆತ್ತಿಕೊಂಡು ಮರ್ಕಟಬಂಧದಿಂ ಕಟ್ಟಿತಂದು ಚಕ್ರವರ್ತಿಯ ಮುಂದಿಱಿಪುದುಂ—

ಅರಿಗಸುರ ವಿಜಯ ಮುನಿಗುಂ
ಧರೆ ಬರೆ ಸಿರಿ ಸಾರೆ ಧರ್ಮವಿಜಯ ವಿಭು ತಾಂ
ಕರುಣಿಸೆ ಮಹೇಂದ್ರನಾಥನ
ಧರೆಯಿರೆ ಸಿರಿ ಚಕ್ರವರ್ತಿಗಾವಗಮಾದಳ್ ॥ ೭೩ ॥

ಅಂತು ಕಳಿಂಗರಾಜಂಗೆ ಕೋಶೋಪನತವೃತ್ತಿಯನಿತ್ತು ಸರ್ವಸ್ವಮಂ ಕೊಂಡಾಜ್ಞಾವಿಧೇಯಂ ಮಾಡಿ ಮಹೇಂದ್ರೋಪಕಂಠದೊಳ್ ಮೂರುಪಯ ಣಂಗೆಯ್ದು ಮತ್ತಂ ಕತಿಪತಿ ಪ್ರಯಾಣಂಗಳಿಂ—

ಗಂಗೆಯ ತಡಿವಿಡಿದು ಬಲಾಂ
ಗಂಗಳ್ ಬೇಱೊಂದು ಗಂಗೆ ನಡೆವಂತಿರೆ ಬೇ
ಗಂಗಿಡದೆ ನಡೆಯೆ ನಡೆದು ರ
ಥಾಂಗಧರಂ ಬೀಡುವಿಟ್ಟನಂಬುಧಿತಟದೊಳ್ ॥ ೭೪ ॥

ಅಂತು ಗಂಗಾದ್ವಾರದೊಳ್ ಬೀಡಂಬಿಟ್ಟು ಚಕ್ರೇಶ್ವರನಿರ್ಪುದುಂ—
ಬೇಗಮುದನ್ವದಂತರನಿವಾಸಿಗಳಾಸನ ಕಂಪದಿಂ ನೃಪೇಂ
ದ್ರಾಗಮಮಂ ಜಲಕ್ಕನಱಿದೀಶನನೀಗಡೆ ಕಾಣ್ಬುದೆಂದು ತ
ನ್ಮಾಗಧದೇವನಂ ಬಳಸಿಕೊಂಡಮರರ್ ಬರೆ ಬಂದು ಮಾಗಧಂ
ಮಾಗಧನಂತೆ ಬಿಚ್ಚಳಿಸಿ ಭೂಪನ ಬಾಗಿಲಕಣ್ಣೊಳಿರ್ಪುದುಂ ॥ ೭೫ ॥

ಅಱಿಪೆ ಮೊದಲವರ್ಗೆ ಕಿಟ್ಟಿಡಿ
ಯಱಿರವರಧಿಪಂಗೆ ಬಿನ್ನಪಂಗೆಯ್ವುದುಮಾ
ಮಱಿಯೆವದಂ ಚಕ್ರಾಯುಧ
ನಱಿಗುಂ ವ್ಯಂತರರ ಕಾಣ್ಬ ಕಾಣಿಸುವೆಡೆಯಂ ॥ ೭೬ ॥

ಎಂಬುದುಂ ವಾಮಕರತಳನಿಹಿತ ದುಕೂಲಾಂಶುಕ ವಸನಾಚ್ಛಾದಿತೋ-ತ್ಕದ್ವಯ ದಕ್ಷಿಣಪಾಣಿಪಲ್ಲವಾಭಿನಯ ನಿವೇದಿತಾವಿನೇಯ ವಿಳಸಿತ ಚಕ್ರಾ-ಯುಧಂ ನಿಂದಿರ್ದು—

ಅಪ್ರತಿಮಾರ್ಘ್ಯಕರಂ ತ್ರಿದಿ
ವ ಪ್ರಸ್ತುತವಸ್ತುಹಸ್ತಯುಕ್ತಂ ಶ್ರೀಪಾ
ದಪ್ರಣತನಗ್ರಹಾರದ
ವಿಪ್ರನ ಮಾಗಧನ ಕಾಣ್ಕೆಗೇನಾಳೋಚಂ ॥ ೭೭ ॥

ಬರವೇಟ್ಟುದೆಂಬುದುಂ ರಾ
ಜರಾಜನನುಮತಮನಱಿದು ಪೆರ್ವಡಿಯಱಿನಾ
ದರದಿಂ ಕಾಣಿಸಿದಂ ವ್ಯಂ
ತರೇಶನಂ ಮೂಡಣಂಬುನಿಧಿಗಧಿಪತಿಯಂ ॥ ೭೮ ॥

ಅಂತು ತಂದು ಕಾಣಿಸಿ ಜಗತ್ಪ್ರಾಸಾದಮೂಲಸ್ತಂಭಂಗೆ ಪೊಡವಡಿಸೆ—

ಸೊಗಯಿಪ ತುಡಿಗೆಗಳಂ ಪಡ
ಲಿಗೆವೆರಸವಟಯ್ಸಿ ಭೂಷಣಾದಿಗಳಂ ಪೇ
ಳಿಗೆವೆರಸಿ ತೋರ್ಪ ಭಂಡಾ
ರಿಗಳಿನಿಸಿದನಮರನಜರನಾಸ್ಥಾಯಿಕೆಯೊಳ್ ॥ ೭೯ ॥

ಅಂತವಟಯ್ಸಿದ ಪರಾರ್ಘ್ಯರತ್ನಂಗಳಂ ಗೃಹಪತಿರತ್ನಂ ಕಯ್ಕೊಳಲೆಂದು ನಿಂದು ನೋಡೆ—

ನೀಲಪಟಾಸ್ತರಣದ ಮೇ
ಲಾ ಲಲಿತಾಭರಣಮೊಪ್ಪಿ ತೋಱಿದುದು ಶರ
ತ್ಕಾಲದ ಗಗನದ ತಾರಾ
ಮಾಲೆಯನನುಕರಿಸಿ ದೇವದೇವನ ಸಭೆಯೊಳ್ ॥ ೮೦ ॥

ಅವಂ ಗೃಹಪತಿರತ್ನಂ ಕೆಯ್ಕೊಂಡು ಮಾಣಿಕಭಂಡಾರಿಗಂಗೆ ಪ್ರವೇ-
ಶಂಗೆಯ್ದನಿತ್ತ ವ್ಯಂತರಾಮರಂ—

ಅಱಿಯದ ಜಡಂ ಪಾಲಂ ದುಗ್ಧಾಬ್ಧಿಗುಯ್ವವೊಲಾನುಮೀ
ತೆಱದೆ ನೃಪತೀ ನಿನ್ನಂ ಕಾಣ್ಬಲ್ಲಿಗೀ ಮಣಿಭೂಷಣಂ
ನೆಱಿಯದೊಡವಿಂ ತಂದೆಂ ಮದ್ಭಕ್ತಿಯಿಂ ಪರಮಾರ್ಥದಿಂ
ದಱಿಯದವರಾರ್ ಅರ್ಥೀ ದೋಷಂ ನ ಪಶ್ಯತಿ ಯೆಂಬುದಂ ॥ ೮೧ ॥

ಮನಮುಂ ತನುವುಂ ಮತ್ತೊ
ರ್ವನರಸನಾದಂದು ಮುಕ್ತಿಯುಂ ಭುಕ್ತಿಯುಮೊ
ರ್ವನೊಳಿಲ್ಲನುಜೀವಿಗೆ ದೇ
ವನುಮರಸನುಮೊರ್ವನೆಂದೊಡದನಾರ್ ಪಡೆವರ್ ॥ ೮೨ ॥

ವನನಿಧಿಯೊಳೆನಗೆ ಕೆಯ್ಸಾ
ರ್ದನಿತಂ ವಸ್ತುಗಳನುೞಿಪದೋಲಗಿಸಿದೆನಿ
ನ್ನೆಗವದುವೆ ದಿವ್ಯಮಂತ
ರ್ಥನಕ್ಕೆ ಭವದವಧಿಬೋಧಮತಿಶಯ ಬೋಧಾ ॥ ೮೩ ॥

ಎನೆ ಮಾಗಧನಂ ಚಕ್ರೇ
ಶನನುಜನಿರವೇೞ್ದು ಮುನ್ನಮಿಕ್ಕಿದ ದಿವಿಜಾ
ಸನದೊಳ್ ಬೞಿಯಂ ಕುಳ್ಳಿ
ರ್ದನನೆಂದಂ ತೊಳಗಿ ಬೆಳಗೆ ದಶನದ್ಯುತಿಗಳ್ ॥ ೮೪ ॥

ಪೞಿಗಾಂಪರ ನುಡಿ ಮುತ್ತುಂ
ಮೆೞಿಸುಂಗೋದಂದದಕ್ಕೆ ಬಾಷ್ಯಮನೊರ್ವಂ
ಕೞಿಯೋದಿದಾತನಲ್ಲದೆ
ಬೞಿವಳಿಯಿಂ ಬಂದು ಬರೆಯಲಾಗದಗಣ್ಯಂ ॥ ೮೫ ॥

ಸಾರತರೋಕ್ತಿಗೆ ನೆಲ್ಲುಂ
ಮೋರುಂಗೋದಂತೆ ನೇೞ್ ಕಲ್ತಾರ್ಪವರವ
ರ್ಗೋರೆ ನಿಬಂಧನ ಟೀಕಾ
ಕಾರಂಗಲ್ಲದೆ ಪೆಱಂಗೆ ಕೋೞ್ಪೋದಪುದೇ ॥ ೮೬ ॥

ಆದಱಿಂ ಜೀವಶರೀರನಿಧಾನದಂತೆ ವಚನರಚನೆಯುಮರ್ಥಮುಮಿ-
ತರೇತರಶ್ರೇಯಮಪ್ಪುದು ನಿನ್ನ ನುಡಿಯೊಳಲ್ಲದಿಲ್ಲೆಂದು ಮಾಗಧನನತ್ಯಂತ-
ಮಾಱೆ ನುಡಿದು ರಾಜಾಧಿರಾಜಾನುಜನ್ಮಂ ಮತ್ತಮಿಂತೆಂದಂ-

ಮೂವತ್ತಿರ್ಛಾಸಿರ್ವರ್
ದೇವರ ಮೆಯ್ಗಾಪು ದೇವದೇವಂಗವರಂ
ಸಾವಗಿಸಿ ತಂತ್ರಪಾಲತೆ
ಗಾವಗಮಾಗಿಯೆ ನೃಪಾಂಘ್ರಿಯುಗಲದ ಮೊದಲೊಳ್ ॥ ೮೭ ॥

ಪುಗುವ ಪೊಱಮಡುವ ಪಾಳೆಯ
ಮುಗಣಿತಮಾಳವರ್ಗಳಿವರ್ಗಳೆಂಬಂತೀ ದಂ
ದುಗಮೆರಡಿಲ್ಲದೆ ನಿಮ್ಮೊಳ್
ತಗುಳ್ಗುಮಿಲ್ಲಿಂದಮತ್ತ ಕೆಯ್ಕೊಳ್ ಬೆಸನಂ ॥ ೮೮ ॥

ಎಂದು ಮಾಗಧನನಾಳ್ವೆಸಕ್ಕೆ ಪೊಱಮಡಿಸಿ-

ಸೆಣಸಲ್ ಮೂಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟೆಂ
ಕಣಿಸಲ್ ಪೇೞ್ದುದನಿರ್ಮೆ ಕೇಳಲರಿಯಿಲ್ಲೆಂಬನ್ನೆಗಂ ಗೆಲ್ದು ಮೂ
ಡಣ ರತ್ನಾಕರಮಂಬುಶೇಷಮೆನೆ ತದ್ರತ್ನಂಗಳಂ ಕೊಂಡು ದ
ಕ್ಷಿಣರತ್ನಾಕರದತ್ತಮೆತ್ತಿ ನಡೆದಂ ಸೌಜನ್ಯಕಂದಾಂಕುರಂ ॥ ೮೯ ॥

## ೧೦. ಕೈಕೊಳ್ಳೊಡಾತ್ಮಸುಖಮನೆ ಕೈಕೊಳ್ಳುದು

ಶ್ರೀಚತುರಂತೇಶಂ ಸಚ
ರಾಚರಪತಿ ದಕ್ಷಿಣಾಭಿಮುಖನಿನನಿನನಂ
ತಾ ಚಕ್ರವರ್ತಿ ನಡೆದನ
ವಾಚೀದಿಗ್ವಿಜಯಹೇತುವಿಂ ಜಿನಚಂದ್ರಂ ॥ ೧ ॥

ಅಂತು ಕತಿಪಯದಿನಂಗಳಿಂ ಮಹಾಸಮುದ್ರದ ನಡುವೆ ಸೈನ್ಯ ಸಮುದ್ರಂ ಬರೆ ಬಂದು—

ಸ್ಕಂದಾವಾರೇಭ ಮದೋ
ದ್ಗಂಧಾವಿಲೆಯಂ ಕವೇರಕನ್ನಿಕೆಯಂ ತ
ತ್ಸಿಂಧುಪತಿಗಿಂಬಿನಿಂದತಿ
ಸಂಧಿಸಿದಂ ನೃಪತಿ ಬಿಟ್ಟು ತದುಭಯತಟದೊಳ್ ॥ ೨ ॥

ಅಂತಲ್ಲಿ ಬೀಡಂಬಿಟ್ಟಪ್ಪುದುಮಾ ದಿಗ್ದೇಶಾಧೀಶ್ವರರಪ್ಪರಸುಗಳ್ ಚಕ್ರವರ್ತಿಯ ಚರಣನಳಿನಯುಗಳಕ್ಕೆಱಗಿ ಕುಲಧನ ಜೀವಧನಾದಿ ಸಾರವಸ್ತುಗಳ-ನೋಲಗಿಸಿದರಲ್ಲದೆಯುಂ—

ವಿತತಗ್ರೀಪಂ ನಿಪಹತಿಸಿ
ಯುತಪಲ್ಲವರೆಱಗಿ ಗಹನಮುಟಿದಿತ್ತು ವನ
ಸ್ಪತಿಗಳೆನಲಲ್ಲದವನೀ
ಪತಿಗಳ್ ಶಾಂತೀಶನಂಘ್ರಿಗೆಱಗಿ ಮಹೀಶರ್ ॥ ೩ ॥

ಅಂತವರಂ ಶಾಸನೋಪನತರ್ಮಾಡಿ ಕಾವೇರೀಸ್ರವಂತೀಸಮುತ್ತರಣಾ-ನಂತರಂ ಬರೆವರೆ—

ಗುಣನಿಧಿಗೆ ಜಗಚ್ಚೂಡಾ
ಮಣಿಗೆಱಗಿ ಪೆಱಂಗೆ ಭಯದಿನೆಱಗದ ಚೂಡಾ
ಮಣಿಗೆಱಗಿ ಚಕ್ರಿಪದದೊಳ್
ಫಣಿಮಣಿ ಪುನರುಕ್ತಿ ಪಾಂಡ್ಯಪತಿಗಾಯ್ತಾಗಳ್ ॥ ೪ ॥

ದಿನಕರತೇಜಮುಂ ಕ್ರಮದಿನೊಯ್ಯನೆ[ಯಪ್ಪುದ] ದತ್ತ ದಕ್ಷಿಣಾ
ಯನದೊಳವಾಚ್ಯರರ್ಣವನಿವಾಸಿಗಳಾಗಿಯುಮಂದು ಶಾಂತಿನಾ
ಥನ ವಿತತಪ್ರತಾಪಶಿಖಿ ಕಣ್ಗೊಳಿಸಲ್ಕೆ ವಿಷಣ್ಣರಾಗಿ ತ
ಜ್ಜಿನಪತಿಪಾದಪಾದಪದ ತಣ್ಣೆೞಲೊಳ್ ಕಳೆದರ್ ವಿಷಾದಮಂ ॥ ೫ ॥

ಅಂತು ದಕ್ಷಿಣದಿಕ್ಪಾಲಪುರಸ್ಸರರವನಿಪತಿಗಳೊಳಾಳ್ತನಮಂ ಪೂಣ್ದು ಸಾರಸರ್ವಸ್ವನಿವೇದನಂಗೆಯ್ದು ಮುಂಗುಡಿಯ ಬಂದಚಕ್ರವರ್ತಿ ವೈಜಯಂತೀ ದ್ವಾರಾಭಿಮುಖನಾಗಿ ಬೀಡಂಬಿಟ್ಟೋಲಗಂಗೊಟ್ಟರೆ-

ಕರಿಮಕರಾಧಿರೂಢನಸಮಾನಸಯಂ ಸುರವೇಷ್ಟಿತಂ ಮನೋ
ಹರ ಕರಯುಗ್ಮ ಪಾರಿತಶರಾಸಪರಾರ್ಧ್ಯಮಣಿವ್ರಜಂ ನಿಧೀ
ಶ್ವರಭವನಾಂತರಾಳಪದಮಾರ್ಗನುದನ್ವದುಪಾಂತ ಸಾರನಾ
ವರತನು ಬಂದು ಕಂಡೆಱಗಿದಂ ಕ್ಷಿತವಲ್ಲಭ ಪಾದಪೀಠದೊಳ್ ॥ ೬ ॥

ಅಂತೆಱಗಿದ ವರತನು
ಷ್ಪಾಂತಸ್ಥಿತಮಂತ್ರಿವರ್ಗಮೋಟಿೞೀೞ್ ಧರಣೀ
ಕಾಂತಂ ನಿನ್ನಂ ನಿಜಸಾ
ಮಂತರ ಸಮನಾಗೆ ಬಗೆಗುಮಿನ್ನಂಜದಿರಾ ॥ ೭ ॥

ಎನೆ ವರತನು ಬಂದಧಿನಾ
ಥನಿದಿರೊಳಿಕ್ಕಿದ ನಿಜೋಚಿತಾಸನದೊಳ್ ತಾಂ
ವಿನಿಯದಿನಿರ್ದೋಲಗಿಸಿದ
ನಿನನಂ ಪೊತ್ತಱಿನ ಕಮಳಮೋಲಗಿಸುವವೋಲ್ ॥ ೮ ॥

ಶಾಂತೀಶ್ವರಂ ನಿಜವಿಜಯಸ್ಕಂಧಾವಾರಮಂ ಸಿಂಧುದ್ವಾರಕ್ಕಿದಿರಾಗಿ ಬೀಡಂ ಬಿಡಿಸಿ ಸಭಾಮಂಡಲ ಮಧ್ಯಸ್ಥಿತ ಕಂಠೀರವಾಸನಾಸೀನನಾಗಿರೆ-

ದಿಗವನಿ ನಭೋಭಾಗಾಭೋಗಂ ಮದನ್ವಯಮಾಗೆ ವ
ಸ್ತುಗಳ ಬಱಯಂ ಷಣ್ಮ್ಯಾಗಾರ ಸ್ವವಾಹನದೇವರೊಳ್
ಸೊಗಯಿಸೆ ನೃಪಾಜ್ಞಾತಂ ತಂ[ದಂ]ದು ಕಾಣಿಸೆ ಭಕ್ತಿಯಿಂ
ಜಗದಧಿಪನಂ ಕಂಡಂ ಬಂದಾಪ್ರಭಾಸಸುರೇಶ್ವರಂ ॥ ೯ ॥

ಅಂತು ಕಂಡೊನಂ ಪ್ರಭಾಸವ್ಯಂತರಾಧೀಶನನಾಳ್ದಲ್ಲಿಂದಂ ತಳರ್ದು ದಕ್ಷಿಣ ಭರತವಿನೀತಾಖಂಡಮನುಂಡಿಗೆಸಾಧ್ಯಮಾಗೆ ಬಾಯ್ಕೇಳಿಸಿ-

ವಿಜಯಾರ್ಧಾದ್ರಿಯನೆಯ್ದಿ ತತ್ಕಟಕದೊಳ್ ಬೀಡಿಂಗೆ ಪಾಂಗಾಗೆ ತ
ದ್ವಿಜಯ ಶ್ರೀಕಟಕೋಪಮಂ ಕಟಕಮಣ್ಮುಟ್ಟಾಗೆ ಬಿಟ್ಟಪ್ಪಿನಂ
ವಿಜಯಾರ್ಧೇಂದ್ರಕುಮಾರನಾ ನಗದಧೀಶಂ ಬಂದು ಕಂಡಂ ನವು
ತ್ರಿಜಗನ್ನಾಥನನರ್ಘ್ಯಪಾಣಿ ವಿಜಯಾರ್ಧಂ ಬಂದು ಕಾಣ್ಬಂದದಿಂ ॥ ೧೦ ॥

ಎಱಗಿ ಪೊಡಮಡುವ ತೆಱನೆರ್ದೆ
ಯೆಱಕಮನನುವದಿಸಿ ಪೊಳೆವ ಮಣಿಮುಕುಟದ ಕಿ
ಕ್ಕಿಱಗಿಱದ ಪೊನ್ನ ಪೊಂಗಳ
ತುಱಗಲ್ ಪರಿಕಲಿಸೆ ಪಾದಪೀಠದ ಮೊದಲೊಳ್ ॥ ೧೧ ॥

ಅಂತು ಪೊಡವಟ್ಟು ಕಂಡು ತನ್ನ ತಂದನರ್ಘಮಣಿ ಪುದಿದುರ್ವರಾಸ್ಯ-ತಿಲಕನಪ್ಪ ಚಕ್ರವರ್ತಿಯ ಪಾದಪದ್ಮಂಗಳನರ್ಚಿಸಿ ವಿಜಯಾರ್ಧಕುಮಾರಂ ವಿಜ್ಞಾಪನಮುಖರಮುಖನಾಗಿ-

ಭಗವಜ್ಜನ್ಮಾಭಿಷೇಕಕ್ಕೆಮಗಣಮಧಿಕಾರಂ ದಲಿಲ್ಲೆಂದು ಶಕ್ರಾ
ದಿಗಳಿಂದಂ ಸ್ನಾನಕಲ್ಯಾಣದ ವಿಧಿ ನಿಮಗಂ ತೀರ್ವುದೆಮ್ಮನ್ನರಪ್ಪ
ರ್ಥಿಗಳುರ್ವೀರಾಜಪೂಜಾಭಿಷವಣವಿಧಿಯಿಂ ಪೆರ್ಚುವರ್ ದೇವ ಕೇಳಿಂ
ದಗ ಪುಣ್ಯಸ್ರೋತದಿಂ ಸ್ನಾನಮನೊದವಿಸಿದರ್ ದೇವದೇವಂಗೆ ದೇವರ್
॥ ೧೨ ॥

ಅಂತು ಮಜ್ಜನಂಬುಗಿಸಿ—

ದಿವಿಜಪತಿ ಪೊಳೆವ ದೇವಾಂ
ಗವಸ್ತ್ರಮಂ ಭುವನಪತಿಯನುಡಿಸಿ ನಿಜಾನ್ವೀ
ತವಿಶೇಷಭೂಷಣಂಗಳ
ನವಾರಿತಂ ತುಡಿಸಿ ತೋಱಿ ಸಂಗೀತಕಮಂ ॥ ೧೩ ॥

ತನಿಗಿರ್ಚು ಕರಗಿಕುಂ ಕಾಂ
ಚನಮಂ ಕರಗಿಕುಮೆ ವಜ್ರಮಂ ಧರಣೀಭೃ
ನ್ಮನಿ ಪೊಱಗಾಗುೞಿದರ ಕ
ಣ್ಮನಮೆಂಬಿವನುಗಿವುದಮರಗಣಿಕೆಯುರಾಟಂ ॥ ೧೪ ॥

ಹರಿಪೀಠಂ ಚಮರೀರುಹಂ ಶಶಿನಿಭಂ ಛತ್ರತ್ರಯಂ ಮೌಕ್ತಿಕಾ
ಭರಣವ್ರಾತಮುದಾತ್ತಕೇತನಚಯಂ ರಾಜ್ಯಕ್ಕೆ ಚಿಹ್ನಂಗಳಿಂ
ದರಸಂಗಂದವಟಯ್ಸಿದಂ ರಜತಶೈಲಾಧೀಶ್ವರಂ ವ್ಯಂತರಾ
ಮರರಾಜಂ ವಿಜಯಾರ್ಧನಾಥನುಮನಂತಾಳ್ದಂ ಮಹೀವಲ್ಲಭಂ ॥ ೧೫ ॥

ಅನಂತರಂ ವಿಜಯಾರ್ಧಕುಮಾರನಂ ವಿಸರ್ಜಿಸಿದಿಂ ಬೞಿಯಂ—

ಮಿತಸಾರೇತರಸಾರವಾಗೆ ವಿಜಯಾರ್ಧಾದ್ರೀಂದ್ರದುದ್ದಾಮಸಾ
ನುತಳಂ ತದ್ವಿಭವಂ ತಳಾಮಳಕಮೆಂಬಾಸ್ಫೋಟದಿಂ ಬಂದು ದೂ
ರತರಾರ್ಘ್ಯೌಘಪರಾರ್ಧ್ಯರತ್ನನಿಚಯಾದ್ವಂದ್ವಂ ಮಹಾಪುಣ್ಯದಿಂ
ಕೃತಮಾಲಾಮರನಾಥನಂದೆಱಗಿದಂ ಶಾಂತೀಶಪಾದಾಬ್ಜದೊಳ್ ॥ ೧೬ ॥

ಎಱಗಿ ಕೃತಾಂಜಲಿಯಾಗಿ—

ಕ್ಷೋಣೀಶ ನೆಗೞ್ದ ಸಗ್ಗದ
ಮಾಣಿಕಚಟ್ಟರೊಳಮಮರಮಂಡಳಿಯೊಳಮಾ
ಮಾಣಿಕ್ಯದ ಬೆಲೆಯಿಡಲಾರ್
ಜಾಣರ್ ಬೞಿಯಟ್ಟು ಬೆಲೆಯನಾಗಿಪೊಡವರಿಂ ॥ ೧೭ ॥

ಎಂದೋಲಗಿಸಿದ ನವಮಣಿ
ಸಂದೋಹಮನೆೞ್ದಿ ಬಂದು ಗೃಹಪತಿ ಕೊಳೆ ದೇ
ವಂ ದಿವ್ಯಚಿತ್ತ್ರದಿಂ ತಾ
ಳ್ದಂ ದಿವಿಜನುಮಂದು ಚಕ್ರಿಗೊಲ್ದಾಳಾದಂ ॥ ೧೮ ॥

ಆಳಾಗಿ ವಿಪುಳರಾಜಿತ
ಶೈಳ ಗುಹಾಮುಖವಿಘಾಟನಾರಂಭಮುಮಂ
ಹೇಳಾಸಾಧ್ಯಮನಾಕೃತ
ಮಾಳಂ ಸೇನಾನಿ ನಿನ್ನದೆಂದಱಿಪುವುದುಂ ॥ ೧೯ ॥

ಅಱಿದೀಶಂ ಬೆಸವೇೞೆ ಸಿಂಧುವನವೇದೀದ್ವಾರದಿಂ ಪೋಗಿ ಸು
ತ್ತಿಱಿದೆತ್ತಂ ಬರೆ ತನ್ನವಶ್ವನಿಚಯಂ ರೂಪ್ಯಾದ್ರಿವೇದೀತಟಂ
ತೆಱದಿಂದಿಂಬಿನೊಡಂಬಡಂಬಡೆಯೆ ಬಂದದೇಱಿದಂ ತೇಜಮಂ
ಮೆಱೆಯುತ್ತುಂ ಜಗತೀತಳಂಬರಮಿಳೇಶಾನೀಕಿನೀನಾಯಕಂ ॥ ೨೦ ॥

ಅಂತು ವೇದಿಯ ಮೂಡಣ ದೆಸೆಯ ರತ್ನರಚಿತ ಸೋಪಾನಚಯಂಗಳಿಂ ಜಗತೀತಳಮನೇಱಿ ಮುನ್ನೆ ತನ್ನೊಡವಂದಶ್ವಬಲಮಂ ಪಶ್ಚಿಮಸೋಪಾನಪಙ್ಕ್ತಿಗಳಿಂದಮಪರ ಮ್ಲೇಚ್ಛಖಂಡ ಮಧ್ಯಮಗಾಮಿಯಾಗೆ ವಿಸ್ಫುಳಿಂಗ ವ್ಯಾಸಂಗಮಾಗದಂತತ್ತ ಪೋಗಲ್ವೇೞ್ದು ತಮಿಸ್ರಾಗುಹೋತ್ಸಂಗಮಂ ತಾನೊರ್ವನುಮೇಱಿ ತುರುಗರತ್ನಾಧಿರೂಢಂ ಪಡುವಣವೊಗದೆ ನಿಂದು ದ್ವಾದಶಯೋಜನಮುತ್ಸೇಧದ ವಜ್ರದ ಪಡಿಗಳಂ ಲಕ್ಷ್ಯಂಮಾಡಿ “ಸಕಳ ಚಕ್ರವರ್ತಿ ಗೆಲ್ಗೆಂ”ದು ದಂಡರತ್ನದಿಂದಮಿಡುವುದುಮಾ ಗುಹಾಮುಖ-ದ್ವಾರದಿಂ ಪುಟ್ಟದ ಗಂಭೀರಾರಾವದಿಂ ಕೀಲ್ ಕೞಲ್ದ ಜಂತ್ರದ ಪಡಿಗಳಂತೆ ತಮಿಸ್ರಾಗುಹಾದ್ವಾರದ ವಜ್ರದಪಡಿಗಳ್ ಭೋಂಕನೆ ತೆಱೆವುದುಂ—

ಅರರೀಪುಟ ಚೀತ್ಕಾರ
ಸ್ಫುರಿತಧ್ವನಿ ರಜತಶಿಖರಿ ಸೇನಾನಿಗೆ ಪ
ಲ್ಮೊರೆದಪುದೆನಿಸೆ ಗುಹಾಗ
ಹ್ವರದಿಂ ಪೊಣ್ಮಿದುದು ಘೂರ್ಣಿತಾರ್ಣವರವದಿಂ ॥ ೨೧ ॥

ಅಂತು ಕವಾಟಪುಟಂಗಳಶ್ರಮದೊಳ್ ಗವಾಕ್ಷಕವಾಟಂಗಳಂತೆ ತೆಱೆಯೆ ಮತ್ತಾ ಶ್ರಮದೊಳಲ್ಲಿಂದೊಳಗೊಗೆದ ನಿರ್ಘಾತತರ್ಜಿತವೇದಸ್ವಾದಮಂ ಮುಟ್ಟಲೀಯದೆ ಸೇನಾಪತಿರತ್ನಂ ತುರಂಗರತ್ನಮನವಯವದೊಳನಿಸಾನುಂ ಕಣ್ಕೆತ್ತಿದಂತೆ–

ಅಂಕಂಗುಡಲೊಡಮದು ನಿ
ಶ್ಶಂಕಂ ಪನ್ನೆರಡುಯೋಜನಂ ಪಾಱಿದುದ
ಭ್ಯಂಕಷ ಖರಖುರಧಾರಾ
ಟಂಕಾಹತಿ ಮುಗಿಲಮುರಿಗಳಂ ಕೆದಱುವಿನಂ ॥ ೨೨ ॥

ಅಂತಶ್ವರತ್ನದ ವಯಃಕ್ಷೇತ್ರಧ್ರುವಲಕ್ಷಣಂ ನಿರ್ವಿಶೇಷಂಗಳನೊಂದು ಮನಗಲದೆ ಕಾರುವವು ಸಹಸ್ರಂ ರಜತಾದ್ರಿಪ್ರಸ್ಥವೇದಿಕಾವಕಾಶಂಬಿಡಿದು ಸಿಂಧುವಿನ ಪಡುವಣದೆಸೆಯ ವನವೇದಿಕೆಯ ತೋರಣದ್ವಾರದಿಂದಮತ್ತ ಪಡುವಣ ಮ್ಲೇಚ್ಛಖಂಡಮಂ ಮೂವಳಸುಬಳಸಿ ಸಾಧಿಸಿ–

ಆಳರಸೆಂಬಿನಿತಂ ಮನ
ಮಾಳೋಚಿಸಲಱಿಯದವನಿಪಾಳರ್ ಧರಣೀ
ಪಾಳನ ಸೇನಾಪತಿಗಿರ
ದಾಳಾದರ್ ಕಟ್ಟುಪಟ್ಟ ವನಮದಕರಿವೋಲ್ ॥ ೨೩॥

ಅಂತು ಸ್ತ್ರೀಬಾಲಸಾಧ್ಯಮಾದ ಮ್ಲೇಚ್ಛಖಂಡದರಸುಗಳುಮನವರ ಕೊಟ್ಟಿಟ್ಟದ ಕುಲಧನ, ಜೀವಧನ, ಪರಿಕರಂಗಳುಂಬೆರಸು ಬಂದಾಸ್ಥಾನ ಮಂಡಳ ಮಧ್ಯದೊಳ್ ಇರ್ದ ಚಕ್ರವರ್ತಿಯ ಮಣಿಮಕುಟಂ ತನ್ನ ತಂದ–

ನೃಪರಂ ಚಕ್ರಿಪದಾಂಬುಜಕ್ಕೆಱಗವೇಟ್ಟಿರ್ದೀರತ್ನಮಿ ಹೇಮಮೀ
ದ್ವಿಪಮೀ ತುಂಗತುರಂಗಮಂಗಳಿವರಿತ್ತರ್ಥಂಗಳೆಂದೆಂದು ಬಿ
ನ್ನಪದಿಂ ಶ್ರೀಜಿನಚಂದ್ರನಂಘ್ರಿಯುಗಳಕ್ಕಾಳ್ಮಾಡಿ ತನ್ಮ್ಲೇಚ್ಛಭೂ
ಮಿಪರಂ ಮನ್ನಣೆಯಿಂ ವಿಸರ್ಜಿಸಿದನುರ್ವೀನಾಥಸೇನಾಧಿಪಂ ॥ ೨೪ ॥

ಅಭಿಘಾತಜ್ವರಮೌಷಧ
ನಿಭಿನ್ನಮುಪಶಮಿಸುವಂತಿರುಪಶಮಿಸಿದುದು
ತ್ರಭದಂಡನಿಹತಸಂಭೂ
ತ ಭೂರಿಪರಿತಾಪಮಾಱುತಿಂಗಳೊಳಗದಾ ॥ ೨೫ ॥

ಅಂತಱುದಿಂಗಳ್ವರಮಿರ್ದಾಱಿದ ತಮಿಸ್ರಗುಹಾದ್ವಾರದ ಬೆಂಕೆಯುಪಶಮಮನಱಿದು ಶುಭದಿನದೊಳುತ್ತರಭರತಮಂ ಗೆಲಲ್ ಪ್ರಯಾಣಭೇರಿಯಂ ಪೊಯ್ಸಿ ಚಕ್ರವರ್ತಿ ಪಟ್ಟವರ್ಧನಮನೇಱಿ ವಿಜಯಶಿಬಿರಮಂ ಪೊಱಮಟ್ಟು ತಮಿಸ್ರಗುಹಾದ್ವಾರದೊಳ್ ನಿಂದು ಮುಂದೆ ಬೀಡಂ ನಡೆಯಿಸಲೆಂದಿರೆ–

ಮುಂದೆ ತಮಸ್ತಮಂ ಪರೆಯೆ ಬಂದ ಚಮೂಪತಿ ಕಾಕಿಣೀಮಣಿ
ಸ್ಕಂಧನದಿಂದಮಿರ್ದೆಸೆಯ ಕೇರ್ಗಳೊಳಂ ಬರೆದೊಂದು ಕೇರೊಳಂ
ದಿಂದುವನೊಂದು ಕೇರೊಳಿನನಂ ಪಡೆಯಂ ನಡೆಯಲ್ಕೆವೇೞೆ ಭೋ
ರ್ಗೆಂದು ಗಭೀರನಾದದಿನದೇಂ ನಡೆಗೊಂಡುದೊ ಚಕ್ರವರ್ತಿಯಾ ॥ ೨೬ ॥

ಬೆಳಗಿದುದು ಚಕ್ರರತ್ನೋ
ಜ್ಜ್ವಳದೀಪಂ ಚರಣಮಂತರಿಕ್ಷದೊಳವನೀ
ತಳಪತಿ ತೇಜೋರವಿಮಂ
ಡಳಮೆಂಬ ಜನಪ್ರಣಾದಮಂ ಪೊಸಯಿಸುತುಂ ॥ ೨೭ ॥

ಅಂತು ದೀರ್ಘೋಚ್ಛೇದನಮುಂ ನಿರಾತಂಕಮುಮಾಗಿ–

ತುಂಗನೃಪಸೇನ ನಗದ ಮ
ನಂಗೊಳಲೆರ್ದೆವುಗುವ ತೆಱದಿನೊಳಪುಗೆ ರಿಪುರಾ
ಜ್ಯಾಂಗನೆ ವಿಜಯಕೆ ಮಚ್ಚಿ ಮ
ನಂಗೊಳ್ವಂತದ್ರಿರಾಜನದನೊಳಕೊಂಡಂ ॥ ೨೮ ॥

ಅಂತು ಮಣಿಮಯ ಸೋಪಾನಂಗಳೊಳಾದಮಿೞಿದಿರ್ವಗೆಯಾಗಿ ಸಿಂಧುನದಿಯೆರಡುಂ ತಡಿವಿಡಿದು ಯೋಜನದ್ವಯದಗಲದೊಳ್ ನಡೆದು

ಚಕ್ರವರ್ತಿ ಮೆಡೆಯೆಡೆಯೊಳ್ ಬರೆ ಗುಹಾಕುಡ್ಯಂಗಳೆರಡುಂ ದೆಸೆಯೊಳಮಿರ್ದೆರಡುಂ ಕುಂಡಂಗಳಿಂದಂ ಬಂದು ಸಿಂಧುನದೀಪ್ರವಾಹದೊಳ್ ಕೂಡೆ—

ಜನಿತಾಭ್ಯುದಯಂಗುನ್ಮ
ಗ್ನನಿಮಗ್ನ ಜಲಾಪಗಾಯುಗಂ ಗತಿಸಂರೋ
ಧನಮಾಗೆ ನಡೆವ ಪಡೆ ನಡೆ
ದು ನಿಂದುದು ನದೀತಟದ್ವಯೋರ್ವೀತಳದೊಳ್ ॥ ೨೯ ॥

ಅಂತು ಮೇಗಣ್ಣೊಗೆದುಮಡಿಗೆ ತೆಗೆದುಂ ಪವನವಶದಿಂ ಪರಿವ ಜಳಪ್ರವಾಹಂಗಳಿಂದಂ ವಿರುದ್ಧ ಸ್ರೋತಮಾದೆರಡುಂ ತೊಱೆಗಳುಮಂ ಸ್ಥಪತಿರತ್ನ ಪ್ರಯತ್ನ ನಿರ್ಮಿತಸೇತುಮಾರ್ಗಂಗಳೊಳ್ ಜಂಗಮಗಿರಿದುರ್ಗಂಬೆರಸು ನಡೆವಂತೆ ಕರಿಕರೇಣುಪರೀತಂ ಚಕ್ರವರ್ತಿ ನಡೆವುದುಂ ಆದಿತ್ಯನ ಬೞಿಯನುೞಿಯದ ದೀಧಿತಿನಿವಹದಂತೆ ಧರಣೀಶ್ವರನ ಬೆನ್ನನೆ ವಿಜಯಕಟಕಂ ಮುನ್ನಂ ನಡೆದು ಕೆಲವು ಪಯಣದಿಂದಮುತ್ತರಗುಹಾದ್ವಾರದಿಂ ಪೊಱಮಡುವಾಗಳ್—

ಮತ್ತೇಭಾಶ್ವಾದ್ಯಮಿತ ಬಳವತ್ಸೈನ್ಯಮಾ ದ್ವಾರದಿಂ ಬಂ
ದೆತ್ತಂ ಬಿಟ್ಟೊಕ್ಕಲವೊಲಿರೆ ಚಕ್ರೇಶ್ವರಂ ಬಂದೊಡಾತ್ಮಾ
ಯತ್ತಾನೀಕಂಗಳನವನಿಪಂಗಿತ್ತು ತೆತ್ತರ್ಥ ಶಾಸ್ತ್ರೋ
ದಾತ್ತಂ ದಂಡೋಪ[ನತ]ನೆನೆ ರೌಪ್ಯಾದ್ರಿ ಜಿಲ್ವಾದುದಾಗಳ್
॥ ೩೦ ॥

ಅಂತು ಗುಹಾದ್ವಾರದಿಂ ಪೊಱಮಟ್ಟಾ ವಿಜಯಕಟಕಂ ಬರ್ಪಲ್ಲಿ—

ಪರಮೇಶ್ವರ ದಿಗ್ವಿಜಯ
ಕ್ಕೆ ರಾಗದಿಂದುರಗರಾಜನದ್ರಿದರೀಗ
ಹ್ವರಮಂ ಪೊಱಮಡುವವೊಲಾ
ಗಿರಿಯಿಂ ಪೊರಮಡುವ ಸೈನ್ಯಮೊಪ್ಪಿದುದಿನಿಸುಂ ॥ ೩೧ ॥

ಅಂತು ಚಕ್ರವರ್ತಿ ಬಂದುತ್ತರಭರತಮಧ್ಯಮಖಂಡಕ್ಕಭಿಮುಖನಾಗಿ ಪಯಣಂ ಗೆಯ್ದಿರ್ಪುದುಂ—

ಚಿಳಾವರ್ತರ್ ಮತ್ತೇನ[ರಿ]ಗಭಿಮುಖರ್ ಮೇಘಮುಖರೊಳ್
ಮಿಳತ್ಕ್ಕಾರ್ಯಾಳೋಚರ್ ತಿಳಿದು ತಿಳಿನೀರಂತಪರಜರ್
ಬಳಾವಷ್ಟಂಭಂಗೆಟ್ಟಡಿಗೆಱಗಿ ಕಂಡರ್ ಪಿರಿಯನೊಳ್
ಬಳೋನ್ಮತ್ತಂ ದಲ್ ದುರ್ಬಳಮಿಭಹಯಾನೂನರಬಳಂ ॥ ೩೨ ॥

ಅಂತು ಕೈತವಮಿಲ್ಲದೆ ವಿಧೇಯತ್ವದ ತುದಿಯನೆಯ್ದಿ ಮಣಿಯೆಂಬ ಪಸುರ್ಮಣಿಯಂ, ತುರಂಗಮೆಂಬ ತುರಂಗಮುಮಂ, ಕರಿಯೆಂಬ ಸುಕರಿಯುಮಂ, ಪೊನ್ನೆಂಬ ಚಿನ್ನಮಂ, ಲಂಜಿಕೆಯೆಂಬ ಶಾಳಭಂಜಿಕೆಯುಮಂ ಉಱಯದಂತಿರೆ ತಂದುರ್ವರಾಸ್ಯತಿಲಕನಪ್ಪ ದೇವದೇವಂಗವಟೆಯ್ಸಿ ತತ್ಪರಮ ಪ್ರಸಾದ ನಿಷ್ಕ್ರಯಕ್ಕೆ ತಲೆಯೆಂದು ಪೂಣ್ದಾಳಾದರ್—

ವರಚರ್ಮರತ್ನಮುಂ ಛ
ತ್ರರತ್ನಮುಂ ತಮ್ಮ ತಮ್ಮ ಬೆಸಗಳನುಱದಿ
ರ್ಪಿರವಿಂದೆ ಜೀವರತ್ನಂ
ಸ್ಥಿರತ್ವಮನ್ವರ್ಥಮಾಗಿ ತಳರವೆ ನೆಲೆಯಿಂ ॥ ೩೩ ॥

ಇತ್ತ ಸೇನಾನಿಯುತ್ತರಭರತದ ಪಶ್ಚಿಮಖಂಡಮಂ ಬಾಯ್ಕೇಳಿಸಿ ಬಂದು ವಿಜಯಕಟಕಂ ಬಿಡಿದು ತುಹಿನಾಚಳ ಸಿಂಧೂಪಾಂತದೊಳ್ ಬಿಟ್ಟರೆ—

ಭದ್ರಾಸನಮಂ ಭುಜವಿಜ
ಯ ದ್ರವಿಣಂಗವನಿಪತಿಗೆ ಕೊಟ್ಟೆಱಗೆ ಯಶೋ
ಭದ್ರೈಕತಿರಸ್ಕೃತ ತುಹಿ
ನಾದ್ರಿ ಜಗದ್ಬಂಧು ಸಿಂಧುದೇವಿಯೆನರಸಂ ॥ ೩೪ ॥

ಪೋಗವೇೞ್ದು ಪ್ರಸನ್ನ ಕತಿಪಯ ಪ್ರಯಾಣಂಗಳಿಂ ಪ್ರಾಳೇಯಾಚಳ ಮಧ್ಯಮಕೂಟಮನೆಯ್ದೆವರ್ಪುದುಂ—

ಹಿಮವನ್ನಿವಾಸಿ ಹಿಮವ
ತ್ಕುಮಾರನಾ ಚಕ್ರವರ್ತಿಯಡಿಗೆಱಗೆ ನೃಪೋ
ತ್ತಮನ ಗೃಹಪತಿಗೆ ರತ್ನ
ಪ್ರಯಾಣ ಗಣಿಕೆಯರ ಬೆಸನೆ ಬೆಸನಾಯ್ತಾಗಳ್ ‖ ೩೫ ‖

ಎನೆ ಸಾರವಸ್ತುಗಳಿನೋಲಗಿಸಿ ಚಕ್ರವರ್ತಿಯ ಪರಮಾನುಗ್ರಹಾಮೃತ ಮನಸ್ವಾದಿಸಿ ಪೋಗೆ ಷಟ್ಖಂಡಭೂವಲ್ಲಭನುಂ ಹಿಮವತ್ತಟಂ ಬಿಡಿದು ಮೂಡವೊಗದೆ ಪಯಣಂಬಂದು [ಹೈಮಾದ್ರಿಯಂ ನೋಡಿ] ಹಿಮವತ್ಕುಕ್ಷೀಲದಿಂದೆ ಸೈತು ತೆಂಕಣವೊಗದೆ ಪಯಣಂಬಂದು ಮೊದಲೊಳ್ ನೂಱು ಯೋಜನದಗಲಮುಮನಿತುತ್ಸೇಧಮುಂ ಮೇಗಯ್ವತ್ತು ಯೋಜನ ವಿಸ್ತಾರಮುಮಯ್ವತ್ತು ಯೋಜನಮಾಟಿಕ್ಕೆಯುಮನವಗಯಿಸ್ಸಿ—

ಇತ್ತುತ್ತರಭರತಮನಾ
ಳುತ್ತಿರ್ದರನೇಕ ಚಕ್ರವರ್ತಿಗಳ ಪೆಸರ್
ಸುತ್ತಿ ಬರೆದಿರೆ ನಿಬಂಧದ
ಹೊತ್ತಗೆಯೆಂಬಂತಿರಿರ್ದ ವೃಷಭಾಚಲಮಂ ‖ ೩೬ ‖

ಕಂಡು ತದುಪಕಂಠದೊಳ್ ಬೀಡಂ ಬಿಡಿಸಿ ಚಕ್ರಾಯುಧಪ್ರಭೃತಿಗಳುಪರೋಧದಿಂ ತದ್ಗಿರಿಗೆ ನಾಮಾಕ್ಷರ ನಿಕ್ಷೇಪನಿಮಿತ್ತಂ ಪೋಗಿ ನೋಟ್ಪಿನ್ನೆಗಂ—

ಆ ನಗದೊಳ್ ವ್ಯತೀತ ಬಹುಚಕ್ರಿ ಗುಣಾನ್ವಯ ತತ್ಪ್ರತಾಪ ಸಂ
ತಾನಲಿಪಿಪ್ರಪಂಚವಚನಾಳಿಯನೋಳಿಯೆ ಕೇಳ್ದುಕೇಳ್ದು ವಿ
ಶ್ವಾನತಪಾದನಪ್ಪುದಱಿನಾತ್ಮಗುಣಸ್ತುತಿ ಸಿಗ್ಗನೀಯೆ ಲ
ಜ್ಜಾನತಮಾದುದುನ್ನತ ಶಿರೋಮಣಿ ಪಂಚಮಚಕ್ರವರ್ತಿಯಾ ‖ ೩೭ ‖

ಅಂತು ವಾಳಾಗ್ರಕ್ಕಮವಕಾಶಮಿಲ್ಲದಂತು ಕಿಕ್ಕಿಱಿಗಿಱಿದಿರ್ದ ಪುರಾತನ ಚಕ್ರವರ್ತಿಗಳ ನಾಮಾಂಕಮಾಳಿಕೆಯಂ ಕಂಡಱಿದು ಮಂತ್ರಿವರ್ಗಮನಱಿಪಲೆಂದು ಬಂದನಪ್ಪುದಱಿಂದಂ—

ಮುಂ ಬರೆದಭಿಧಾನಮನಟ್
ದಿಂ ಬರೆವಹಮಿಕೆಯ ಪೆಸರೊಳೇವಂದಪುದೇ
ನುಂ ಬೇಡ ಬನ್ನಿಮೆಂದಧಿ
ಪಂ ಬೀಡಂ ಬಂದು ಪೊಕ್ಕು ಸುಖದಿಂದಿರ್ದಂ ॥ ೩೮ ॥

ಮಂತ್ರಿಮುಖ್ಯರುಂ ಪುರಾತನಚಕ್ರವರ್ತಿಪ್ರವರ್ತಿತಮಾರ್ಗಮಿದೆಂದು ಕಾಕಿಣೀರತ್ನದಿಂದಲ್ಲಿ ಮುನ್ನಿರ್ದೊಂದು ಪ್ರಶಸ್ತಿಯಂ ಪರಾಮೃಷ್ಟಂ ಮಾಡಿ [ಸೌಜನ್ಯಕಂದಾಂಕುರನ ವಿಜಯ ಪ್ರಶಸ್ತಿಯಂ] ಬರೆಯಿಸಿ, ಮಂತ್ರಿ ಮುಖ್ಯರುಂ ಚಕ್ರಾಯುಧಂಬೆರಸು ವಿಜಯಕಟಕಮಂ ಪೊಕ್ಕು ಮಱುದೆವಸಂ ಪಯಣಂಬೋಗಿ ವಿಜಯಾರ್ಧಪರ್ವತದ ಕಾಂಡಕಪ್ರಪಾತಗುಹೆಗಭಿಮುಖ ನಾಗಿ ಬೀಡಂಬಿಟ್ಟು ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂ ಗೆಯ್ದುದಱ ಬೆಂಕೆಯಾಱುವನ್ನೆಗಂ ಮೂಡಣ ಮ್ಲೇಚ್ಛಖಂಡಮಂ ಧಂಡನಾ ಯಕಂ ಬಾಯ್ಕೇಳಿಸಿ ತಂದಾ ಮ್ಲೇಚ್ಛರಾಜರಂ ಕಾಣಿಸಿಯುಮಾಳ್ತನಮಂ ಪೂಣಿಸಿಯುಂ ಚಕ್ರವರ್ತಿಗೆ ಸರ್ವಸ್ವಮಂ ಕುಡಿಸಿಯುಮವರಂ ದಾನಸನ್ಮಾನ ದೊಳ್ ಸಂತಸಂಬಡಿಸಿಯುಮಿರ್ಪನ್ನೆಗಂ—

ಉಭಯಶ್ರೇಣಿಯ ಖೇಚರ
ವಿಭುಗಳ್ ನಮಿವಿನಮಿವಂಶಸಂಭವರರಸಂ
ಗಿಭ ಹೇಮ ತುರಗ ಗಣಿಕಾ
ಪ್ರಭೂತತರಮಪ್ಪ ಕಪ್ಪಮಂ ಪಲರಿತ್ತರ್ ॥ ೩೯ ॥

ಮತ್ತಂ—

ತನು ಮೃದು ಕುಚಂ ಸ್ತಬ್ಧಂ ಶೀಲಂ ಕರಂ ರುಜು ಪುಷ್ಪಕೇ
ತವನಿಭಕಚೋದ್ಬಂಧಂ ನೇತ್ರೋತ್ಪಳಂ ಚಪಳಂ ಸ್ಥಿರಂ
ಮನಮಸದೃಶಂ ಯತ್ನಂ ಸ್ತ್ರೀರತ್ನದೊಳ್ ಮಿಗಿಲೆಂಬ ಪೆಂ
ಪಿನ ತನುಜೆಯಂ ಕೊಟ್ಟಂ ಶಾಂತೀಶ್ವರಂಗೆ ನಭಶ್ಚರಂ ॥ ೪೦ ॥

ಅಂತಾ ಸ್ತ್ರೀರತ್ನಮಂ ಕೊಟ್ಟು ವಿದ್ಯಾಧರರಧಿರಾಜನೊಳ್ ನಂಟರು ಮಾದರ್—

ಗಂಗಾದೇವಿಯುಮಲ್ಲಿ ಲ
ತಾಂಗಿ ಜಗತ್ಪತಿಗನರ್ಘ್ಯ ಭೂಷಣ ಮದಮಾ
ತಂಗವನಾಯುಜಹಯನಿಕ
ರಂಗಳನವಟೆಯಿಸಿ ವಿನಯದಿಂ ಬೀಟ್ಕೊಂಡಳ್ ॥ ೪೧ ॥

ಅನಂತರಮಱುದಿಂಗಳಾಱೀದ ಕಾಂಡಕಪ್ರಪಾತಗುಹಾದ್ವಾರಮಂ ಪೊಕ್ಕು ಕಾಕಿಣೀಮಣಿರತ್ನೋತ್ಕೀರ್ಣ ಚಂದ್ರಾದಿತ್ಯದ್ಯೋತದೊಳಮನೇಕ ಮಕುಟಬದ್ಧ ಕಿರೀಟ ಚೂಡಾಮಣಿಗಣಮಯೂಖಮಂಜರೀ ಪ್ರಭಾಪಟಳ ದೊಳಂ, ಮುಂದೆ ನಡೆವ ರಥಾಂಗರತ್ನದ ಬೆಡಗಿನೊಳಂ ಚಕ್ರವರ್ತಿಯ ಪಡೆ ಗಂಗಾನದ್ಯುಭಯತೀರಂಗಳೊಳ್ ಪಚ್ಚು ಪರಿಕಲಿಸಿ ನಡೆದು ಕೆಲವು ದಿನಂಗಳಿಂ ದಕ್ಷಿಣಗುಹಾದ್ವಾರಮನೆಯ್ದೆ ತತ್ಪ್ರದೇಶನಿವಾಸಿ ನಾಟ್ಯಮಾಲಾಮರಂ ಮಂಗ ಳೋಪಕರಣಂಗಳಿಂದಮಿದಿರ್ಗೊಂಡೆಱಗಿ ಪೊಡೆವಟ್ಟು ನಿಜ ಸಂಚಿತಾಂಚಿತ ವಸ್ತುಗಳಂ ತಂದು ಮುಂದಿಡೆ ಕೊಂಡು ರಥಾಂಗಾಯುಧಂ ದಕ್ಷಿಣಗುಹಾ ದ್ವಾರದಿಂ ಪೊಱಮಟ್ಟು ಬರೆ, ಪ್ರಾಚ್ಯಮ್ಲೇಚ್ಛಖಂಡಮಂ ದಂಡನಾಯಕ ನುಂಡಿಗೆ ಸಾಧ್ಯಂ ಮಾಡಿ ಪೆಱಗಣಿಂ ಕೂಡೆವಂದು ತನ್ನೊಡವಂದ ಮ್ಲೇಚ್ಛ ರಾಜರಂ ರಾಜರಾಜಾನುಜೀವಾನುವೃತ್ತದಿಂ ಕೃತಾರ್ಥಮ್ಮಾಡಿ ತತ್ಸಮಸ್ತ ವಸ್ತುವಂ ಭಂಡಾರಪ್ರವೇಶಂಗೆಯ್ವುದುಂ, ಕುರುವಂಶವಿಶೇಷಕಂ [ನಿಚ್ಚ ವಯಣಂಗಳೊಳ್]

ಅಂತಖಿಳಾವನೀತಳಮನಾ ಪರಮೇಶ್ವರನೇಕಭೋಗ್ಯಮ
ಪ್ಪಂತು ನಿಮಿರ್ಚಿ ಹಸ್ತಿನಪುರಾಭಿಮುಖಂ ನಡೆದಂ ಸಮಸ್ತ ಸಾ
ಮಂತಕಿರೀಟಕೋಟಿಗಳೊಳಾತಪವಾರಣಶೂನ್ಯದೈನ್ಯವಿ
ಶ್ರಾಂತಪದಂಗಳೊಳ್ ನೆಲಸೆ ಸೈನ್ಯ ರಜೋರುಣಕಾಂತಿರಾಜಿಗಳ್
॥ ೪೨ ॥

ಅಂತು ಬಂದು ನಿಜಕುಲರಾಜಧಾನಿಯ ಸಮೀಪದೊಳ್ ಪುಣ್ಯಬೀಜದ ಬೆಳಸೊಟ್ಟ ಬೆಟ್ಟಾದಂತೆ ಬಿಟ್ಟಿರ್ದು [ಸುಲಗ್ನದೊಳ್] ಪೊಟಿಲಂ ಪೊಕ್ಕು ರಾಜಮಾರ್ಗದೊಳಗಣಿಂ ಬಂದು [ನಿಜಮಂದಿರಮಂ ಪೊಕ್ಕು] ಮಕುಟಬದ್ಧ

ಪರಿವೃತಂ ಕರುಮಾಡದೊಳ್ ಮುನ್ನಂ ಪಸೆವರಿಸಿದ ಮೃಗಾಧಿರಾಜವಿಷ್ಟರ ದೊಳ್ ಕುಳ್ಳಿರ್ದು ಕಿಱಿದಾನುಂ ಬೇಗದಿಂ ಯಥೋಚಿತಸಂಭಾವನೆಯಿಂ ರಾಜನ್ಯಕಮಂ ಬೀಡಿಂಗೆ ವಿಸರ್ಜಿಸಿ ಸುಖದಿನಿರ್ದು ಕತಿಪಯದಿನಂಗಳಿಂ—

ಅಪರಾಂಬೋಧಿಪರೀತ ಭೂತಳ ಜಯಕ್ಲೇಶಾಗ ತಾನೇಕ ಭೂ
ಮಿಪರಂ ನಾಟ್ಯಧಿಪಂ ವಿಸರ್ಜಿಸಿ ಜಗಂ ತನ್ನಿಟ್ಟ ಕಲ್ಪೋದ್ಯದಂ
ಘ್ರಿಪಮೆಂತಂತೆ ಫಲಾವನಮ್ರವಿಧಿಯಿಂದೊಪ್ಪಿರ್ಪಿನಂ ಕಾಲಮು
ಗ್ಲಪಿತಂ ಸಂದುದು ಬೇಗಮೊಂದುದೆವಸಂ ಸಲ್ವಂತು ವಿದ್ಯಾತ್ಮಕಂ
॥ ೪೩ ॥

ಉರ್ವರಾಸ್ಯತಿಲಕನಪ್ಪ ಸಕಳಚಕ್ರವರ್ತಿ ಸಕಳಸಾಮ್ರಾಜ್ಯಶ್ರೀಯಂ ಪಿರಿದುಮಾಶ್ಚರ್ಯದಿಂದಂ ಪಿರಿಯರಪ್ಪವರ್ ಪೊಗೞೆ—

ಕೆಯ್ಯಾರ್ದಂತಾರ್ತಿತ್ತವ
ಗಯ್ಸಿದ ಸುಖಸಂಕಥಾವಿನೋದದಿನಿಪ್ಪ
ತ್ತಯ್ಸಾಸಿರವರ್ಷಂ ಸಿರಿ
ಮೆಯ್ಯೊಗಮಂ ಚಕ್ರವರ್ತಿಯೊಳ್ ಭೋಗಿಸಿದಳ್ ॥ ೪೪ ॥

ಅಂತಿಪ್ಪತ್ತಯ್ಸಾಸಿರವರ್ಷಂ ಚಕ್ರವರ್ತಿಯ ಕಾಲಮುಂ[ತೊಂದು ದೆವಸಂ] ಸಲ್ವಂತು ಸುಖದಿಂದನುಪಲಕ್ಷಿತರೂಪದಿಂ ಸಲೆ ಬೞಿಯಂ ಮತ್ತೊಂದು ದೆವಸಂ ಯಾಮಿನೀತ್ರಯಯಾಮ ವಿರಾಮದೊಳ್ ನಿಸರ್ಗ ನಿರ್ಗತನಿದ್ರಾನುಗಮನನವರತಾಳಂಬಿತ ಪ್ರಶಸ್ತ ಪರಿಣಾಮನಪ್ಪುದಱಿಂ ಶಾಂತೀಶ್ವರನಾತ್ಮಗತಂ—

ಕೈಕೊಳ್ವೊಡಾತ್ಮ ಸುಖಮನೆ
ಕೈಕೊಳ್ವುದು ದೇಹಿ ನೆಗೞೆ ಪರಹಿತಮುಮನೀ
ಹೈಕಸೆರಡರೊಳಮೊಂದಂ
ಕೈಕೊಳ್ವೊಡೆ ಹಿತಮುಮಾತ್ಮಹಿತಮೊಂದೆ ವಲಂ ॥ ೪೫ ॥

ಆದಲ್ಲದೆಯುಂ—

ಧರೆ ಶಾಶ್ವತಮಲ್ತಷ್ಟಮ
ಧರೆ ಶಾಶ್ವತಮವನಿಚಕ್ರ ವಿಕ್ರಮಚಕ್ರಂ
ದೊರೆಯಲ್ತು ಧರ್ಮಚಕ್ರಂ
ದೊರೆಯಕ್ಕುಂ ಭವ್ಯವಿನಮದಪ್ರತಿಬದ್ಧಂ ॥ ೪೬ ॥

ಈ ಪದಿನಾಲ್ಕುಂ ರತ್ನಕ
ಲಾಪಂ ರತ್ನತ್ರಯಕ್ಕೆ ಬರ್ಕುಮೆ ಭೂಪಾ
ಟೋಪಂ ಬರ್ಕುಮೆ ವೃಜಿನವಿ
ಲೋಪಿಜಿನೇಂದ್ರ ಪ್ರಶಾಂತಿಯೊರೆಗಂ ದೊರೆಗಂ ॥ ೪೭ ॥

ಸ್ತ್ರೀರತ್ನದೆಡೆಗೆ ಮುಕ್ತಿ
ಸ್ತ್ರೀರತ್ನಂ ಸಭೆಗೆ ದೇವಮಾನವ ಸಭೆ ಗಂ
ಭೀರೋಕ್ತಿಗೆ ದಿವ್ಯಧ್ವನಿ
ಸಾರಮವಂ ಬಿಸುಟನಪ್ಪೊಡುಱುಮಾಜಲ್ತೇ ॥ ೪೮ ॥

ಅದಱಿಂದಮಲ್ಪಮುಮನಿತ್ಯಮುಮಪ್ಪಾ ಜವಂಜವಾಂತರ್ವರ್ತಿಗಳೆ ಪಲರುಮಾಸನ್ನ ಭವ್ಯತಾವ್ಯಪೇತರವ್ಯವಸಾಯಪರರಾಗಿ—

ಶಿವಸುಖಮನಱಿಯದೀ ಮಾ
ನವಸುಖದ ನಿಮಿತ್ತದಿಂ ತಪಂಗೆಯ್ವವರೊ
ಪ್ಪುವ ಮಾಣಿಕಮಂ ತೌಡಿಂ
ಗವಯವದಿಂ ಮಾಱುಗುಡುವ ಮರುಳಂ ಪೋಲ್ಗುಂ ॥ ೪೯ ॥

ಇಂತೆಂದು ವಿಸ್ತರರೂಪದೊಳ್ ಸಂಸಾರತದ್ಧೇತುಬಂಧ ತನ್ನಿಮಿತ್ತ ಮೋಕ್ಷತತ್ಕಾರಣಪ್ರಪಂಚಮಂ ದಿವ್ಯಚಿತ್ತದೊಳ್ ಪರಮಾರ್ಥಂಗೆಯ್ದು ಪರಿನಿಷ್ಕ್ರಮಣ ಕಲ್ಯಾಣಾಭಿಮುಖನಾಗಿರ್ದ ಚಕ್ರವರ್ತಿಯ ಬಗೆಯನಱಿದು-

ಮಕುಟಾಗ್ರಸ್ಥಿತಜೈನಬಿಂಬವಿಹಟಚ್ಚೂಡಾಮಣಿವ್ರಾತರಿಂ
ಪ್ರಕದಂಬ ಪ್ರತಿಬೋಧಕರ್ ಜಿನಸಮಾಳೋಚಿತ್ಯ ಕರ್ತೃತ್ವ ಭಾ
ವಕರಾ ದೇವನ ಚಿತ್ತವಾರ್ಧಿಗಮೃತಂ ಬರ್ಪಂದದಿಂ ಸಂತತಾಂ
ತಿಕಸಂವಾಸಿಗಳಂತೆ ತಮ್ಮ ನೆಲೆಯಿಂ ಲೋಕಾಂತಿಗರ್ ಬರ್ಪುದುಂ ॥ ೫೦ ॥

ದ್ವಾರಪಾಲಕರರಸಂಗವರ ಬರವನಱಿಪಿ ಬಂದು ಕಾಣಿಸೆ ಲೋಕಾಂತಿಕ ದೇವರವನೀಶ್ವರಪಾದಪ್ರಣತರಾಗಿ—

ಪಂಚಮರಥಾಂಗಪಾಣಿಗೆ
ಪಂಚಮಕಲ್ಪಪ್ರಧಾನರಮೃತಾಯತಮಾ
ದಿಂಚರದಿಂ ಬಿನ್ನವಿಸಿದ
ರಂಚಿತದಶನಾಂಶು ಸೆಣಸೆ ಮಣಿದೀಪಿಕೆಯೊಳ್ ॥ ೫೧ ॥

ಇಭವಿದ್ವೇಷಿಗೆ ವಿಕ್ರಮಂ ಪರಿದಳನ್ಮಂದಾರಪುಷ್ಪಕ್ಕೆ ಸೌ
ರಭಮರ್ಕಂಗೆ ಬಿಸಿಲ್ ಹಿಮಾಂಶುಗೆ ಹಿಮಂ ವೈಶ್ವಾನರಂಗುಷ್ಣ [ವ]
ತ್ಪ್ರಭೆ ನೀರ್ಗಾರ್ದ್ರತೆ ಮುಳ್ಗೆ ಚೂರ್ಣನೆ ಭವಚ್ಚಿತ್ತಕ್ಕೆ ತತ್ವಜ್ಞತಾ
ವಿಭವಂ ಸಾಜಮದಂ ನಿಯೋಜಿಸುವೆ ನಾನೆಂಬಂ ಮರುಳ್ಗೊಂಡನೇ ॥ ೫೨ ॥

ಅದಲ್ಲದೆಯುಂ ನಿನಗೊರ್ಮೆ ಶಾಂತತೆಯುಂ ಮತ್ತೊರ್ಮೆ ಸಮಾವಿಳತೆ ಯುಮೆಂಬ ಮಾತುಗಳ್ ಛಾಯಾತಪ ವಿರೋಧವಿದ್ಧಂಗಳೆಂತೆನೆ—

ಮಳರಹಿತನೊರ್ಮೆ ವಿಳಸ
ನ್ಮಳನೊರ್ಮೆ ಪೆಱಿಂ ಸದಾಚ್ಛನೈ ನೀಂ ಬೇಗಂ
ತಿಳಿವುದುಮಾ ಕದಡುವುದುಂ
ಕುಳುಂಪೆಯೊಳ್ ನೆಗಳ್ಗುಮುದಧಿಯೊಳ್ ನೆಗಟ್ದಪುದೇ ॥ ೫೩ ॥

ನೀರಜದ ರಜದ ಪೊರೆಪಾ
ನೀರೇಜದ ನೀರ ಪೊರೆಪು ಪೊರೆವೊರೆನೀಂ [ಸಂ]
ಸಾರಕ್ಕೆ ನಿನಗಮಿಾ ಸಂ
ಸಾರಂ ಪೊರೆವೊರೆ ಪರಾತ್ಮಹಿತನುತಚರಿತಾ ॥ ೫೪ ॥

ಸ್ಥಿತಭೌವ್ಮೋತ್ತರದೇಯು
ಸ್ಥಿತಿ ಬೆಸದೊಳ್ ಗರ್ಭಸಂಭವಕ್ಕಭಿಮತದು
ನ್ನತ ದಿವ್ಯಸಂಭವರ್ಗನು
ಚಿತಮೆಂಬಂತೀಶ ನಿಮಗೆ ಪೆಱರುಪದೇಶಂ ॥ ೫೫ ॥

ಅಂತು ಪರಮೇಶ್ವರನ ಬಗೆಯಂ ನುಡಿಯೊಳಭಿನಯಿಸುವಂತೆ ನುಡಿದು ಸಾರಸ್ವತಾದಿಗಳಧೀಶ್ವರಂಗೆಱಗಿ—

ಅಯ್ದನೆಯ ಗತಿಯನಚರನ
ನೆಯ್ದಿಪ ಬಗೆ ಕಡೆಯನೆಯ್ದೆ ಲೋಕಾಂತಿಕರಂ
ತಯ್ದನೆಯ ನಾಕಲೋಕಮ
ನೆಯ್ದಿದರಯ್ದನೆಯ ಚಕ್ರವರ್ತಿಯುಮಾಗಳ್ ॥ ೫೬ ॥

ತಪಶ್ಚರಣ ನಿಶ್ಚಿತಮನನಾಗಿ—

ಪರಿಷ್ಕ್ರಮಣಶ್ವಸನಂ
ತರೆ ನಾಲ್ಕುಂತೆಱದ ದಿವಿಖಜೀಮೂತಕುಳಂ
ಬರೆ ಕೇರಿಲ್ಲದ ಚಿತ್ರದ
ವಿರಚನೆಯಂ ಪೋಲ್ತುದಮಳಜಳಧರಮಾರ್ಗಂ ॥ ೫೭ ॥

ಅಂತು ಪ್ರಥಮನಾಕನಾಯಕಪ್ರಗ್ರಹಾಮರರ್ ಬಂದು ಷೋಡಶ-ತೀರ್ಥಂಕರ ಪಾದಪಯೋಜಂಗಳ್ಗವನತಮಣಿಮಕುಟರಾಗಿ ಪರಿಚಾರಕಕೃತ್ಯದೊಳ್ ನೆಗೞೆ ಮಂಗಳಪ್ರಸಾಧನ ಸನಾಥನುಂ, ವಿನೀತನುಮವಶ್ಯಸರಸನುಮಪ್ಪ ನಾರಾಯಣನೆಂಬ ಪಿರಿಯಮಗಂಗೆ ರಾಜ್ಯಭಾರಮಂ ದಯೆಗೆಯ್ದು ಬಂದು ಸಿವಿಗೆಯನೇಱೆ—

ಅದಂ ಮೊದಲೊಳೆತ್ತಿ ಪೊತ್ತು ನಡೆದರ್ ಮಹೀನಾಥರ
ತ್ತುದಾತ್ತ ಖಚರೇಂದ್ರರಭ್ರಪಥದೊಳ್ [ವಲಂ] ಪೊತ್ತರ
ತ್ತುದಗ್ರರಮರೇಂದ್ರರುಯ್ದರಮರಾಂಗನಾ·ನರ್ತನಾ
ಸ್ಪದಂ ಗಗನರಂಗಮೊಪ್ಪಿನೆಗವೊಪ್ಪೆ ಪುಣ್ಯೋತ್ಸವಂ ॥ ೫೮ ॥

ಅಂತು ತ್ರೈಲೋಕ್ಯ ಕ್ಷೋಭಕಾರಿಯಾದೊಸಗೆಯೊಳ್—

ವೈಣ ರಸೋತ್ತರಾ ರವಮಯಂ ಭವನಂ ಸುರದುಂದುಭಿಧ್ವನಿ
ಶ್ರೇಣಿಮಯಂ ಪುರಂ ಕುಸುಮವೃಷ್ಟಿಮಯಂ ನಭಮಿಂದ್ರಸರ್ವಗೀ
ರ್ವಾಣಮಯಂ ಮಹೀವಳಯಮಾಗೆ ಮಹಾಮಹಮಾ ತೃತೀಯ ಕ
ಲ್ಯಾಣದೊಳಾಯ್ತು ನಿಷ್ಕ್ರಮಣದಿಂ ಭುವನತ್ರಯಚಕ್ರವರ್ತಿಯಾ ॥ ೫೯ ॥

ಅಂತು ಪರಾರ್ಧ್ಯ ಶಿಬಿಕಾರೂಢಂ ಶಾಂತೀಶ್ವರಂ ಗಗನಗಮನದಿಂ ಸಹ ಸ್ರಾಮ್ರವನಂಬರಂ ಬರೆ ದೇವದೇವನ ಮನಮನಱಿದು ದೇವರಲ್ಲಿ ಸಿವಿಗೆಯನಿೞಿಪಲೆಂದಭಿಮುಖರಪ್ಪುದುಂ—

ಆಕಾಶಗಂಗೆ ಧರೆಗಿೞಿ
ವಾಕಾರದಿನೊಯ್ಯನೊಯ್ಯನವತರಿಸೆ ಸುರಾ
ನೀಕಂ ಸಹಕಾರವನ
ಶ್ರೀ ಕಣ್ಗೊಪ್ಪಿದುದು ಜಿನವಸಂತಾಗಮದೊಳ್ ॥ ೬೦ ॥

ಅಲ್ಲಿ ಸೌಧರ್ಮೇಂದ್ರಂ ನಂದಿದ್ರುಮದೊಳ್ ಮಣಿಮಯ ಶಿಬಿಕಾಯಾನಮನಿೞಿಪುವುದುಂ ತ್ರೈಲೋಕ್ಯಶೇಖರಂ ಸಿವಿಗೆಯಿಂದಮಿೞಿದಪಸಾರಿತ ವಸ್ತ್ರಾಭರಣನಾಗೆ—

ಮಣಿಭೂಷಣ ದಿವ್ಯಾಂಬರ
ಗಣಂಗಳಂ ತಣಿಯೆ ಕೊಟ್ಟು ದಿವಿಜಗಣಕ್ಕು
ಲ್ಬಣತೆಯನುೞಿದೊಪ್ಪಿದ ಭೂ
ಷಣಾಂಗವೃಕ್ಷಮನೆ ಭುವನಪತಿ ತಾಂ ಗೆಲ್ದಂ ॥ ೬೧ ॥

ಅಂತುತ್ತರಾಭಿಮುಖನಾಗಿ ಪಲ್ಯಂಕಾಸನದೊಳ್ ಕುಳ್ಳಿರ್ದು—

ಶುದ್ಧಮನೋವೃತ್ತಿ ನಮ
ಸ್ಸಿದ್ಧೇಭ್ಯ ಎನುತ್ತೆ ಪಂಚಮುಷ್ಟಿಯಿನಘ ಮೂ
ಲೋದ್ಧರಣಂಗೆಯ್ವವೊಲಪ
ರುದ್ಧಾಸ್ರವನಾತ್ಮಕೇಶತತಿಯಂ ಪಱಿದಂ ॥ ೬೨ ॥

ಅಂತು ಪಱಿದುಬಿಸುಟ ಹರಿನೀಳಮದಾಳಿಕಳಭಕುಳಮಸೃಣಕುಟಿಳ ಸಹಸ್ರಕುಂತಳಂಗಳಂ ವಜ್ರದ ಪಡಲಿಗೆಗಳೊಳಾಂತುಕೊಂಡು—

ಅಮರೇಶ್ವರರುಯ್ದು ತದು
ತ್ತಮಕೇಶಮನಿಕ್ಕೆ ನೀಲಮಣಿಶಬಳಿತ ವಿ
ಭ್ರಮಮಂ ಪಡೆದುವು ಪಂಚಮ
ಸಮುದ್ರವಿದ್ರುಮಲತಾಪ್ರತಾನಾವಳಿಗಳ್ ‖ ೬೩ ‖

ಅಂತು ಜ್ಯೇಷ್ಠಮಾಸದ ಸಿತಚತುರ್ದಶಿಯೊಳ್ ಭರಣೀನಕ್ಷತ್ರದೊಳಪ ರಾಹ್ಣದೊಳ್ ಪರಮದೀಕ್ಷೆಯಂ ಕೆಯ್ಕೊಳ್ವುದುಮಿಂದ್ರಪ್ರಧಾನರಮರ ನಿಕು ರುಂಬಂ ಪರಿನಿಷ್ಕ್ರಮಣಕಲ್ಯಾಣಪೂಜೋತ್ಸವಾನಂತರಂ ಪ್ರದಕ್ಷಿಣಪೂರ್ವಕಂ ಜಿನನಾಥಂಗೆಱಗಿ ನಿಜನಿವಾಸಂಗಳ್ಗೆ ಪರೆದು ಪೋಪುದುಮಾಮುನೀಂದ್ರೋ ತ್ತಮಂ ತ್ರಿರಾತ್ರಂ ದೀಕ್ಷೋಪವಾಸಂಗೆಯ್ದು ಲಬ್ಧಸಪ್ತರ್ದಿ ಭೂಷಣಂ ಮನಃ ಪರ್ಯಯಜ್ಞಾನಪ್ರತಿಬಿಂಬದರ್ಪಣನಾಗಿ ಚರ್ಯಾಮಾರ್ಗಮನಱಿಪಲೆಂದು ಅನಗಾರವೇಳೆಯೊಳ್ ಮಾದಿರಾಭಿಧಾನಪುರಕ್ಕೆ ಚರಿಗೆಗೆವರೆ ತತ್ಪುರಾಧೀಶಂ ಸುಮಿತ್ರಂ ಶ್ರದ್ಧಾದಿಸಪ್ತಗುಣಸಮನ್ವಿತಂ, ನವವಿಧ ಪುಣ್ಯಪಣ್ಯಂ ನಿಲಿಸಿ ಪವಿತ್ರಾಹಾರದಾನಮನೀವುದುಮಾತನ ಮನೆಯೊಳ್ ಪಂಚಾಶ್ಚರ್ಯಂಗಳ್ ನೆಗಟ್ದು ತದನಂತರಂ ಶಾಂತಿಭಟ್ಟಾರಕರ್ ಸಹಸ್ರಾಮ್ರವಣಕ್ಕೆ ಬಂದುತ್ತರೋ ತ್ತರಸ್ಥಿತಿಯಿಂ ಯೋಗನಿಯೋಗದೊಳಿರೆ—

ಅಪಗತರಾಜಕೀರನಿನದಂ ನಿಭೃತಾನ್ಯಭೃತಪ್ರಣಾದಮ
ಪ್ರಪದಿತಪತ್ರಪತ್ರಿಭವನಂ ಗತಷಟ್ಪದಕಾಕಳೀಕಮ
ತ್ಯಪಗತ ಪಾಕಸತ್ವಮಪಸಾರಿತ ಮಾರುತಮಾಗಿ ತಿಟ್ಟವಿ
ಟ್ಟುಪವನದಂತುಟಾದುದು ಬನಂ ಜಿನಚಂದ್ರತಪಃಪ್ರಭಾವದಿಂ ‖ ೬೪ ‖

ಅಂತು ಶಿಲಾಪಟ್ಟದೊಳ್ ನಿರಂತರಂ ಸೂರ್ಯರಾತ್ರಿಪ್ರತಿಮಾಪರಂ ಪರೆಯಂ ಪರ್ಯಾಯದಿಂದಮನುಷ್ಠಿಸುತ್ತುಂ—

ಮದನಹರಂ ತಪೋಗ್ರಹಣದಿಂದೆ ತಗುಳ್ದೆಡೆಮಾಡದಂತೆ ನಿಂ
ದುದಜೀನ(ನ)ಲ್ಪಕಾಲಕೃತಯೋಗನಿಮಿದಿರ್ಚೆ ನಿಮಿರ್ಚೆ ಮುಯ್ಪಿನೊಳ್
ಪುದಿದ ಕುರುಳ್ ಸಮೀರಣ ಸಮೀರಿತಮಳ್ಕೆಯ ಪೂತ ಕಿಂಕಿರಾ
ತದೊಳೆಱಗುತ್ತುಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಱುಗುಂ ॥ ೬೫ ॥

ಉದಯಾಸ್ತಮಯಗತಾರ್ಕಂ
ತದೀಯ ಮುನಿರಾಜಪೂಜಿತಛಾಯೆಯನಾ
ತ್ರಿದಶಪತಿರಕ್ಷೆಯಂ ಮೆ
ಟ್ಟದು ಮುಟ್ಟದು ವನ್ಯಮೃಗವನೇಚರನಿಕರಂ ॥ ೬೬ ॥

ಇಂತೀಕ್ರಮದಿಂ ಷೋಡಶವರ್ಷಾವಧಿವರಂ ತಪಸ್ತಾಪಮಂ ತಾಳ್ದಿಯುಂ ತಪನತಾಪದೊಳ್ ಪದ್ಮಂ ಕೊರಗದಂತೆ ಪರಮೌದಾರಿಕಶರೀರಂ ಕೊರಗದಿರೆ ಮತ್ತಮೊಂದುದೆವಸಂ ತದ್ವನ ಮಧ್ಯಸ್ಥಿತಂ ಯೋಗದೊಳ್ [ನಿಂದಿರೆ]

ಕದಳೀಘಾತಂ ಜೀವ
ಕ್ಕೆ ದುರಿತದಿಂದಕ್ಕುಮೆಂಬುದರ್ಹನ್ಮತಮಂ
ತದು ಮಾಣ್ದರೆ ಬೇರ್ವೆರಸಾ
ದುದು ಜಿನನೀಘಾತಿಗಳ್ಗೆ ಕದಳೀಘಾತಂ ॥ ೬೭ ॥

ತದನಂತರಮಾ ಮುನಿವೈರೋಚನನುಮಪ್ಪ ಮುನಿರಾಜಂಗೆ [ಕೇವಳ ಜ್ಞಾನಂ ಪುಟ್ಟಲ್]

ಭವದಿಂದಂ ಭವದೊಳ್ ವ್ರತಂ ದ್ವಿವಿಧಮಾಪ್ತೋದ್ದಿಷ್ಟಮುದ್ವೀರಣಂ
ತ್ರಿವಿಧಂ ಬೋಧಿ ಚತುರ್ವಿಧಂ ನಮಿತಚಾರಿತ್ರಂ ವರಂ ಸೂಕ್ತಿ ಪಂ
ಚವಿಧಂ ಪ್ರಾಣ್ಯಭಿರಕ್ಷೆ ಷಡ್ವಿಧಮುದಾತ್ತೋದ್ವಿಕ್ರಮಾವಾಪ್ತಿ ಸ
ಪ್ತವಿಧಂ ಪೇಟ್ವ ತಮೋಧಿಯಂ ಕಿಡಿಸಿದಂ ಸೌಜನ್ಯಕಂದಾಂಕುರಂ ॥ ೬೮ ॥

## ೧೧. ನಾಡಾಡಿಯೆ ಶಾಂತಿನಾಥ ಜಿನಚಂದ್ರ ಮುನೀಂದ್ರಂ

ಶ್ರೀ ಶಾಂತೀಶಂ ತ್ರಿಜಗದ
ಧೀಶಂ ಕೇವಳವಿಬೋಧವಿನಿರೋಧಪದಾ-
ರ್ಥಾಶೇಷರೂಪನಮರನ
ರೇಶಸಭಾವೃತನುದಾತ್ತದಿವ್ಯನಿಧಾನಂ ॥ ೧ ॥

ದ್ವಾದಶಗಣಪರಿವೇಷ್ಟಿತನುಮಷ್ಟ ಮಹಾಪ್ರಾತಿಹಾರ್ಯವಿಭವೌದಾರ್ಯನುಂ ಚತುರಾಸ್ಯನುಮಹಮಿಂದ್ರನಮಸ್ಯನುಂ, ಚರಾಚರೋಪಾಸ್ಯನುಮಷ್ಟಾದಶದೋಷದೂರನುಂ, ಪರಮೌದಾರಿಕ ಶರೀರನುಂ, ಅನಂತಚತುಷ್ಟಯಾವಷ್ಟಂಭನುಂ ಭಗವತ್ಸ್ವರೂಪನಿರೂಪಿತನುಂ, ಜನ್ಮನಿಗಳವಿಗಳಿತಾತ್ಮನುಮಾಗಿ—

ಹರಿಪೀಠದ ಮೇಗೆ ನಿಜ
ಸ್ವರೂಪಮಿರೆ ನೆಗೆದ ನಾಲ್ಕು ಬೆರಲಳವಿಯೊಳಾ
ಪರಮೇಶ್ವರನಘವಿಘಟನ
ಕರನಾಪ್ತಾಗಮ್ಯಪದಾರ್ಥವಾಗಮೃತಮುಖಂ ॥ ೨ ॥

ಆ ಪರಮೇಶ್ವರಂ ಪ್ರಥಿತ ಷೋಡಶತೀರ್ಥಕರಂ ಸಚೋದ್ಯ ವಿ
ದ್ಯಾಪರಿಪಾಕಶಾಸನಸಭಾವಳಯಂ ಗಣನಾಥಯೂಥಮಂ
ಕ್ಷ್ಮಾಪಸಮೂಹಮಂ ತಿಳಿಪಲೊಪ್ಪುವ ದಿವ್ಯನಿನಾದದಿಂ ಜಗ
ದ್ವ್ಯಾಪಿ ಜಿನೇಂದ್ರಶಾಸನಮತಾಶ್ರಮಮಂ ವಿಗತಾಶ್ರಮದ್ವಯಂ ॥ ೩ ॥

[ತಿಳಿಪಲ್]—

ಜಿನಪತಿ ಕರ್ಮ ಪ್ರಕೃತಿಯ
ನನಘಂ ಸ್ಥೂಲಸ್ವರೂಪದಿಂ ಬೆಸಸೆ ಮನ
ಸ್ತನು ವಚನಂಗಳ್ ಸಂಗತ
ಮೆನೆ ತಂದೆಯಭಕ್ತ ಪುಣ್ಮಮಾರ್ಯರ್ ಕೇಳ್ದರ್ ॥ ೪ ॥

ತದನಂತರಂ—

ವಿಹರಣಕಾಲಮಿನ್ನೆನಗೆ ಬಂದುದಿದೆಂದು ಜಿನಂ ಜನಸ್ತುತಂ
ವಿಹರಿಸಲುದ್ಯಮಂಗೆಯಲೊಡಂ ನೆಱೆ ಪನ್ನೆರಡುಂ ಗಣಾಳಿ ಸ
ನ್ನಿಹಿತಪಧಾರ್ಜನಾ ಕಳಕಳಂ ದಿವಿಜೇಂದ್ರ ಪುರಸ್ಸರಂ ನಭೋ
ವಿಹಿತಗತಿಸ್ವರೂಪಮೆಸೆದೊಪ್ಪಿದುದೊಪ್ಪವಗಣ್ಯಪುಣ್ಯದಿಂ ॥ ೫ ॥

ಗಗನಮುರ್ವಿಗೆ ಯೋಜನದ್ವಯಮಾಗೆ ಜೈನಪದದ್ವಯಂ
ನೆಗೆಯೆ ಮುಂದಣವೇೞು ಪಿಂದಣವೇೞು ತಾವರೆಗಳ್ ಕರಂ
ಸೊಗಯಿಸಿರ್ಪಿನಮಂತವಂ ಜಿನನಂಘ್ರಿಗಳ್ ನಿಜಘಾತದಿಂ
ಸುಗಿಯೆ ಮೆಟ್ಟವೆ ಮುಟ್ಟದಾ ಚತುರಂಗುಳೋಪರಿಮಾರ್ಗದೊಳ್ ॥ ೬ ॥

ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ ನಾಲ್ಕುಂ ದೆಸೆಗಳೊಳಂ ನೂಱುಯೋಜನಪ್ರಮಾಣಾಂತರದೊಳಾವಜೀವಕ್ಕಂ ಪಸಿವು ಪಸವುಂ ಪ್ರಾಣವಧೆಯುಮಾಗದಿರೆಯುಂ, ಕುಸುಮಫಲಪರಿಣತಫಲದಾನಂಗಳಪ್ಪ ವನಸ್ಪತಿ ವೃಕ್ಷೌಷಧಿ ಗುಲ್ಮಂಗಳಪ್ಪನೋಕಹಜಾತಿಗಳಿಂ ವನ್ಯಧಾನ್ಯ ಫಲಗ್ರಾಮಂಗಳಪ್ಪ ಬೀಜಕಾಯಂಗಳಿಂ ಭಗವದಾಗಮನ ದರ್ಶನ ಹರ್ಷೋತ್ಕರ್ಷದಿಂ ಘನ ರೋಮಾಂಚಕಂಚುಕಿತಾಂಗಿಯಾ ಧರಾವನಿತೆಯುಂದಂಬೆತ್ತಿರೆಯುಂ, ನೀರದಮಾರ್ಗಂ ನಿರ್ನೀರದ ತುಷಾಪಾಂಸುಪಟಳಮಾಗೆಯುಂ ಸ್ವಾಭಾವಿಕ ಕರ್ಮಕ್ಷಯಜ ದೇವಕೃತಂಗಳೆಂಬ ಮೂವತ್ತು ನಾಲ್ಕುಮತಿಶಯಂಗಳೊಳೊಂದುಗುಂದದಿರೆಯುಷ್ಟಪ್ರಾತಿಹಾರ್ಯಂಗಳ್ ನಿಂದೆಡೆಯೊಳ್ ನಿರಂತರಮಿರೆಯಿರೆ—

ಚಾರುನೀರದಮಾರ್ಗದೊಳ್ ನಿಯತಂ ಪ್ರಶಸ್ತವಿಹಾರವಿ
ಸ್ತಾರಮಾಗೆಯುಮಾ ಜಗತ್ರಯವಂದಿತಾಂಘ್ರಿವಿಹಾರದೊಳ್
ಮೇರುಜಂಗಮಮಾದವೋಲ್ ನಡೆದಂ ಸಧರ್ಮಪವಿತ್ರ ಭೂ
ಭಾರಮಷ್ಟಮಭೂಮಿಭಾರಮಿದೆಂಬಿನಂ ಪರಮೇಶ್ವರಂ ॥ ೭ ॥

ಇಂದ್ರನಯನದ್ವಯಕ್ಕೆ ಜಿ
ನೇಂದ್ರನ ರೂಪಧಿಕಮಾಗೆ ಪಡೆದಂ ಸೌಧ
ರ್ಮೇಂದ್ರಂ ಸಾಸಿರಕಣ್ಣನ
ತೀಂದ್ರಿಯದರ್ಶನನಿದೇಂ ಜಿನಂ ಸುಂದರನೋ ॥ ೮ ॥

ಕನಕರುಚಿ ರುಚಿರವಿಂಶತಿ
ಧನುಃಪ್ರಮಾಣಾಂಗಮೆಸೆಯೆ ಗಗನವಿಹಾರಂ
ತನಗೊಪ್ಪೆ ವಿಹಾರಿಸಿಯುಂ
ಜಿನಚಂದ್ರನಘೌಘಶೇಷದೈನ್ಯದನಾದಂ ॥ ೯ ॥

ಅಮರಾನೀಕಮನೇಕಂ
ಕ್ರಮಯುಗವಿನ್ಯಸ್ತಮಸ್ತಕಂ ಬಳಸಿರೆ ವಿ
ಶ್ರಮಿಸುವವೋಲ್ ಧರ್ಮಕ್ಷೇ
ತ್ರಮುದಾವುದೆನೆ ಸಮವಸರಣದೆಡೆಯೆನೆ ನಡೆದಂ ॥ ೧೦ ॥

ಭವ್ಯಜನಶರಣಮಾದ ಸಮವಸರಣಗೋಭೂಮಿಯೊಳ್—

ಶ್ರವಣಾಮೃತಮೆನೆ ಧರ್ಮ
ಶ್ರವಣಂ ಮೃದುಮಧುರರುಚಿರಗಂಭೀರರವಂ
ಶ್ರವಣದಿನಾಱಿಸಿದಂ ವಿವಿ
ಧವಿನೇಯಮನಿಂತು ಶಾಂತಿಜಿನನಪವೃಜಿನಂ ॥ ೧೧ ॥

ಮತ್ತಂ ನಭೋಯಾನದೊಳ್ ಕಿಱಿದು ಪೊೞ್ತಾಗೆಯುಂ ಸಭಾಸದನ
ದೊಳ್ ಪಿರಿದು ಪೊೞ್ತುಪೋಗೆಯುಂ, ಗಗನವಿಹಾರಮಲ್ಪಮೆನೆಯುಂ, ನಗರ

ಮನೋಹರವ್ಯಾಪಾರಮನಲ್ಪಮೆನೆಯುಂ, ವ್ಯೋಮಯಾನಂ ತುಚ್ಛಮೆನೆಯುಂ, ಗ್ರಾಮಯಾನಮತುಚ್ಛಮೆನೆಯೆುಂ, ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ—

ಆ ಗತರಾಗನಂ ಬಳಸೆ ಪನ್ನೆರಡುಂ ಗಣಮಭ್ರಶುಭ್ರ ತಾ
ರಾಗಣದಂದದಿಂದೆಸೆದುದೀ ಭರತಾವನಿ ಭೋಗಭೂಮಿ ಭೂ
ಭಾಗಿ ಸುಖಾಪ್ತಿಯಂ ಪಡೆದುದಷ್ಟಮಭೂಮಿ ಸಮೀಪಮಾಯ್ತು ಜೈ
ನಾಗಮಭಾಗಿ ಭವ್ಯಜನಕೇನುಪಶಾಂತಿಯೊ ಶಾಂತಿನಾಥನಾ ॥ ೧೨ ॥

ಮತ್ತಮಾ ಪರಮೇಶ್ವರನುತ್ತಮಾಗಣ್ಯಪುಣ್ಯಾತಿಶಯಮಂ ಪೇೞ್ವೊಡೆ
ಆಡುವನಿಂದ್ರನಂಘ್ರಿನತಿಗೆಂದೆಡೆಯಾಡುವನಿಂದ್ರನೋತು ಮಾ
ತಾಡುವನಿಂದ್ರನಕ್ಷಿಯುಗಮೆಯ್ದುದೊಡಕ್ಷಿ ಸಹಸ್ರಸಂಖ್ಯೆಯಿಂ
ನೋಡುವನಿಂದ್ರನಿಂದ್ರನತಿಯುದ್ಧತಮಾಡುವನಾ ಜಿನೇಂದ್ರನಾ
ಷೋಡಶತೀರ್ಥನಾಥನೊರೆಗಂ ದೊರೆಗಂ ದೊರೆಯಾರಘಾಂತಕರ್
॥ ೧೩ ॥

ಭರತಕ್ಷೇತ್ರದಯೋಧ್ಯಾ
ಪುರಸತ್ಪ್ರತಿಬದ್ಧಮಪ್ಪ ಮಧ್ಯಮಖಂಡಂ
ಸ್ಫುರಿಯಿಸೆ ಧರ್ಮರಸಾಯನ
ಸರಿತ್ಪ್ರವಾಹದಿನಜಂ ವಿಹಾರಿಸುವೆಡೆಯೊಳ್ ॥ ೧೪ ॥

ಬಾಲಂಗಬಲೆಗೆ ಬಲಗೋ
ಪಾಲಕವರ್ಗಕ್ಕೆ ಸಗ್ಗದಪವರ್ಗದ ಮಾ
ರ್ಗ್ಯಾವಲಂಬನಮಾದುದು ತ
ತ್ರೈಲೋಕ್ಯ ಶರಣ್ಯಸೇವ್ಯದಿವ್ಯಧ್ವನಿಯಿಂ ॥ ೧೫ ॥

ಅಂತು ವಿಹಾರಿಸುತ್ತುಮಭವಂ ಭವಸಂಭವದೋಷದೂಷಣೋ
ದಂತಮನಂತಸೌಖ್ಯನಿರತಂ ಭರತಾವನಿಗಷ್ಟಮಾವನೀ
ಭ್ರಾಂತಿಯುತಂ ಕರಂ ಜಿನನನಾಗತಭೂತ ಭವತ್ಸಮಸ್ತ ವ
ಸ್ತ್ವಂತರಭಾಷಿ ತೋಷಿಸಿದನಿಂದ್ರ ನರೇಂದ್ರ ಫಣೀಂದ್ರ ಲೋಕಮಂ ॥ ೧೬ ॥

ಅಂತು ಧರ್ಮಕ್ಷೇತ್ರಪವಿತ್ರೀಕರಣವಿಹಾರನಂತರಂ ಶಾಂತೀಶ್ವರನಕಲಂಕಾಚಾರಸಾರಂ ಸಮವಸರಣಾಗತ ಗಣನಾತೀತ ದ್ವಾದಶಗಣವಿನೇಯ ಜನಂಗಳಂ ನರನಾಕನಾಗಲೋಕಗಮನಕ್ಕೆ ಪರಸಿ ವಿಸರ್ಜಿಸಿ—

ಪುರುದೇವಂ ದಿವ್ಯಕೈಲಾಸಹೊಳಘಮಥನಂ ಸಾವೆಯೊಳ್ ವೀರನಾಥಂ
ಸ್ಥಿರಬೋಧಂ ಚಂಪೆಯೊಳ್ ಪೆಂಪೆಸೆದಿರೆ ವಸುಪೂಜಾತ್ಮಜಂ ನೇಮಿನಾಥಂ
ದೊರೆವೆತ್ತುಜ್ಜಂತದೊಳ್ ನೆರ್ಮಿದರುಱಿದ ಜಿನರ್ ಸಂದ
ಸಮ್ಮೇದದೊಳ್ ಮು
ಕ್ತಿರಮಾಧೀಶರ್ಕಳಿಂದಲ್ಲಿಗೆ ಮಿಗೆ ಬಿಜಯಂಗೆಯ್ದನಾ ಶಾಂತಿನಾಥಂ ॥ ೧೭ ॥

ಆ ಸಮ್ಮೇದಗಿರೀಂದ್ರದ
ಭಾಸುರ ಮಣಿಕನಕರಜಸಿಕತಳದೊಳ್
ಮಾಸಾವಧಿಯೆನೆ ಯೋಗಸ
ಮಾಸಾದಿತವಿಧಿಯಿನಮರೆ ಕಾಯೋತ್ಸರ್ಗಂ ॥ ೧೮ ॥

ಅಂತು ತಿಂಗಳ್ವರಮೆಡೆಯುಡಿಯದೆ ನಿಂದು—

ಅಱುವುದುಮಘಾತಿಗಳ್ ಪೂ
ವಱೆಗಱೆದುದು ನಭದಿನಮರ ಪಟಹಧ್ವನಿಗಳ್
ಮೊಱಗಿದುವೌದಾರಿಕ ತನು
ನೆಱಲಂತಿರೆ ನೆಲಕೆ ವಂದುದಘವಿಘಟನದಿಂ ॥ ೧೯ ॥

ಆಗಳ್ ಪರಿನಿರ್ವಾಣಕಲ್ಯಾಣಸೂಚನಾಚಿಹ್ನಂಗಳ್ ತಂತಮ್ಮ ಲೋಕಂಗಳೊಳ್ ನೆಗೞೆ ನೆಗಟ್ದ ಭವನಾಮರವ್ಯಂತರ ಜ್ಯೋತಿಷ್ಕ ಕಲ್ಪವಾಸಿ ದೇವನಿಕಾಯಂ ವಿವಿಧರ್ಚನಾಸಮಗ್ರಾಗ್ರಹಸ್ತರಾಗಿ ಬಂದು ಬಲವಂದು ನಿಂದು ತಮ್ಮ ತಂದರ್ಚನೆಗಳಿಂದ ಜಿನನಾಥಶರೀರಮನರ್ಚಿಸಿರ್ದು ಕಿಱಿದು ಬೇಗದಿಂ—

ಬೆಸಸೆ ಬೆಸನಂ ಸೌಧರ್ಮೇಂದ್ರಂ ಫಣೀಂದ್ರಸುರೇಂದ್ರರಾ
ರ್ದೊಸೆದು ಮಕುಟಾಯತ್ತಾಗ್ನಿಸ್ಫಾರದಿಂ ಜಿನದೇಹಮಂ
ಭಸಿತಮಯಮಪ್ಪನ್ನಂ ಸಂಸ್ಕಾರಿಸಿರ್ದು ತ್ರಿಪುಂಡ್ರಮಂ
ನೊಸಲೊಳಿಡೆ ತಾನಿಂದ್ರಂ ತಾಮಿಟ್ಟರಗ್ನಿಕುಮಾರರ್ ॥ ೨೦ ॥

ತದನಂತರಂ-

ಅಮರಸಮಾಜಂ ತದ್ಭ
ಸ್ಮಮನಂಗೋಪಾಂಗನಿಕಟತಟದೊಳ್ ಪೂಸಿ
ರ್ದಿಮಗೆ ಜಿನಪತಿಯ ಮಹಿಮೆಯ
ಸಮಗ್ರ ಸಾಮಗ್ರಿಯಕ್ಕುಮೆಂದೊಡಗುಣಿದರ್ ॥ ೨೧ ॥

ಧರ್ಮಾನುರಾಗದಿಂ ಸೌ
ಧರ್ಮೇಂದ್ರಂ ಮಾಡೆ ಮತ್ತಿನಿಂದ್ರರುಮದನೇಂ
ನಿರ್ಮಿಸಿದರೊ ಜಿನಧರ್ಮದ
ಪೆರ್ಮೆಗೆ ರಾಗಿಸರೆ ಭವ್ಯರಜೀವಿನ ದಿವ್ಯರ್ ॥ ೨೨ ॥

ಅಂತು ಮೂವತ್ತಿರ್ವರಿಂದ್ರರುಮಾನಂದನೃತ್ಯಮನಾಡೆಯುಂ ಕಿನ್ನರರ್ ಕೊಳೆ ಪಾಡೆಯುಂ, ಅಮರತೂರ್ಯಂಗಳ್ ತಾಳಂಗಳೊಳ್ ಕೂಡೆಯುಂ, ಆಡಿ ಬಳಲ್ದಮರರೆಟ್ಟು ನೋಡೆಯುಂ, ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ-

ಪರಮಜಿನಶಿಷ್ಯರಂ ಗಣ
ಧರರಂ ಮಕುಟಾಗ್ನಿಯಿಂದಮಗ್ನಿಕುಮಾರರ್
ಸುರಪತಿಮತದಿಂದಂ ಸಂ
ಸ್ಕರಿಸಿದರರ್ಹತ್ಸ್ವರೂಪಮೆಂದತಿಮುದದಿಂ ॥ ೨೩ ॥

ಆ ಸಮಯದೊಳಂದರ್ಹ
ಚ್ಛಾಸನಬದ್ಧ ಪ್ರಸಿದ ಭವಸಂತತಿಯಂ
ಭಾಸುರ ಕುಳಿಶದೆ ಬರೆಯಿಸಿ
ವಾಸವನೆಜಗಿದನದಕ್ಕೆ ಭಕ್ತಿಯ ಭರದಿಂ ॥ ೨೪ ॥

ಅಭವಂಗೆ ಕಾಲಲಬ್ಧಿಯ
ವಿಭವಂ ದೊರೆಕೊಂಡ ಭವದಿನರ್ಹಲ್ಲಕ್ಷ್ಮೀ
ಪ್ರಭುತೆ ವರಂ ಬರೆಯಿಸಿ ಭ
ಕ್ತಿಭಾರಮಂ ಸಫಲಮೆನಿಸಿ ನಿಜಿಸಿದನಿಂದ್ರಂ ॥ ೨೫ ॥

ಮತ್ತಮಾ ಸರ್ವಗೀರ್ವಾಣನಾಥನಕ್ಷೂಣವಿಶೋಧಿಪರಿಣಾಮಸಂತ ಭೋಗಂ ತಮಗಮುಳ್ಳುದಱಿಂದಂ ಶಚೀಮಹಾದೇವಿಯುಂ, ಲೋಕಪಾಲರುಂ ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ, ದಕ್ಷಿಣೇಂದ್ರರುಮಯ್ದಣೂ ತ್ತರೆಗಳೊಳ್ ಮಧ್ಯಮವರ್ತಿಯಪ್ಪ ಸರ್ವಾರ್ಥಸಿದ್ಧಿಯಹಮಿಂದ್ರರುಂ–

ಭವವಲ್ಲೀದಳಫಲಮಾ
ಲವಿಷಯಮಂ ಪಱಿದು ಮುಱಿದು ಕುಡಿಯಂ ಬಂದಾ
ದಿವದಿಂದಂ ಮುಕ್ತಿವಧೂ
ವಿವಾಹಮಲ್ಲದೆ ವಧೂವಿವಾಹಮನೊಲ್ಲರ್ ॥ ೨೬ ॥

ಮೊದಲಿಂದ್ರಂಬೆರಸಿಂದ್ರರು
ಮುದಿತೋದಿತರಂತನಂತಸುಖತನುಗಳಫಾ
ಸ್ಪದ ತನುಹರರೆಂದೆಂದುಂ
ಮುದದಿಂ ಮುಕ್ತಿಯೊಳೆ ನಿಲ್ಲದಿರ್ಪರೆ ಸಿದ್ಧರ್ ॥ ೨೭ ॥

ಇಂತು ಚರಾಚರೈಕಸುಖಕಾರಣನಂ ದಿವಿಜರ್ ಚತುರ್ವಿಧರ್
ಶಾಂತಿಜಿನೇಂದ್ರನಂ ನೆರೆದಹರ್ನಿಶಮೋಲಗಿಸುತ್ತುಮಿರ್ದು ಕಾ
ಲಾಂತದೊಳಾ ಜಿನಂ ವೃಜಿನಮಂ ತನಿಸುತ್ತೆ ನಿರಾಸ್ರವಂ ತ್ರಿಲೋ
ಕಾಂತಮನೆಯ್ದೆ ತಾಮುಮಿರದೆಯ್ದಿದರಾತ್ಮನಿಕೇತನಂಗಳಂ ॥ ೨೮ ॥

ಮತ್ತಮಾ ಜಿನೇಂದ್ರನ ಪರಮಚರಮೌದಾರಿಕ ಶರೀರಸಂಸ್ಕಾರಭೂಮಿ ಪ್ರದೇಶಕ್ಕೆ ಕಾಲತ್ರಯನಿಯಮಮಂ ತಪ್ಪದೆ ಕರಣತ್ರಿತಯ ಶುದ್ಧಿಪುರಸ್ಸರಂ ದ್ರವ್ಯಭಾವನಾರ್ಚನಾ ಸಮೇತಂ–

ಇಂದ್ರರ್ ಬಂದೆಱಗುವರಹ
ಮಿಂದ್ರರ್ ತಮ್ಮಿರ್ದ ನೆಲೆಯೊಳಿರ್ದೆಱಗುವರ
ಗ್ನೀಂದರ್ ಸೊಡರಿಂದೆಱಗುವ
ರೇಂ ದ್ರವ್ಯದ ಭಾವದರ್ಚನಾವಿಧಿ ಪಿರಿದೋ ॥ ೨೯ ॥

ಈಷತ್ಪ್ರಾಗ್ಭಾರಮೆಂಬೆಂಟನೆಯ ನೆಲನುಮಂ ದಾಂಟಿ ತೀರ್ಥೇಶ್ವರಂ ನಿ
ರ್ದೋಷಂ ಮೇಗತ್ತ ಮೂಗಾವುದವೊಗೆದು ನಭೋವೀತನಾಗಿರ್ದನಾ ಸಂ
ತೋಷಕ್ಕಾನ್ವೈಭವಕ್ಕಾಮದರಹಿತಮುದಕ್ಕಾ ಸುಖಾವಾಪ್ತಿಗಾ ನಿ
ಶ್ಶೇಷಾಘೌಘಚ್ಛಿತ್ತಿಗಾಮೋಕ್ಷದ ಪದವಿಗದೇಂ ನೋಂತನೋ ಶಾಂತಿನಾಥಂ
|| ೩೦ ||

ಷೋಡಶತೀರ್ಥನಾಥಮುದನತ್ಪದ ಪಂಚಮಚಕ್ರವರ್ತಿ ತಾ
ನೀಡದಗಣ್ಯಪುಣ್ಯದಮನಂತನಿತಾಂತದ ಶಾಂತಿಕಾಂತೆಯೊಳ್
ಕೂಡಿದ ಕೂಟದಗ್ಗಳದ ಮೋಕ್ಷದ ದೀಕ್ಷೆಗೆ ನೋಂತ ಪೆಂಪು ನಾ
ಡಾಡಿಯೆ ಶಾಂತಿನಾಥಜಿನಚಂದ್ರಮುನೀಂದ್ರನದೇಂ ಕೃತಾರ್ಥನೋ
|| ೩೧ ||

ಜಿನಚಂದ್ರಂ ಕೃತಿನಾಥ [ನಾದನವನುಂ ತಾಂ] ಶಾಂತಿನಾಥಂ ಪುರಾ
ತನಕಾವ್ಯಂಗಳುಮಿಾಗಳಾದ ಕುಕಥಾಕಾವ್ಯಂಗಳುಂ ಪೋಲ್ವುವಿ
ಲ್ಲ ನಭೂತೋ ನಭವಿಷ್ಯತಿಕ್ರಮಮುದಕ್ಕೀ ಪ್ರೌಢಿಯಂ ಮಲ್ಲಪ
ಯ್ಯನುಮತ್ಯುನ್ನತ ಪುನ್ನಮಯ್ಯನುಮಧೀಶಪ್ರೀತಿಯಂ ಮಾಡಿದರ್
|| ೩೨ ||

ದ್ವಿಜಕುಲತಿಲಕೋಪಮರ
ಗ್ರಜಾನುಜರ್ ಮಲ್ಲಪಯ್ಯ ಪುನ್ನಮಯ್ಯಂಗಳ್
ನಿಜಗುರುಪರೋಕ್ಷವಿನಯದಿ
ನಜಿತರ್ ಜಿನಚಂದ್ರಕೃತಿಗೆ ಕಲಶಮನಿಟ್ಟರ್ || ೩೩ ||

ವಿದಿತ ಭುವನೈಕರಾಮಾ
ಭ್ಯುದಯಕ್ಕಂ ಬೆಲೆಗಮಾವುದಂತರಮಿಂತೀ
ಪದಿನಾಲ್ಕುಂ ಭುವನಂಗಳ್
ಪದಿನಾಲ್ಕಾಶ್ವಾಸರಚನೆಗಂ ಬೆಲೆಯಕ್ಕುಂ || ೩೪ ||

ಶಾಂತಿಪುರಾಣದ ರೇಖೆಗ
ಳಂತುಱದಱಗವಿಯ ರೇಖೆ ಬರ್ಕುಮೆ ಶಶಭೃ
ತ್ಕಾಂತಿಗೆ ಮಿಂಚುಂಬುಱು ಸಮ
ನೆಂತಕ್ಕುಮೊ ದೊರೆಗಮೊರೆಗಮೆಣೆಗಂ ತೊಣೆಗಂ || ೩೫ ||

ಪನ್ನೆರಡಾಶ್ವಾಸಂಗಳ
ಬಿನ್ನಣದ ತೆರಳ್ಕೆಯಿಂಪಿನೊಳ್ಪಿನ ರಸಮುಂ
ಭಿನ್ನರಸಂಗಳ ಸಮುಕ
ಟ್ಟೆನ್ನೆಟ್ಟನೆ ಮೆಱೆಗುಮಱಯೆ ಶಾಂತಿಪುರಾಣಂ || ೩೬ ||

ನೇರಿದುವೆನಿಪೆರಡುಂ ಕವಿ
ತಾರಸಮಿಾ ಸವಣನೊರ್ವನೊಳ್ ನೆಲಸಿದುವಿಂ
ನಾರಾರ ಕವಿತ್ವಮುಮವಿ
ಚಾರಿತರಮಣೀಯಮಲ್ಲಿ ಪುರುಳರಸುವುದೇ || ೩೭ ||

ಎರದೆಡೆವರ್ಪವನುಂ ಮ
ಚ್ಚರಿಸುವನುಂ ನುಡಿಗೆ ಸಕ್ಕದಂ ಕನ್ನಡಮೆಂ
ಬೆರಡುಂ ಕವಿತೆಯ ಬಲ್ಮೆಗೆ
ಬೆರಲೆತ್ತಿದನಿಳೆಯೊಳೀಕುರುಳ್ಗಳಸವಣಂ || ೩೮ ||

ಕವಿತಾವಿಳಾಸಮುಂ ಚ
ಕ್ರವರ್ತಿ ತಾನಿರ್ದು ಮಚ್ಚಿ ಪೆಸರ್ಗೊಂಡೆರಡುಂ
ಕವಿತೆಯೊಳಮುಭಯಕವಿ ಚ
ಕ್ರವರ್ತಿಯೆನೆ ನೆಗಲ್ದನೀ ಕುರುಳ್ಗಳಸವಣಂ || ೩೯ ||

ಜಸಮಡಿಗಿಡೆ ಪೆಱರಿಂ ಪೇ
ಱಸದ ಪೆಸರ್ ಪೆಱರದೆನಿಸಿ ಪೆಱರಿಂದಂ ಸೋ
ದಿಸದ ಪೆಱಂಗಿನಿಸೆಡೆಗುಡ
ದಸಹಾಯಕವೀಶ್ವರಂ ಕುರುಳ್ಗಳಸವಣಂ || ೪೦ ||

ಎಸೆಯದೆ ಪೂೞ್ದು ಕೆಟ್ಟ ಪಱಿಗಬ್ಬಮನಾವಗಮೆಮ್ಮವೆಂದು ಬಾ
ಚಿಸಿ ಪೆಱರ್ಗಿತ್ತುದಲ್ಲದೆ ಬಹುಶ್ರುತಮೆಂಬಿನಮೆಕ್ಕಲಾವಣಂ
ಪೊಸೆಯಿಪ ಕಮ್ಮಯಿಪ್ಪ ಸಮಕಟ್ಟುವ ಬಿನ್ನಣಮಿಲ್ಲದಕ್ಕೆ ರಂ
ಜಿಸುವೆರ್ದೆಗೊಳ್ಳದೀಗಡಿನ ಕಬ್ಬಿಗವಂದಿಗಳೊಂದವಿಂದಿಗಳ್ ॥ ೪೧ ॥

ನೋಡಿರೆ ಪೇೞ್ವ ಮೂಱುವಱಿ ಭಾಷೆಗಳಂ ಪೆಱರರ್ಥಮಂ ಪೆಱರ್
ಮಾಡಿದ ದೇಸೆಯಂ ಪೆಱರ ಬಿನ್ನಣಮಂ ಪೆಱರೋಜೆಯಂ ಕಡಂ
ಮಾಡುವ ಕಳ್ವ ಕೊಳ್ವ ಖಳರಿರ್ಕೆಮ ಕಬ್ಬಿಗಗಳ್ಳರೆಂದು ಕೂ
ಸಾಡಿಸಬಾರದಕ್ಕರದ ರಾಜ್ಯದೊಳೀ ಕವಿಚಕ್ರವರ್ತಿಯಾ ॥ ೪೨ ॥

ಉಡುಗಿದುದೀಗಳೀಗಳಿನ ಕಬ್ಬದೊಳೊಟ್ಟಜೆ ಕೆಟ್ಟುದೀಗಡೀ
ಗಡಿನ ಕವಿವ್ರಜಕ್ಕೆ ಪದಸಂಚಯಮಂಚಿರಮಾದುದೀಗಡೀ
ಗಡಿನ ಕಥಾನ್ವಯಕ್ಕೆ ರಸಮುಂ ಪೊಸಗಬ್ಬಮಪೂರ್ವಮಾವುವು
ಳ್ಳೊಡಮವು ಪೇೞ್ದು ಸಾಧಿಸಿದ ಕಬ್ಬಮೆ ದಲ್ ಕವಿಚಕ್ರವರ್ತಿಯಾ
॥ ೪೩ ॥

ತತ್ವಮನಾದಿನಾಥನಮತದಿಂ ಸಿರಿಯಂ ನೃಪರಿಂ ಮಹಾಪ್ರಸಿ
ದ್ಧತ್ವಮನಗ್ಗದಕ್ಕರಿಗರಿಂ ಕವಿತಾರಸಮಂ ಸದರ್ಥವಾ
ದಿತ್ವಮನಿಂದ್ರನಂದಿಮುನಿಯಿಂ ಪಡೆದೊಂ ದೊರೆಯಾರ್ ಕವಿತ್ವ ವಾ
ದಿತ್ವಫಲಂ ಹಿ ಶಾಸ್ತ್ರಮೆನಿಪುನ್ನತಿಕೆಯಾ ಕವಿಚಕ್ರವರ್ತಿಯಾ ॥ ೪೪ ॥

ಸಕಲಜ್ಞಂ ಕವಿಚಕ್ರವರ್ತಿ ಜಿನೇಂದ್ರೇಂದ್ರಂಗೆ ಸದ್ಭಕ್ತಿಪೂ
ರ್ವಕದಿಂದಮ್ಮನಭಕ್ತನುಂ ತದನುಜಾತಂ ಪುನ್ನನುಂ ಪೇೞ್ವುದೆಂ
ದು ಕರಂ ಪ್ರಾರ್ಥಿಸೆ ಶಾಂತಿನಾಥನಕಥೆಯಂ ಲೇಸಪ್ಪಿನಂ ಸರ್ವದೇ
ವಕವೀಂದ್ರಂ ಬರೆದಂ ಬುಧರ್ ಪೊಗೞ್ವಿನಂ ತನ್ನಂ ಮಹೋತ್ಸಾಹದಿಂ
॥ ೪೫ ॥

# ಅರ್ಥಕೋಶ

## ಅ

ಅದಗುಂತಿ (೧.೨೦) ಅತಿಶಯ

ಅಗುರ್ಬು (೨.೩೮ವ) ಭಯ

ಅಂಕ (೯.೩೫ವ) ತೊಡೆ

ಅಂತರಾಸ್ಥ (೫.೨೪) ಆಕಾಶ

ಅಂಬುನಿಧಿ (೯.೭೮) ಸಮುದ್ರ

ಅಂಸ (೩.೨೨) ಭುಜ

ಅಘೌಘಚ್ಛಿದಂ (೧.೧) ಪಾಪಗಳ ಮೊತ್ತವನ್ನು ಛಿದ್ರಿಸುವವನು

ಅಜಗರಗರಳ (೬.೧೧) ಹೆಬ್ಬಾವಿನ ವಿಷ

ಅಣ್ಮುೞ (೪.೪೧) ಪೌರುಷಗುಂದು

ಅತಂದ್ರ (೪.೭) ಆಯಾಸವೇ ಇಲ್ಲದ

ಅಧ್ರುವ (೮.೪೫) ಅಶಾಶ್ವತ

ಅಧೋಗ (೩.೩೭) ನರಕ

ಅನವದ್ಯ (೮.೪೬) ದೋಷವಿಲ್ಲದ

ಅನುವರ (೪.೩೮ವ) ಯುದ್ಧ

ಅಪಗತ (೧.೧) ಕಳೆದುಹೋದ

ಅಪವರ್ಗ (೮.೩೬) ಮೋಕ್ಷ

ಅಪವೃಜಿನ (೧೧.೧೧) ಪಾಪಗಳಿಲ್ಲದವನು

ಅಭಿಧಾನ (೮.೩೩ವ) ಹೆಸರು

ಅಭಿಯೋಗ (೨.೩೩) ದೂರು, ಸುದ್ದಿ

ಅಭಿರಾಮ (೫.೪೯) ಮನೋಹರ

ಅಮರ್ಕೆ (೧.೨೨) ಬೆಸುಗೆ, ಸೇರಿಕೆ

ಅಮುಳ್ವೆತ್ತರಂತೆ (೧.೪) ಅವಳಿಜವಳಿ ಹೆತ್ತವರಂತೆ

ಅಯ್ಯಗಲಿ (೬.೨೪ವ) ಮುದಿವೀರ

ಅಲಂಪು (೮.೨೨) ಸಂತೋಷ, ಸುಖ

ಅವಗಯಿಸು (೯.೯) ತಿರಸ್ಕರಿಸು

ಅವಟೆಯ್ಸು (೯.೭೯ವ) ತಿಳಿಯಪಡಿಸು

ಅವಾರ್ಯ (೪.೪೩ವ) ತಡೆಯಲಾಗದ

ಅವಾರಿತ (೧೦.೧೩) ಅನಿರ್ಬಂಧಿತ

ಅವಿತಥ (೨.೮) ಸತ್ಯ

ಅಶನಿ (೪.೧೯, ೬.೧೦ವ) ಸಿಡಿಲು, ವಜ್ರಾಯುಧ

ಅಷ್ಟವಿಧಾರ್ಚನೆ (೪.೧೩ವ) ಜಲಾಭಿಷೇಕ, ಗಂಧಧಾರಣ, ಅಕ್ಷತಾರ್ಪಣ, ಪತ್ರಪುಷ್ಪಾರ್ಪಣ, ಧೂಪಸಮರ್ಪಣ, ದೀಪಸಮರ್ಪಣ, ನೈವೇದ್ಯಸಮರ್ಪಣ, ತಾಂಬೂಲಸಮರ್ಪಣ

ಅಸಿತ (೭.೨೧) ಕಪ್ಪು

ಅಳುಂಬ (೮.೪೪ವ) ಹೆಚ್ಚಿಗೆ, ಆಧಿಕ್ಯ

ಅಳುರ್ಕೆ (೧.೨೨, ೩.೬ವ) ಹರಡುವಿಕೆ, ಆವರಿಸುವಿಕೆ

ಅಳುಪು (೪.೩೯) ಆಸೆಪಡು

ಅಳ್ಳನಿಳ್ಳೆ (೨.೯ವ) ಅತಿ ಆಯಾಸ

ಅೞಲ್ (೬.೫೦) ದುಃಖ

## ಆ

ಆಟಂದೊಡೆ (೬.೧೯ವ) ಮೇಲೆ ಬೀಳಲು

ಆರ್ದ್ರಮಾಗೆ (೨.೨೦ವ) ಒದ್ದೆಯಾಗಲು

ಆಯತಿ (೧.೨೨) ಉನ್ನತಿ, ಗಾಂಭೀರ್ಯ

ಆಲವಾಲ (೯.೬೦) ಪಾತ್ರೆ

ಆವರ್ಜಿಸು (೨.೯ವ) ಸೆಳೆ

ಆವರ್ತ (೫.೫೩) ಸುಳಿ

ಆವಿಲೆ (೧೦.೨) ಕಲಕಿದ

ಆಶಾಂಬರ (೫.೬ವ) ದಿಗಂಬರ

ಆಳ್ವೆಸ (೯.೮೮ವ) ಸೇವಾವೃತ್ತಿ

ಕಿಪ್ಪುಡಿಯುಜಿರ್ (೯.೭೬) ಸಾಮಾನ್ಯ ದರ್ಜೆಯ ಬಾಗಿಲು ಕಾಯುವವರು
ಕಿಂಜಲ್ಕ (೬.೫೩) ಕೇಸರ
ಕುಡ್ಯ (೧೦.೨೮ವ) ಗೋಡೆ
ಕುಳ (೫.೪೯) ಕುಲ
ಕೂಪಾರಾರವ (೪.೩೫) ಸಮುದ್ರದ ಬಡಬಾಗ್ನಿಯ ಶಬ್ದ
ಕೂರಗೆವಿಂಡು (೭.೩೩) ಜಿಂಕೆಗಳ ಸಮೂಹ
ಕೆಮ್ಮಗೆ (೮.೪೬) ಸುಮ್ಮನೆ
ಕೆಯ್ (೭.೩೪) ಗದ್ದೆ
ಕೆಯ್ಗೆಯ್ (೫.೧೬) ಅಲಂಕರಿಸು
ಕೇರ್ (೧೦.೨೬, ೧೦.೫೭ವ) ಗೋಡೆ
ಕೇಳಿಸು (೯.೧೬ವ) ನರ್ತಿಸು
ಕೈತವ (೧೦.೩೨ವ) ಮೋಸ, ಕಪಟ
ಕೊಕ್ಕರಿಸು (೩.೨೬ವ) ಜಿಗುಪ್ಸೆಪಡು
ಕೊಡಂಕೆ (೩.೧೩) ಕಿವಿ
ಕೊಪ್ಪು (೩.೧೩) ಬಿಲ್ಲಿನ ತುದಿ, ಕಿವಿಯ ಆಭರಣ
ಕೋರಕ (೪.೧೨) ಮೊಗ್ಗು
ಕೋವರಚಕ್ರ (೩.೨೩) ಕುಂಬಾರನ ಚಕ್ರ
ಕೋಟ್ (೪.೨೨) ಹೊಡೆತ
ಕೋಟ್ಟೋದಪುದೆ (೯.೮೬) ವಶವಾಗುತ್ತದೆಯೆ

ಗ

ಗತವೃಜಿನ (೫.೨೦) ಪಾಪರಹಿತ
ಗಾಡಿ (೨.೩೨ವ) ಸೌದರ್ಯ, ಸೊಬಗು
ಗ್ರಾವ (೮.೩೫) ಶಿಲೆ
ಗುಹ್ಯಕ (೬.೧೪ವ) ಕುಬೇರ
ಗೆತ್ತು (೯.೬) ಭಾವಿಸಿ, ಭ್ರಮಿಸಿ
ಗೋಮಿನೀ (೨.೩೩) ಲಕ್ಷ್ಮಿ

ಘ

ಘಾತಿ (೧೦.೬೭) ಘಾತಿಕರ್ಮ

ಚ

ಚಂಚರೀಕ (೫.೫೯) ಕರಿಯ ತುಂಬಿ
ಚಾಮೀಕರ (೬.೮ವ) ಚಿನ್ನ
ಚಿಕುರಚಯೆ (೫.೫೯) ಮುಂಗುರುಳುಗಳನ್ನು ಒಳಗೊಂಡವಳು
ಚೂಳಿಕೆ (೯.೧೮ವ) ಅಗ್ರಭಾಗ

ಜ

ಜಂಭಾರಿ (೨.೩೩) ಇಂದ್ರ
ಜನ್ಯೆ (೫.೨೭) ವಿವಾಹವಾಗಲಿರುವ ಹೆಣ್ಣಿನ ಗೆಳತಿ
ಜರ (೬.೧೧) ಮುಪ್ಪು
ಜಲಕ್ಕನೆ (೯.೭೫) ಫಕ್ಕನೆ, ಬೇಗ
ಜಲರುಹತಂತು (೨.೭) ಕಮಲದ ನಾಳ
ಜವಂಜವ (೭.೨೨ವ) ಸಂಸಾರ
ಜಾಮಾತ್ರ (೪.೪೬) ಅಳಿಯ
ಜೈನೇಂದ್ರರೂಪ (೮.೧೭) ಸನ್ಯಾಸಿ

ಝ

ಝಷ (೨.೩೨) ಮೀನು

ಟ

ಟೆಂಠಣಿಸು (೯.೮೯) ಅತಿಕ್ರಮಿಸು

ತ

ತಕ್ಕೊರ್ಮೆ (೬.೪೮) ಯೋಗ್ಯವಾದ ಪ್ರೀತಿ
ತಗುಳ್ (೫.೬೩) ಅಟ್ಟು
ತಗುಳ್ಪು (೩.೨೪) ಸಂಬಂಧ

ತಳ್ಳಂಕು (೯.೮) ಭೀತಿ, ದಿಗ್ಭ್ರಾಂತಿ, ಚಿಂತೆ
ತಿರಿಕಲ್ (೪.೨೧) ಅಣ್ಣೆಕಲ್ಲು
ತಱಿಂಬು (೨.೪೫) ಸನ್ನೆಕೋಲು (?)
ತಱುಸಂದು (೨.೫೪ವ) ನಿಶ್ಚಯಿಸಿ
ತವು (೪.೭) ಕುಂದು, ಕ್ಷೀಣವಾಗು
ತಾರಕ (೬.೨ವ) ನಕ್ಷತ್ರ
ತ್ರಾಸಿಸು (೩.೨೯) ಹೆದರಿಸು, ನಿವಾರಿಸು
ತಿಗ್ಮಾಂಶು (೩.೨೨) ಸೂರ್ಯ

ದ

ದಯಿತ (೮.೪೪) ಪ್ರಿಯಳು
ದಾಮು (೫.೬೭) ಮಾಲೆ
ದಿಂಕು (೩.೧೩) ಚಿಮ್ಮು
ದೀಧಿತಿ (೧೦.೨೯ವ) ಪ್ರಕಾಶ
ದುಕೂಲಾಂಶುಕ (೯.೭೬ವ) ನಯವಾದ ರೇಶ್ಮೆಬಟ್ಟೆ
ಧೃತ (೪.೪೫) ಹಿಡಿಯಲ್ಪಟ್ಟ
ದೇವಾಪಗೆ (೫.೫೩) ದೇವಗಂಗೆ
ದೇಸಿಗ (೪.೩೩) ಪರದೇಶಿ
ದೌವಾರಿಕ (೨.೭ವ, ೮.೪೪ವ) ಬಾಗಿಲು ಕಾಯುವವ
ದೊರೆಕೊಳೆ (೮.೪೬) ಪ್ರಾಪ್ತವಾಗಲು

ನ

ನಕ್ರ (೬.೨ವ) ಮೊಸಳೆ
ನಣ್ಪು (೪.೨೭ವ) ನಂಟು ಸಂಬಂಧ
ನಮೇರು (೨.೨೬) ಸುರಪುನ್ನಾಗವೃಕ್ಷ
ನಸೆಯ ಪೆರ್ಬಿಡಿ (೭.೧೫) ಕಾಮಾತುರತೆಯಿಂದ ಕೂಡಿದ ಹೆಣ್ಣಾನೆ
ನಾಗ (೫.೬೫) ಆನೆ
ನಾಡೆ (೯.೬೩ವ) ಚೆನ್ನಾಗಿ, ವಿಶೇಷವಾಗಿ
ನಾಚ್ (೬.೪೮) ನಾಚಿಕೆ
ನಿಕಾಸು (೪.೧೨) ಅಧಿಕ
ನಿರ್ಗ್ರಂಥ (೭.೬೦ವ) ಸನ್ಯಾಸ
ನಿಗುಂಬಿಸಿ (೯.೧೬ವ) ಒಂದೆಡೆ ಸೇರಿ
ನಿಜಾಹಿತೋಷ್ಣಂ (೧.೩) ತನ್ನ ಶತ್ರುಗಳಿಗೆ ಬೆಂಕಿಯಂತಿರುವವನು
ನಿರ್ಝರ (೫.೪೬) ಬೆಟ್ಟದಿಂದ ಇಳಿಯುವ ಪ್ರವಾಹ
ನಿದಾಘ (೭.೪೫ವ) ಬೇಸಗೆ
ನಿದಾನ (೭.೪೩) ಕಾರಣ (?)
ನಿರ್ದಾಟಿಸು (೭.೨೨ವ) ದೇಶಾಂತರ ಕಳುಹಿಸು
ನಿಭೆ (೪.೧೩) ಸಮಾನಳು
ನಿಮಿತ್ತ (೪.೧೬) ಶಕುನ
ನಿಮಿತ್ತವಿದ (೬.೯) ಶಕುನಪಂಡಿತ
ನಿರ್ವರ್ತಿಸು (೮.೪೨ವ) ನೆರವೇರಿಸು, ಮಾಡು
ನಿರ್ವೇದ (೮.೪೬) ವೈರಾಗ್ಯ
ನಿಷಾದಿ (೫.೬೫) ಬೇಡತಿ
ನಿಸ್ತ್ರಿಂಶ (೩.೨೬ವ) ಕ್ರೂರ
ನೀಪಕುಲ (೫.೩೭) ಕದಂಬವಂಶ
ನೆಱಿ (೩.೨೧ವ) ಮರ್ಮಸ್ಥಾನ
ನೆಱನ್ (೨.೩೭ವ) ಸಂದರ್ಭ (?)
ನೆಲ್ಲುಂಮೋರು (೯.೮೬) ಬತ್ತ ಮೊಸರು
ನೇಱು (೯.೮೬) ತೂಗಿನೋಡಿ
ನೈಮಿತ್ತಿಕ (೪.೧೫) ಶಕುನಿಗ

ಪ

ಪಕ್ಕುವೆತ್ತಿ (೭.೩೮) ಅನುಕೂಲ ಸಮಯ ನೋಡಿ
ಪಟ್ಟೆಸೂತ್ರ (೪.೨೭ವ) ರೇಶಿಮೆ ವಸ್ತ್ರದ ನೂಲು
ಪಡಲಿಗೆ (೯.೭೯) ಹರಿವಾಣ
ಪಡಿಯಱಿ (೮.೪೪ವ) ಬಾಗಿಲು ಕಾಯುವವ

ಪತಿಂವರೆ (೫.,೩೬) ಸ್ವಯಂವರದಲ್ಲಿ ತನ್ನ ಗಂಡನನ್ನು ತಾನೇ ಆರಿಸಿಕೊಳ್ಳುವವಳು

ಪರ್ಪರಿಕೆ (೩.೧೧) ದಿಟ್ಟತನ

ಪಯಸದ್ಮ (೮.೭೫) ಕೊಳ

ಪಯೋಜೋಪಮೆ ವಕ್ತ್ರೆ (೮.೭೪) ಕಮಲ ದಂತೆ ಮುಖವುಳ್ಳವಳು

ಪರಾರ್ಘ್ಯ (೧.೬, ೨.೧೯ವ) ಶ್ರೇಷ್ಠವಾದ

ಪರಾಮೃಷ್ಟಂ ಮಾಡು (೧೦.೩೮ವ) ತೆಗೆದು ಹಾಕು, ಅಳಿಸಿ ಹಾಕು (?)

ಪರಿಕಲಿಸಿ (೯.೧೬ವ) ತುಂಬಿ

ಪರಿಚ್ಛೇದ (೪.೩೯ವ) ಮೇರೆ, ಗಡಿ

ಪಱಿಗಾಂಪ (೯.೮೫) ವಯಸ್ಸಾದ ದಡ್ಡ

ಪಱಿಮಱೆವುಮಾದ (೪.೨೭ವ) ಹಳೆಯದಾದ, ಮರೆತುಹೋದ

ಪಾಗುಡ (೨.೯ವ, ೪.೨೯ವ) ಕಾಣಿಕೆ

ಪಾಟಳ (೫.೩೯) ಎಳೆಗೆಂಪಿನ ಬಣ್ಣ

ಪಾಡಾದ (೨.೩೨ವ) ಹೋಲಿಕೆ ಪಡೆದ

ಪಾದಪ (೧೦.೫) ಮರ

ಪಾರಿಜಾತ (೨.೨೬) ಸಮುದ್ರಮಥನಕಾಲದಲ್ಲಿ ಹುಟ್ಟಿದ ವೃಕ್ಷ

ಪಾಱೇಱ (೮.೪೬) ತೊಲಗಿ ಹೋಗಲು

ಪ್ರತಿಪತ್ತಿ (೨.೯ವ, ೪.೩೦ವ) ಗೌರವ

ಪ್ರತ್ಯೂಷ (೬.೨ವ, ೮.೭೦) ಪ್ರಾತಃಕಾಲ

ಪ್ರವ್ರಜ್ಯ (೫.೫, ೮.೪೨ವ) ಪರಿವ್ರಾಜಕ

ಪುಟ್ಟು (೭.೩೪) ಮರದ ಸೌಟು

ಪೃಷ್ಠನಿಷ್ಠ (೪.೪೬) ಬೆನ್ನನ್ನು ಆಧಾರವಾಗುಳ್ಳ

ಪೆಱಂಗೆ (೧.೨) ಬೇರೆಯವನಿಗೆ

ಪೆರ್ವಡಿಯಱ (೯.೭೮) ಹಿರಿಯ ಪ್ರಹರಿ

ಪೆಳಱು (೬.೧೯ವ) ಹೆದರು

ಪೆಳ್ವಳಿಸು (೯.೬೩ವ) ನಡುಗು, ಪಿಳಿಪಿಳಿ ನೋಡು, ಭಯಪಡು

ಪೊಚ್ಚವಾಗೆ (೫.೨೭) ಒಡೆದುಹೋಗಲು

ಪೊಱಮಾಱ್ (೭.೨೫) ಓಡಿಹೋಗು

ಪೊಱೆ (೮.೨೧) ಭಾರ

ಪೊಂಪುಱ (೬.೫೦, ೮.೨೨) ಅಧಿಕ

## ಬ

ಬಧಿರ (೫.೧೬) ಕಿವುಡ

ಬಱುವ (೩.೨೦) ಸಹಾಯಶೂನ್ಯ

ಬಱಿವಱ (೮.೨೨) ಅತಿ ಸಮೀಪ

ಬಱಿವೆರಸು (೪.೨೯ವ) ವಂಶಪೂರ್ವಕವಾಗಿ

ಬಂಧುರ (೪.೨೩) ಮನೋಹರ

ಬಾಯ್ಕೇಳಿಸು (೯.೬೪, ೧೦.೩೩ವ) ಅಧೀನ ಮಾಡಿಕೊ

ಬಾರಿಸೆವಾರಿಸೆ (೩.೨೬ವ) ತಡೆಯಲು

ಬಾಲಾತಪ (೫.೪೬) ಎಳೆಯಬಿಸಿಲು

ಬೆಳ್ಳಾಳ್ (೯.೮) ದಡ್ಡ, ಬುದ್ಧಿಹೀನ

ಭ್ರಾಜಿತ (೧.೧೩) ಹೊಳೆಯುತ್ತಿರುವ

ಬಿಚ್ಚಳಿ (೮.೪೨ವ) ಅತಿಶಯ, ವಿಶೇಷ

ಬಿಟ್ಟಕ್ಕು (೪.೪೬) ಭೂಬಿಡು

ಬಿದ್ದಿನ (೫.೧೧) ನಂಟ, ಅತಿಥಿ

ಬಿಲ್ಲುಂಬೆಱಗು (೬.೪೯, ೯೭) ಅತ್ಯಾಶ್ಚರ್ಯ

ಬಿಸುಗೆ (೫.೬೧) ಸೇರಿಕೆ

ಭೀರುತ್ವ (೭.೩೮) ಹೇಡಿತನ, ಅಂಜುಬುರಕತನ

ಬೂತು (೪.೩೭ವ) ಆಳು

ಭೂಭೃತ್ (೪.೨೭) ರಾಜ

ಭೃಂಗಾರ (೮.೬೨ವ) ಕಳಶ, ಚಿನ್ನದಗಿಂಡಿ

ಬೆಸಗೊಳ್ವ (೭.೩೪) ವಿಚಾರಿಸಿಕೊಳ್ಳುವ

ಬೆಳ್ (೬.೨೫ವ) ಬುದ್ಧಿಹೀನ

## ಮ

ಮದೆವನ್ (೬.೫ವ) ಮದುಮಗ

ಮದೆವಳ್ (೬.೫ವ) ಮದುಮಗಳು

ಮಶಕ (೫.೫) ಸೊಳ್ಳೆ

ಮುಸಕ (೯.೫೭ವ) ವಿಜೃಂಭಣೆ
ಮಸೃಣ (೮.೮ವ) ಮಿದು
ಮಂದಾರ (೨.೨೬) ದೇವಲೋಕದ ಒಂದು ವೃಕ್ಷ
ಮಂಚೋಭಯಾಂತರ ವೀಥಿ (೫.೧೪ವ) ಸಿಂಹಾಸನಗಳ ಸಾಲುಗಳ ಮಧ್ಯದ ರಾಜಮಾರ್ಗ
ಮಾಂಕರಿಸು (೩.೧೩) ತಿರಸ್ಕರಿಸು
ಮಾಗಧ (೯.೭೫) ಸ್ತುತಿಪಾಠಕ
ಮಾರ್ದವ (೪.೫೩) ಕೋಮಲತ್ವ, ಮಾಧುರ್ಯ
ಮುಟ್ಟು (೪.೪೨) ಸಾಧನಸಾಮಗ್ರಿ
ಮುಡುಪು (೬.೪೭ವ) ಸತ್ತು
ಮುಯ್ಯು (೩.೨೨) ಭುಜ
ಮೂವಿಟ್ಟ (೮.೧೬) ಮೂರು ಬಗೆಯ ಬಿಟ್ಟ ಕೆಲಸ ಶೋಧನ, ವಹನ ಮತ್ತು ಅಪನಯನ ಎಂಬ ಮೂರು ಬಗೆ
ಮೆಚ್ಚಿಡೆ (೨.೫೭) ಬೆರಗಾಗಲು
ಮೊನೆ (೫.೩೩) ಯುದ್ಧರಂಗ
ಮೊರೆ (೬.೪೮) ಸಂಬಂಧ
ಮೊಱಗು (೬.೫೦) ಗುಡುಗು

## ಯ

ಯಾಮಿನೀವಿಯೋಗ (೮.೪೨ವ) ಇರುಳು ಕಳೆಯಲು

## ರ

ರವಳಿ (೪.೩೮ವ) ರಣವಾದ್ಯ
ರೋಚನಾಭೆ (೫.೫೧) ಗೋರೋಚನ ಗೌರವರ್ಣ

## ಲ

ಲಾಂಗಲಹಸ್ತ (೨.೭ವ)ನೇಗಿಲನ್ನು ಕೈಯಲ್ಲಿ ಹಿಡಿದಿರುವ–ಬಲದೇವ
ಲುಲತ್ತಟಿತ್ಪ್ರಭೆ (೪-೨೩) ಬಳ್ಳಿ ಮಿಂಚಿನ ಬೆಳಗು
ಲೇಖೆ (೪.೧೭) ದೇವತೆ

## ವ

ವಾಗುರೆ (೭.೨೪) ಬಲೆ
ವಾಸರ (೬.೪) ಸೂರ್ಯ
ವಿಧು (೩.೨೧) ಚಂದ್ರ
ವಿಷಮಬಾಣ (೪.೪೫) ಮನ್ಮಥ
ವಿಂಶತಿ (೭.೫೫ವ) ಇಪ್ಪತ್ತು
ವೃಷೇಂದ್ರ (೮.೬೬) ಗೂಳಿ
ವೇತ್ರ (೨.೨೮) ದಂಡ
ವೈಖಾನಸ (೭.೪೨) ಸನ್ಯಾಸಿ
ವೈಶ್ರವಣ (೬.೧೩ವ) ಕುಬೇರ
ವ್ಯಗ್ರ (೭.೧೭ವ) ಆಸಕ್ತ
ವ್ಯತೀತ (೪.೪, ೧೦.೩೭) ಆಗಿಹೋದ

## ಶ

ಶಲಭ (೩.೧೯) ಪತಂಗ
ಶಾತ್ರವ (೬.೨೬) ಶತ್ರು ಸಂಬಂಧವಾದ
ಶಾಸನೋಪನತರ್ (೧೦.೩ವ) ಆಜ್ಞೆಗೆ ಬಾಗಿದವರು
ಶೀರ್ಣಪಲ್ವಲ (೬.೨೩) ಬತ್ತಿದ ಹಳ್ಳ

## ಸ

ಸಬ್ಬವ (೭.೫೪) ಕೂಟ, ಸಭೆ, ಹಾಸ್ಯ
ಸಯ (೧೦.೬) ಚಲಿಸು
ಸಲ್ಲಕೀ (೪.೨೪) ಬೆಳವಲ
ಸಂತಾನಕ (೨.೨೬) ಕಲ್ಪವೃಕ್ಷ
ಸಂತ್ರಾಸಿ (೪.೪೦) ನಡುಕವನ್ನುಂಟುಮಾಡುವವನು
ಸಂಸೃತಿ (೪.೫೨) ಸಂಸಾರ
ಸಾಧ್ವಸ (೬.೩೪) ಭಯ

ಸೀರಪಾಣಿ (೧.೩೩; ಬಲದೇವ

ಸೀರಾಸ್ತ್ರ (೨.೧) ಹಲಾಯುಧ, ಬಲದೇವ

ಸೀರಿ (೩.೩೩) ಬಲದೇವ

ಸುಟ್ಟು (೪.೫೦ವ) ಬೆರಳುಮಾಡು

ಸೂರುಳಿಸಿ (೩.೩) ಪ್ರತಿಜ್ಞೆಮಾಡಿ

ಸೆಂವರದುಂಡಿಗೆ (೪.೫೦) ಸಿಂಧೂರದ ಮುಪ್ರೆ

ಸ್ತೋಕ (೮.೪೫) ಅಲ್ಪ

ಸೌಧರ್ಮಿಕೆ (೪.೩ವ) ಧರ್ಮಾನುಗುಣ ವರ್ತನೆ

ಸ್ಕಂದಾವಾರೇಭ (೧೦.೨) ಗುಂಪುಗೂಡಿದ ಆನೆ

ಸ್ಮಯ (೬.೪೧) ಗರ್ವ

ಸ್ತ್ರೈಣ (೪.೩೮ವ) ಸ್ತ್ರೀಸಂಬಂಧ

### ಹ

ಹರಿ (೪.೪೧) ಕುದುರೆ

ಹಸ್ತಾಮಳಕ (೮.೪೬) ಅಂಗೈಮೇಲಿನ ನೆಲ್ಲಿಕಾಯಿ

ಹ್ರದ (೬.೨ವ) ಮಡು

## ಜೈನ ಪಾರಿಭಾಷಿಕ ಪದಗಳು

ಅನಂತಚತುಷ್ಟಯ (೬.೨೫, ೯.೬೨) ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ

ಅಹಮಿಂದ್ರ (೮.೨೧ವ) ಕಲ್ಪಾತೀತ ವಿಮಾನಗಳ ದೇವತೆ

ಆರ್ಯಿಕೆ (೪.೫೩ವ) ವೈರಾಗ್ಯಹೊಂದಿ ಸನ್ಯಾಸ ಸ್ವೀಕರಿಸಿದ ಸಾಧ್ವಿ

ಆಸ್ರವ (೧೧.೨೮) ರಾಗದ್ವೇಷಾದಿಗಳಿಗೆ ಒಳಗಾದ ಜೀವದ ಮನ ವಾಕ್ ಕಾಯಗಳಲ್ಲಿ ಉಂಟಾಗುವ ಚಲನೆಗಳಿಂದ, ಜೀವದ ಶುಭಾಶುಭಕಾರ್ಯಗಳಿಂದ ಕರ್ಮ ಪುದ್ಗಲ ಹುಟ್ಟುತ್ತದೆ. ಈ ಕರ್ಮ ಜೀವದೊಳಗೆ ಹರಿದುಬರುವುದೇ ಆಸ್ರವ. ಇದರಲ್ಲಿ ಭಾವಾಸ್ರವ, ದ್ರವ್ಯಾಸ್ರವ ಎಂದು ಎರಡು ಬಗೆ.

ಕೇವಲಜ್ಞಾನ (೮.೧೧, ೮.೩೭) ಪರಿಶುದ್ಧವಾದ ಪೂರ್ಣವಾದ ಮತ್ತು ಸರ್ವವ್ಯಾಪಿಯಾದ ಅನಂತಜ್ಞಾನ.

ಗಂಧಕುಟಿ (೧.೪೯ವ, ೮.೧೪) ಸಮವಸರಣದಲ್ಲಿ ಜಿನೇಂದ್ರನು ಕುಳಿತು ಉಪದೇಶ ಮಾಡುವ ಮಧ್ಯಮಂಟಪ

ಘಾತ್ಯಾಘಾತಿ (೯.೭೨ವ೧೦.೬೭) ಕರ್ಮಗಳಲ್ಲಿ ಘಾತಿ, ಅಘಾತಿ ಎಂದು ಎರಡು ಬಗೆ. ಜೀವಕ್ಕೆ ಸಹಜವಾಗಿರುವ ಅನಂತಚತುಷ್ಟಯ (ಅನಂತಜ್ಞಾನ, ಅನಂತದರ್ಶನ,

ಅನಂತವೀರ್ಯ, ಅನಂತಸುಖ್ಯಗಳಿಗೆ ಕೇಡು ಮಾಡುವ ಕರ್ಮಗಳು ಘಾತಿ ಕರ್ಮಗಳು. ಹಾಗೆ ಘಾತಿಯನ್ನುಂಟುಮಾಡದ ಕರ್ಮಗಳು ಅಘಾತಿ ಕರ್ಮಗಳು. ಘಾತಿಕರ್ಮಗಳು ನಾಲ್ಕು: ೧ ಜ್ಞಾನಾವರಣೀಯ–ಅನಂತಜ್ಞಾನವನ್ನು ಮರೆಮಾಡುವ ಕರ್ಮ. ೨. ದರ್ಶನಾವರಣೀಯ–ಅನಂತ ದರ್ಶನವನ್ನು ಮರೆ ಮಾಡುವ ಕರ್ಮ ೩. ಅಂತರಾಯ–ಅನಂತವೀರ್ಯಕ್ಕೆ ತಡೆಮಾಡುವ ಕರ್ಮ ೪. ಮೋಹನೀಯ–ಜೀವವನ್ನು ಮೋಹಗೊಳಿಸಿ ಅದರ ಅನಂತ ಸುಖವನ್ನು ಮಸುಳಿಸುವ ಕರ್ಮ.

ಅಘಾತಿ ಕರ್ಮಗಳು ನಾಲ್ಕು: ೧, ಆಯುಃಕರ್ಮ–ಜೀವಿಯ ಆಯುಸ್ಸನ್ನು ನಿರ್ಧರಿಸುವ ಕರ್ಮ. ೨. ನಾಮಕರ್ಮ–ದೇಹ, ಎತ್ತರ, ಆಕಾರ, ಬಣ್ಣ ಮೊದಲಾದ ವ್ಯಕ್ತಿತ್ವ ಲಕ್ಷಣಗಳನ್ನು ಗೊತ್ತುಮಾಡುವ ಕರ್ಮ. ೩. ಗೋತ್ರ ಕರ್ಮ–ಜೀವಿ ಹುಟ್ಟುವ ಜಾತಿ ಕುಲ, ಗೋತ್ರಗಳನ್ನು ನಿರ್ಧರಿಸುವ ಕರ್ಮ ೪. ವೇದ ನೀಯಕರ್ಮ ಜೀವಿ ಅನುಭವಿಸುವ ಸುಖದುಃಖಗಳನ್ನು ನಿರ್ಣಯಿಸುವ ಕರ್ಮ.

ಮೇಲೆ ಹೇಳಿದ ಎಂಟೂ ಬಗೆಯ ಕರ್ಮಗಳನ್ನು 'ಕರ್ಮಾಷ್ಟಕ' ಎಂದು ಕರೆಯಲಾಗುವುದು.

ತ್ರಿಸಾಕ್ಷಿಕ (೮.೮) ಆತ್ಮ, ಇಂದ್ರ, ಸಿದ್ಧ–ಈ ಮೂವರು ಸಾಕ್ಷಿಯಾಗಿ

ತೃತೀಯಕಲ್ಯಾಣ (೮.೮೫, ೧೦.೫೯, ೬೩೫) ತೀರ್ಥಂಕರನಿಗೆ ಸಂಸಾರದ ಮೇಲೆ ಕೊಕ್ಕರಿಕೆಯುಂಟಾಗಿ ಸನ್ಯಾಸತ್ವ ಸ್ವೀಕರಿಸುತ್ತಾನೆ. ಬಂಧುವರ್ಗದವರನ್ನು ತ್ಯಜಿಸಿ ದೀಕ್ಷೆ ಸ್ವೀಕರಿಸಿ ತಪಸ್ಸಿಗೆ ತೊಡಗುತ್ತಾನೆ. ಮನೆಬಿಟ್ಟು ಹೋಗುವಾಗಿನ ಉತ್ಸವವನ್ನು ಪರಿನಿಷ್ಕ್ರಾಂತಿ ಮಹೋತ್ಸವ ಅಥವಾ ಪರಿನಿಷ್ಕ್ರಮಣ ಕಲ್ಯಾಣ ಎನ್ನುವರು. ತೀರ್ಥಂಕರ ಬದುಕಿನ ಪಂಚಕಲ್ಯಾಣಗಳಲ್ಲಿ ಇದು ಮೂರನೆಯದು.

ದ್ವಿತೀಯಕಲ್ಯಾಣ (೯.೩೫) ತೀರ್ಥಂಕರನ ಜನನವಾದಾಗ ಅವನ ಹುಟ್ಟನ್ನರಿತ ಸೌಧರ್ಮಾದಿ ಕಲ್ಪಗಳ ಇಂದ್ರರು ದೇವನಿಕಾಯದೊಡನೆ ಬರುತ್ತಾರೆ. ಇಂದ್ರಾಣಿ ಮಾಯಾರ್ಭಕನನ್ನು ಜಿನೇಂದ್ರನ ತಾಯಿಯ ಮಗ್ಗುಲಲ್ಲಿರಿಸಿ ನಿಜವಾದ ಜಿನನನ್ನು ಇಂದ್ರನಿಗೆ ತಂದುಕೊಡುತ್ತಾಳೆ. ಮೇರುಪರ್ವತದಲ್ಲಿ ಪಾಂಡುಕಶಿಲೆಯ ಮೇಲೆ ಪೂರ್ವಾಭಿಮುಖವಾಗಿ ಆ ಜಿನಶಿಶುವನ್ನು ಕೂರಿಸಿ ದೇವತೆಗಳು ಕ್ಷೀರ ಸಮುದ್ರದಿಂದ ತಂದ ಹಾಲಿನಿಂದ ಅಭಿಷೇಕ ಮಾಡುತ್ತಾರೆ. ಬಳಿಕ ತೀರ್ಥಂಕರ

ಶಿಶುವನ್ನು ತಂದೆತಾಯಿಗಳ ಬಳಿಗೆ ತಂದು ಒಪ್ಪಿಸಿ ನಾನುಕರಣ ಮಾಡಿ ಹೋಗು ತ್ತಾರೆ. ಇದು ತೀರ್ಥಂಕರನ ಬದುಕಿನ ಎರಡನೆಯ ಕಲ್ಯಾಣ. ಇದನ್ನು ಜನ್ಮಾಭಿಷೇಕೋತ್ಸವ ಅಥವಾ ಜನ್ಮಾಭಿಷೇಕ ಕಲ್ಯಾಣ ಎನ್ನುವರು.

ಪಂಚಾಶ್ಚರ್ಯ (೮.೬೧, ೧೦.೬೩೫) ದೇವದುಂದುಭಿ ಮೊಳಗುವುದು, ಹೂಮಳೆಗರೆಯುವುದು, ಚಿನ್ನದ ಮಳೆ ಸುರಿಯುವುದು, ದೇವತೆಗಳು ಪ್ರಶಂಸೆಮಾಡುವುದು, ತಂಗಾಳಿ ಬೀಸುವುದು–ಈ ಐದು ಬಗೆಯ ಆಶ್ಚರ್ಯಗಳು.

ಪರೀಷಹಗಳು (೩.೩೫) ಗುರಿಸಾಧಿಸುವಾಗ ಬರುವ ಹಸಿವು, ಬಾಯಾರಿಕೆ ಮೊದಲಾದ ಇಪ್ಪತ್ತೆರಡು ಬಗೆಯ ತೊಂದರೆಗಳೇ ಪರೀಷಹಗಳು. ಅವನ್ನು ಗೆಲ್ಲುವುದೇ ಪರೀಷಹ ಜಯ ("ಪರೀಷಹ ಜಯುಮೆ ಜಯಂ ತಪಕೆ ಬೇಜ್ ಕೋಡೆರಡೊಳವ್" ಎಂದು ಜನ್ನ ಯಶೋಧರಚರಿತೆಯಲ್ಲಿ ಹೇಳಿರುವನು.)

ಪಾರಣೆ (೮.೩೮೭) ಉಪವಾಸ ಕಳೆದ ಬಳಿಕ ಮಾಡುವ ಊಟ.

ಬಾಹ್ಯ ಅಭ್ಯಂತರ ಪರಿಗ್ರಹ (೭.೪೯೭) ಕರ್ಮನಿರ್ಜರೆಗೆ ಸಾಧನವಾದ ತಪಸ್ಸು ಎರಡು ರೀತಿಯದು: ೧. ಬಾಹ್ಯತಪಸ್ಸು. ೨. ಅಭ್ಯಂತರ ತಪಸ್ಸು. ಬಾಹ್ಯತಪಸ್ಸು ಆರುಬಗೆಯದು.

೧. ಅನಶನ ತಪಸ್ಸು: ಆಹಾರವನ್ನೇ ತೆಗೆದುಕೊಳ್ಳದೆ ಉಪವಾಸ ಮಾಡುವುದು (ಕೆಲವು ವೇಳೆ ಸಾಯುವವರೆವಿಗೂ ಅನಶನವ್ರತತೊಟ್ಟು ಮಡಿಯುತ್ತಾರೆ. ಇದಕ್ಕೆ 'ಸಲ್ಲೇಖನ' ಎನ್ನುವರು).

೨. ಅವಮೋದನ ತಪಸ್ಸು; ಹೊಟ್ಟೆ ತುಂಬುವುದಕ್ಕೆ ಎಷ್ಟು ಬೇಕೋ ಅದಕ್ಕಿಂತ ಕಡಿಮೆ ತಿನ್ನುವುದು.

೩. ವೃತ್ತಿಸಂಖ್ಯಾನ ತಪಸ್ಸು: ಯಾವುದೋ ಒಂದು ರೀತಿಯಲ್ಲಿ ದೊರೆತರೆ ಮಾತ್ರ ಭಿಕ್ಷೆ ಸ್ವೀಕರಿಸುವುದಾಗಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡು ತನ್ನ ಭಿಕ್ಷಾವೃತ್ತಿಯನ್ನು ಸಂಕೋಚಪಡಿಸಿಕೊಳ್ಳುವುದು.

೪. ರಸತ್ಯಾಗ ತಪಸ್ಸು: ಹಾಲು ತುಪ್ಪ ಮೊದಲಾಗಿ ತನಗೆ ಇಷ್ಟವಾದ ಪದಾರ್ಥಗಳನ್ನು ತಿನ್ನದೆ ಬಿಡುವುದು.

೫. ಕಾಯಕ್ಲೇಶ ತಪಸ್ಸು: ಬಿಸಿಲು, ಚಳಿ, ಮಳೆ, ಮೊದಲಾದವನ್ನು ಸಹಿಸಿ ಧ್ಯಾನ ಮಾಡುತ್ತ ದೇಹವನ್ನು ದಂಡಿಸುವುದು,

೬. ವಿವಿಕ್ತ ಶಯನಾಸನ ತಪಸ್ಸು: ಏಕಾಂತವಾಗಿ ಕೂರುವುದು, ಮಲಗುವುದು. ಅಭ್ಯಂತರ ತಪಸ್ಸು ಆರು ಬಗೆಯದು.

೧. ಪ್ರಾಯಶ್ಚಿತ್ತ—ಮಾಡಿದ ತಪ್ಪನ್ನು ಹಿರಿಯರೆದುರಿಗೆ ಒಪ್ಪಿಕೊಂಡು ಕ್ಷಮೆ ಬೇಡಿ ಅವರು ವಿಧಿಸಿದ ಶಿಕ್ಷೆಯನ್ನು ಸ್ವೀಕರಿಸಿ ಪರಿಹಾರ ಮಾಡಿಕೊಳ್ಳುವುದು.

೨. ವಿನಯ—ಜ್ಞಾನ, ದರ್ಶನ, ಚಾರಿತ್ರಗಳಲ್ಲಿ ತನಗಿಂತ ಮುಂದುವರಿದವರಿಗೆ ವಿನೀತನಾಗಿ ವಂದಿಸುವುದು.

೩. ವೈಯಾವೃತ್ಯ—ಮುಪ್ಪಡಸಿದ, ಅಶಕ್ತರಾದ, ರೋಗಿಷ್ಠರಾದ ಸಾಧುಗಳ ಸೇವೆ ಮಾಡುವುದು; ದೀನಾನಾಥರನ್ನು ಸೇವಿಸುವುದು.

೪. ಸ್ವಾಧ್ಯಾಯ—ಆಗಮಗ್ರಂಥಗಳನ್ನು ಓದಿಸಿ, ಕೇಳಿ, ತಿಳಿದು, ಮನನಮಾಡುವುದು.

೫. ವ್ಯುತ್ಸರ್ಗ—ಶರೀರದಲ್ಲಿ ಮಮತೆಯನ್ನು ಬಿಟ್ಟು ಉಪೇಕ್ಷೆಯಿಂದಿರುವುದು

೬. ಧ್ಯಾನ—ಇದರಲ್ಲಿ ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ ಹಾಗೂ ಶುಕ್ಲ ಧ್ಯಾನ ಎಂದು ನಾಲ್ಕು ಬಗೆ.

ಆರ್ತಧ್ಯಾನ: ಇಷ್ಟವಸ್ತು ಹೋಯಿತೆಂದೂ ಅನಿಷ್ಟವಾದುದು ಬಂದಿತೆಂದೂ ಭೋಗ ದೊರೆಯಲೆಂದೂ ದುಃಖ ಹೋಗಲೆಂದೂ ಸದಾ ಕೊರಗುತ್ತಿರುವುದು.

ರೌದ್ರಧ್ಯಾನ: ಹಿಂಸೆ ಮಾಡುವುದು, ಸುಳ್ಳಾಡುವುದು, ಕದಿಯುವುದು, ತನ್ನದನ್ನು ರಕ್ಷಿಸಿಕೊಳ್ಳಲು ವಿಶೇಷ ಪ್ರಯತ್ನಮಾಡುವುದು ಇವಕ್ಕಾಗಿ ರಾಗದ್ವೇಷಗಳಿಂದ ಸದಾ ಯೋಚಿಸುತ್ತಿರುವುದು.

ಧರ್ಮಧ್ಯಾನ: ಮೇಲಿನೆರಡನ್ನೂ ಬಿಟ್ಟು ಧರ್ಮವಿಷಯಗಳನ್ನು ಸದಾ ನೆನೆಯುತ್ತಿರುವುದು.

ಶುಕ್ಲಧ್ಯಾನ: ಧರ್ಮಧ್ಯಾನವನ್ನು ಮುಗಿಸಿ ಮುಕ್ತಿಹೊಂದುವುದನ್ನೇ ಕುರಿತು ಚಿಂತಿಸುವುದು.

ಆರ್ತಧ್ಯಾನ, ರೌದ್ರಧ್ಯಾನಗಳು ಕೆಟ್ಟವು ಸಂಸಾರ ಕಾರಣಗಳು. ಧರ್ಮಧ್ಯಾನ, ಶುಕ್ಲಧ್ಯಾನಗಳು ಒಳ್ಳೆಯವು ಮುಕ್ತಿಗೆ ಸಾಧನಗಳು.

ಪ್ರಾಯೋಪಗಮನ (೩.೩೬; ೭. ೫೧; ೮.೨೦,೨೧) ಸಲ್ಲೇಖನ, ಸಾಯುವವರೆವಿಗೂ ಉಪವಾಸ ಮಾಡುವುದು.

ಮನಃ ಪರ್ಯಯ (೮.೪೭; ೧೦.೬೩ವ) ಇತರರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವ ಜ್ಞಾನ.

ಸಮವಸರಣ (೮.೩೭ವ) ತೀರ್ಥಂಕರನು ಧರ್ಮೋಪದೇಶ ಮಾಡುವುದಕ್ಕಾಗಿ ಕುಬೇರನು ನಿರ್ಮಿಸಿದ ಮಂಟಪ.

ಒಪ್ಪೋಲೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೨ | ೩ | ಪರಾರ್ಥ್ಯ | ಪರಾರ್ಘ್ಯ |
| ೬ | ೧೯ | ಗೆಜ್ಜೆಯಿಂ | ಗಜ್ಜೆಯಿಂ |
| ೬ | ೯ | ಸಾಜಿಲ್ವೇಟಾಗಡೆ | ಸಾಜಿಲ್ವೇಟ್ದಾಗಡೆ |
| ೭ | ೧೦ | ವಾರಾ ಶಿವರಂ | ವಾರಶಿವರಂ |
| ೧೨ | ೯ | ಪೌಢರಿಲ್ಲ | ಪ್ರೌಢರಿಲ್ಲ |
| ೧೪ | ೧೪ | ಸ್ಫುರಿತ | ಸ್ಫುರಿತ |
| ೧೫ | ೨೬ | ಪರೂಂಪರೆ | ಪರಂಪರೆ |
| ೧೬ | ೧೬ | ಟೇಜ | ಪೇಟ |
| ೨೫ | ೨೪ | ವೇಟ್ಟುದು | ವೇಟ್ಟುದುಂ |
| ೨೭ | ೧೭ | ಪಾಟುದು ದೇವದೋಳ್, | ಪಾಟುದುದೇವದೊಳ್ |
| ೪೨ | ೧೯ | ಕೌನನಕುಂಜಂ | ಕಾನನಕುಜಂ |
| ೪೬ | ೧೭ | ಕೂಪಾರಾಶವಂ | ಕೂಪಾರಾರವಂ |
| ೪೮ | ೧೮ | ಚದುರಂಗ | ಛತುರಂಗ |
| ೫೦ | ೫ | ನವರಿದು | ನವನರಿದು |
| ೫೨ | ೭ | ವಿಹಿತಾಸ್ರವ | ಪಿಹಿತಾಸ್ರವ |
| ೭೩ | ೧೧ | ಕಾಯಲ್ವೇಟ್ಟುದು | ಕಾಯಲ್ವೇಟ್ಟುದು |
| ೭೫ | ೪ | ದಟಿ | ಪಟಿ |
| ೮೦ | ೧೧ | ಮೃಗೆಂದ್ರ | ಮೃಗೇಂದ್ರ |
| ೯೫ | ೫ | ಇಮಿರ್ಚಿ | ನಿಮಿರ್ಚಿ |
| ೯೫ | ೨೨ | ವಿಶ್ವಸಂದಿಯುಂ | ವಿಶ್ವನಂದಿಯಂ |
| ೯೮ | ೧೭ | ಬಿನ್ನಿಂ | ಬೆನ್ನಿಂ |
| ೧೦೦ | ೨೨ | ......... | ಲ್ಲಿಗೆ ದೇವಾಗಮುಮೆಲ್ಲಿತಲ್ಲಿಗೆ ಮಹಾ ಪೂಜಾಂಗದೊಳ್ಪೆಲ್ಲಿತ |
| ೧೦೩ | ೫ | ಪೊರಯ್ಯೂನ್ವರ್ | ಪ್ಪೊರಯ್ಯೂನ್ವರ್ |
| ೧೧೦ | ೧೩ | ತುಡುಗೆಮ | ತುಡುಗೆಯ |

